| | |
|---|---|
| ೧೬೧ | ಶ್ರೀ ದುರ್ಮತಿ ನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಭಾನುವಾರ ೫-೦೪-೧೯೮೧. |
| ೧೬೨ | ಶ್ರೀ ದುರ್ಮತಿ ನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಭಾನುವಾರ ೫-೦೪-೧೯೮೧. |
| ೧೬೩ | ಶ್ರೀ ದುರ್ಮತಿ ನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಭಾನುವಾರ ೫-೦೪-೧೯೮೧. |
| ೧೬೪ | ದುಂದುಭಿನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಶುಕ್ರವಾರ ೨೬-೩-೧೯೮೨ |
| ೧೬೬ | ೨೩-೬-೧೯೫೪ |
| ೧೬೮ | ೩೦-೬-೧೯೫೪ |

ಚಿಟ್ಟನೆ ಚೀರುತ ಘಟ್ಯಾಗಳುತಿರೆ
ದ್ರಿಷ್ಟಿಸಿ ನೋಡಿದಳು
ಪುಟ್ಟ ಕೂಸಿಗೆ ದ್ರಿಷ್ಟಿತಾಕಿದೆಯೆಂ–
ದಿಟ್ಟಳು ರಕ್ಷೆಯನು ೨

ಕಣಕಾಲಂದಿಗೆ ಘಲು ಘಲುರೆನ್ನುತ
ಕುಣಿ ಕುಣಿಯುತ ಬರಲು
ಕಮಲನಾಭ ವಿಠ್ಠಲನೆಂದರಿಯದೆ
ವಿನಯದಿ ಲಾಲಿಸಲು ೩

## ವಚನ

ಬಾರೊ ಬಾರೊ ಎನ್ನ ಮೋಹದರಗಿಣಿ ನಿನಗೆ
ನೀಡುವೆನು ಪಾಲ್ಬೆಣ್ಣೆ ಮೊಸರು ಕಜ್ಜಾಯಗಳು
ಹೋಳಿಗೆಣ್ಣೊರಿಗೆಯು ಕಡಬು ದೋಸೆಗಳನ್ನು
ಕಡಲ ಶಯನನೆ ನಿನಗೆ ಹಿಡಿಯ ಅವಲಕ್ಕಿಯನು
ಕಬ್ಬು ಕದಳೀಫಲವು ಕಡಲೆ ಗುಗ್ಗರಿ ಕೊಡುವೆ
ಕಡಲಶಯನನೆ ನೀನು ಪರರ ಮನೆಗಳಿಗೆಲ್ಲ
ಸಡಗರದಿ ಪೋಗದಿರು ಕಡೆಗೆ ದೂರುವರಯ್ಯ
ಬಿಡಿಮುತ್ತು ಬಿಗದ ಆಭರಣಗಳು ತೊಡಿಸುವೆನು
ಕಡೆದ ಹೊಸ ಬೆಣ್ಣೆ ಕಜ್ಜಾಯಗಳ ಕೊಡುವೆನು
ತಡಮಾಡದಲೆ ನಿನಗೆ ಒಡನೆ ಜೋಗುಳ ಪಾಡಿ
ತಡೆಯದಲೆ ಮನೆ ಕೆಲಸಗಳಿಗೆ ಪೋಗುವೆನು ಹರಿಯೆ

ಜೋ ಜೋ ಜೋ ಜೋ ಶ್ರೀ ಹರಿ ಮಲಗಯ್ಯ
ಜೋಗುಳ ಪಾಡುವೆನು ಪ

ಜೋ ಜೋ ಸುಜನರ ಪೊರೆಯುವ ದೊರೆ ನಿನ್ನ
ಲಾಲಿ ಪಾಡುತ ಮಲಗಿಸಿ ತೂಗುವೆನು ಅ.ಪ

ಕುಂದಣ ಬಿಗಿದ ತೊಟ್ಟಿಲ ನೋಡೊ
ಅದರೊಳು ಪವಡಿಸಲು

**(ನು ೫) ಕೆಟ್ಟ ದ್ವಿಜನ ಪೊರೆದಿ:** ಅಜಾಮಿಳನು ಬ್ರಾಹ್ಮಣನಾಗಿ ಹುಟ್ಟಿಯೂ ಮಡದಿಯನ್ನು, ತಂದೆ ತಾಯಿಯರನ್ನೂ ತ್ಯಜಿಸಿ, ಶೂದ್ರಸ್ತ್ರೀಯಲ್ಲಿ ವ್ಯಾಮೋಹಗೊಂಡು ದುರಾಚಾರದಲ್ಲಿ ತೊಡಗಿದ್ದನು. ತನ್ನ ಕೊನೆಗಾಲದಲ್ಲಿ ತನ್ನ ಮಗ ನಾರಾಯಣನನ್ನು 'ನಾರಗ'ಎಂದು ಕರೆಯಲು ಶ್ರೀ ಹರಿ ಒಲಿದು ಸದ್ಗತಿಯಿತ್ತನು.

**(ನು ೫) ವನವನವ ಚರಿಸಿ ಸುಟ್ಟ, ದಾಸಗೊಲಿದೆ:** ಸಂದರ್ಭ ಖಾಂಡವ ವನ ದಹನ.

**(ನು ೫) ಒಪ್ಪಿಡಿಯ ಗ್ರಾಸವ ಕೊಟ್ಟ ದ್ವಿಜ :** ಕೃಷ್ಣನ ಬಾಲ್ಯದ ಸಹಪಾಠಿ ಸುದಾಮ ಅಥವಾ ಕುಚೇಲ ಕಡುಬಡವ. ಒಮ್ಮೆ ಅವನು ಹೆಂಡತಿಯ ಒತ್ತಾಯದಿಂದ ಒಂದು ಸ್ವಲ್ಪ ಅವಲಕ್ಕಿಯನ್ನು ತೆಗೆದುಕೊಂಡು ಕೃಷ್ಣನ ಅರಮನೆಗೆ ಬಂದ. ಕೃಷ್ಣ ಅವನು ತಂದ ಅವಲಕ್ಕಿಯಲ್ಲಿ ಒಂದು ಹಿಡಿ ತಿಂದು, ಅವನಿಗೆ ಅಷ್ಟೈಶ್ವರ್ಯಗಳನ್ನು ನೀಡಿದ.

**(ನು ೫) ಅಟ್ಟಹಾಸದಿ ತಂದ ರುಕ್ಮಿಣಿಯ:** ಭೀಷ್ಮಕ ರಾಜನ ಮಗಳು ರುಕ್ಮಿಣಿ, ಇವಳ ಅಣ್ಣ ರುಕ್ಮಿ ಇವಳನ್ನು ಶಿಶುಪಾಲನಿಗೇ ಕೊಟ್ಟು ಮದುವೆ ಮಾಡಬೇಕೆಂದಿದ್ದ. ರುಕ್ಮಿಣಿ ಈ ವಿಷಯವನ್ನು ಪತ್ರ ಮುಖೇನ ಕೃಷ್ಣನಿಗೆ ತಿಳಿಸಿದಳು. ಗೌರೀಪೂಜೆಗೆಂದು ಊರಹೊರಗಿನ ಗುಡಿಗೆ ರುಕ್ಮಿಣಿ ಬರುತ್ತಿದ್ದಾಗ ಕೃಷ್ಣ ಅವಳನ್ನು ಅಪಹರಿಸಿ ಕರೆದೊಯ್ದು ಮದುವೆಯಾದ.

**(ನು ೬) ಶಿಲೆಯ ಸತಿಯ ಗೈದ :** ಗೌತಮರ ಶಾಪದಿಂದ ಶಿಲೆಯಾಗಿದ್ದ ಅಹಲ್ಯೆಯನ್ನು ಉದ್ಧಾರ ಮಾಡಿದ ಪ್ರಸಂಗ.

**(ನು ೬) ಬಲು ಕಪಿಗಳ ಕೂಡ್ದ :** ರಾಮಾಯಣದ ಸುಗ್ರೀವ ಸಖ್ಯದ ಪ್ರಸಂಗ.

**(ನು ೬) ಫಲದ ಎಂಜಲ ಸವಿದ :** ಶಬರಿ ಹಣ್ಣುಗಳನ್ನು ಕಚ್ಚಿ ರುಚಿನೋಡಿ ಸವಿಯಾದ ಹಣ್ಣುಗಳನ್ನು ರಾಮನಿಗಾಗಿ ಕಾದಿರಿಸಿದ್ದಳು. ಅದನ್ನು ರಾಮ ಅವಳ ಭಕ್ತಿಗೆ ಮೆಚ್ಚಿ ಸವಿದ.

**( ನು ೭) ಪುಟ್ಟ ಬ್ರಹ್ಮಚಾರಿ........... ತುಳಿದ :** ವಾಮನವತಾರದ ಕತೆ. ಬಲಿಚಕ್ರವರ್ತಿಯ ಗರ್ವವನ್ನು ಭಂಗಿಸುವುದಕ್ಕಾಗಿ ಹರಿಯು ಬ್ರಹ್ಮಚಾರಿಯ ವೇಷದಿಂದ ಅವನಲ್ಲಿಗೆ ಹೋಗಿ ಮೂರು ಹೆಜ್ಜೆ ಭೂಮಿಯನ್ನು ದಾನಬೇಡಿ ತ್ರಿವಿಕ್ರಮನಾಗಿ ಬೆಳೆದು, ಒಂದು ಹೆಜ್ಜೆಯಿಂದ ಭೂಮಿಯನ್ನು, ಮತ್ತೊಂದರಿಂದ ಆಕಾಶವನ್ನು ಅಳೆದು, ಮೂರನೇ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಪಾತಾಳಕ್ಕೆ ಮೆಟ್ಟುತ್ತಾನೆ.

ಸಂದೇಹವಿದೇತಕೆ ಸ್ವಾಮಿಯೆ ನೋಡೊ
ಅರಗಿಳಿಗಳು ನಿನ್ನ
ಚಂದದ ತೊಟ್ಟಿಲೊಳಾಡ್ವದು ನೋಡೊ
ಹಟ ನಿಲ್ಲಿಸಿ ಆಡೊ
ಸುಂದರಿಯರು ಆನಂದದಿಂದೆತ್ತುತ
ಚಂದದಿ ತಮ್ಮ ಮಂದಿರಕೆ ಕರೆದೊಯ್ವರೊ ೧

ಕಂದರ ಪಡೆದವರೆಲ್ಲರು ಎನ್ನ
ನಿಂದಿಸಿ ನಗುತಿಹರೊ
ಮಂದಿಗಳೆಲ್ಲರು ದೂರುವರೆನ್ನ
ಪವಡಿಸು ಮೋಹನ್ನ
ಸುಂದರಿ ಮಣಿಯರು ಕರೆವರು ನಿನ್ನ
ಸರಸವ ಬಿಡು ಚೆನ್ನ
ಸುಂದರಾಂಗ ನೀ ಚಂದದಿ ನಿದ್ರಿಸೆ
ಹಿಂಡುಗೋವುಗಳನು ಚಂದದಿ ಕಾಯುವೆ ೨
ನಂದಗೋಪನ ವರಸುಕುಮಾರ
ಸದ್ಗುಣ ಗಂಭೀರ
ಚಂದ್ರನ ತೋರುವೆ ಬಾರೈ ಧೀರ
ಗೋವರ್ಧನ ಧಾರ
ಚಂದದಿ ಯಮುನ ತೀರ ವಿಹಾರ
ಗೋಪೀಜನ ಜಾರ
ತಂದೆ ಶ್ರೀ ಕಮಲನಾಭ ವಿಠ್ಠಲ ನಿನ್ನ
ಸುಂದರ ಚರಿತೆಯ ಚಂದದಿ ಪಾಡುವೆ ೩

## ವಚನ

ದೇವದೇವನೆ ನಿದ್ರೆ ಸಾನುರಾಗದಿ ಮಾಡು
ದೀನ ವತ್ಸಲನೆ ಶ್ರೀಹರಿ ನಿನ್ನ ತೂಗುವೆನು
ಏನು ಕಾರಣದಿ ನಿದ್ರೆ ಬಾರದೋ ಶ್ರೀ ಹರಿಯೆ

**(ನು ೨) ವಿಶ್ವರೂಪ** : ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನ ಬಂಧುಗಳನ್ನು, ಗುರು ಹಿರಿಯರನ್ನು ಕಂಡು ತಾನು ಇವರನ್ನು ಎದುರಿಸಿ ಕೊಲ್ಲಲಾರೆ ಎಂದು ಬಿಲ್ಲನ್ನು ಕೆಳಗೆ ಹಾಕಿದಾಗ, ಕೃಷ್ಣ ಅವನಿಗೆ ವಿಶ್ವರೂಪ ದರ್ಶನ ಮಾಡಿಸಿ ಎಲ್ಲವೂ ತನ್ನೊಳಗೆ ಇರುವುದನ್ನು ತೋರಿಸುತ್ತಾನೆ.

**(ನು ೩) ವತ್ಸಾಸುರನ ಮಡುಹಿದೆ:** ಒಮ್ಮೆ ಕೃಷ್ಣ ಮತ್ತು ಬಲರಾಮ ತಮ್ಮ ಗೆಳೆಯರೊಂದಿಗೆ ಯಮುನಾ ನದಿಯ ತೀರದಲ್ಲಿ ಕರುಗಳನ್ನು ಮೇಯಿಸುತ್ತಿದ್ದಾಗ ರಾಕ್ಷಸನೊಬ್ಬ ಇವರನ್ನು ಕೊಲ್ಲುವ ಉದ್ದೇಶದಿಂದ ಕರುವಿನ ಆಕಾರ ತಾಳಿ, ಕರುಗಳ ಹಿಂಡನ್ನು ಸೇರುತ್ತಾನೆ. ಕೃಷ್ಣ ಇದನ್ನು ಗುರುತಿಸಿ ವತ್ಸಾಸುರನನ್ನು ಕೊಲ್ಲುತ್ತಾನೆ.

**(ನು ೩) ಕಾಡಕಿಚ್ಚನುಂಗಿ ಬೆಳೆದಿ:** ಒಮ್ಮೆ ಗೋಪಾಲಕರು ಗೋವುಗಳನ್ನು ಅಡವಿಯಲ್ಲಿ ಮೇಯಿಸುತ್ತಿದ್ದಾಗ ಕಾಡ್ಗಿಚ್ಚು ಆವರಿಸಿ, ದಿಕ್ಕು ತೋಚದ ಗೋಪಾಲಕರು ಕೃಷ್ಣನಿಗೆ ಮೊರೆ ಹೋಗುತ್ತಾರೆ. ಕೃಷ್ಣ ಯೋಗಶಕ್ತಿಯಿಂದ ಆ ಕಾಡ್ಗಿಚ್ಚನ್ನು ನುಂಗಿ ಗೋಪಾಲಕರನ್ನು, ಗೋವುಗಳನ್ನು ರಕ್ಷಿಸುತ್ತಾನೆ.

**(ನು ೩) ತಾಯಿಗೆ ಬಾಯೊಳ್ ಹೆಚ್ಚಿನ್ವಿಷಯ ತೋರ್ದಿ** : ಕೃಷ್ಣ ಮಣ್ಣುತಿಂದನೆಂದು ಯಶೋದೆ ಬಾಯಿ ತೆರೆಯಲು ಹೇಳಿದಾಗ ಆ ಎಂದು ಬಾಯಿ ತೆರೆದ ಕೃಷ್ಣನ ಬಾಯಲ್ಲಿ ವಿಶ್ವವನ್ನೆಲ್ಲಾ ಯಶೋದೆ ಕಾಣುತ್ತಾಳೆ.

**(ನು ೩) ಕಚ್ಚಬಂದ ಫಣಿ........ ಸ್ವಚ್ಛಗೈದ** : ಕಾಳಿಂದಿ ಮಡುವಿನಲ್ಲಿ ಸೇರಿದ್ದ ಕಾಳಿಂಗನೆಂಬ ಸರ್ಪದ ವಿಷದಿಂದ ನೀರೆಲ್ಲ ವಿಷವಾಗಿ, ಆ ನೀರು ಕುಡಿದ ಪಶುಗಳು ಸಾಯುತ್ತಿರಲು, ಕೃಷ್ಣ ಆ ಸರ್ಪದ ಹೆಡೆಯನ್ನು ತುಳಿದು, ಕಾಳಿಂಗನ ಮಡದಿಯರ ಪ್ರಾರ್ಥನೆಯನ್ನು ಕೇಳಿ, ಅವನನ್ನು ಪಾತಾಳಕ್ಕೆ ಕಳುಹಿಸಿ ಮಡುವನ್ನು ಸ್ವಚ್ಛಗೊಳಿಸುತ್ತಾನೆ.

**(ನು ೪) ಕರಡಿಮಗಳು ಮಡದಿ** : ಕರಡಿಗಳ ಅರಸನಾದ ಜಾಂಬವಂತನ ಮಗಳು ಜಾಂಬವತಿ ಕೃಷ್ಣನ ಅಷ್ಟ ಮಹಿಷಿಯರಲ್ಲಿ ಒಬ್ಬಳು.

**(ನು ೪) ಪುಷ್ಪವನು ತರಲು ತೆರಳಿ ಯುದ್ಧ ಮಾಡ್ದೆ** : ನಾರದರು ತಂದುಕೊಟ್ಟ ದೇವಲೋಕದ ಪಾರಿಜಾತವನ್ನು ಕೃಷ್ಣ ರುಕ್ಮಿಣಿಗೆ ಕೊಡಲು ಕೋಪಗೊಂಡ ಸತ್ಯ ಭಾಮೆಯನ್ನು ರಮಿಸಲು ಕೃಷ್ಣ ಪಾರಿಜಾತ ವೃಕ್ಷವನ್ನೇ ತರಲು ಬೆನ್ನಟ್ಟಿ ಬಂದವರೊಡನೆ ಯುದ್ಧಮಾಡುತ್ತಾನೆ.

**(ನು ೪) ತರುಣಿ ಸಮರಗೈದಳೆಂಬರೊ:** ಕೃಷ್ಣ ದೇವಲೋಕದಿಂದ ಪಾರಿಜಾತ ವೃಕ್ಷವನ್ನು ಕದ್ದು ತರುವಾಗ, ಅವನನ್ನು ಬೆನ್ನಟ್ಟಿ ಬಂದವರೊಡನೆ ಸತ್ಯಭಾಮೆ ಯುದ್ಧಮಾಡಿ ಗೆಲ್ಲುತ್ತಾಳೆ.

೮

**(ನು ೨) ಮಧುವೈರಿ** : ವಿಷ್ಣುವಿನ ಕರ್ಣಮಲದಿಂದ ಜನಿಸಿದ ಒಬ್ಬ ರಾಕ್ಷಸ, ಕೈಟಭ ಇವನ ತಮ್ಮ. ಇಬರಿಬ್ಬರೂ ಹರಿಯ ನಾಭಿಯಲ್ಲಿದ್ದ ಬ್ರಹ್ಮನನ್ನು ಪೀಡಿಸತೊಡಗಿದರು. ಎಲ್ಲಿ ಭೂಮಿಯನ್ನು ನೀರು ಆವರಿಸಿಕೊಂಡಿಲ್ಲವೋ ಅಲ್ಲಿ ತಮ್ಮನ್ನು ಕೊಲ್ಲಬಹುದೆಂಬ ಅವರ ವರವನ್ನೇ ಪೂರೈಸಿ ತನ್ನ ತೊಡೆಯ ಮೇಲೆಯೇ ಅವರನ್ನು ಕೊಂದ.

**(ನು ೫) ಉಗುರಿಂದ ಗಿರಿಯನು ಎತ್ತಿದ** : ಯಾದವರೆಲ್ಲ ಕೃಷ್ಣನ ಮಾತಿನಂತೆ ಇಂದ್ರನಿಗೆ ಪೂಜೆ ಸಲ್ಲಿಸುವ ಬದಲು ಗೋವರ್ಧನ ಗಿರಿಗೆ ಪೂಜೆ ಸಲ್ಲಿಸಲು ಕೋಪಗೊಂಡ ದೇವೇಂದ್ರ ಗುಡುಗು ಸಿಡಿಲುಗಳಿಂದ ಕೂಡಿದ ಭೀಕರ ಮಳೆ ಸುರಿಸಿದಾಗ, ಕೃಷ್ಣ ಗೋವರ್ಧನ ಗಿರಿಯೆನ್ನೇ ತನ್ನ ಒಂದು ಬೆರಳಿನಿಂದ ಎತ್ತಿ ಕೊಡೆಯಂತೆ ಹಿಡಿದು ಎಲ್ಲರನ್ನು ರಕ್ಷಿಸುತ್ತಾನೆ.

೯

**(ನು ೧) ಪಾಂಡವರ ಮನೆಯ ಬಿಟ್ಟಿ ಬಂಡಿಬೋವ** : ಅರ್ಜುನನ ರಥದ ಸಾರಥಿಯಾಗಿ ಕೃಷ್ಣ ಮಹಾಭಾರತ ಯುದ್ಧದಲ್ಲಿ ಭಾಗವಹಿಸಿದ್ದು

**(ನು ೧) ಪಾಂಚಾಲಿಗೆ ಒದಗಿದ ಕಷ್ಟ ಕಳೆದು** : ದುಶ್ಶಾಸನ ದ್ರೌಪದಿಯ ಸೀರೆ ಸೆಳೆದಾಗ ಕೃಷ್ಣ ಅಕ್ಷಯವಸ್ತ್ರ ನೀಡಿ ಆಕೆಯ ಮಾನ ಕಾಪಾಡಿದ ಪ್ರಸಂಗ.

**(ನು ೧) ದುಷ್ಟಕಂಸನ ವಧೆ** : ಯದುವಂಶದ ಉಗ್ರಸೇನನ ಮಗ ಕಂಸ. ಕೃಷ್ಣನ ಸೋದರಮಾವ. ಕೃಷ್ಣನನ್ನು ಕೊಲ್ಲಲು ಕಂಸ ಬಗೆ ಬಗೆಯ ಪ್ರಯತ್ನ ಮಾಡುತ್ತಾನೆ. ಕೃಷ್ಣ ಬಲರಾಮರನ್ನು ಕೊಲ್ಲುವುದಕ್ಕಾಗಿ ಅವರನ್ನು ಕಂಸ ಮಧುರೆಗೆ ಕರಸುತ್ತಾನೆ. ಮಧುರೆಯಲ್ಲಿ ಕೃಷ್ಣ ಕಂಸನನ್ನು ಕೊಲ್ಲುತ್ತಾನೆ.

**(ನು ೨) ಗಜನ ಸಲಹಿ ಪೊರೆದೆ** : (ನೋಡು ಕೀ ೭೦ ಟಿಪ್ಪಣಿ)

**(ನು ೨) ಪ್ರಹ್ಲಾದ** : ಹಿರಣ್ಯ ಕಶಿಪುವಿನ ಮಗ. ಹರಿಭಕ್ತ, ತನ್ನ ಹಗೆಯಾದ ಹರಿಯನ್ನು ಸ್ತುತಿಸಬಾರದೆಂದು ಹಿರಣ್ಯಕಶಿಪು ನಾನಾ ರೀತಿಯಲ್ಲಿ ಮಗನನ್ನು ಹಿಂಸಿಸುತ್ತಾನೆ. ಕೊನೆಗೆ ಭಕ್ತನ ಕರೆಗೆ ಓಗೊಟ್ಟು ಹರಿ ನರಸಿಂಹನಾಗಿ ಕಂಬದಿಂದ ಮೂಡಿ ಬಂದು ಹಿರಣ್ಯಕಶಿಪುವನ್ನು ಕೊಲ್ಲುತ್ತಾನೆ.

**(ನು ೨) ಧ್ರುವ** : ಉತ್ತಾನಪಾದನ ಹಿರಿಯ ಹೆಂಡತಿ ಸುನೀತಿಯ ಮಗ, ಮಲ ತಾಯಿ ಸುರುಚಿಯ ತಿರಸ್ಕಾರದಿಂದ ನೊಂದು ಕಾಡಿಗೆ ಹೋಗಿ ತಪಸ್ಸು ಮಾಡಿ, ಹರಿಯನ್ನು ಒಲಿಸಿಕೊಂಡು, ನಕ್ಷತ್ರಗಳ ಸಮೂಹದಲ್ಲಿ ಧ್ರುವ ಮಂಡಲ ಎಂಬ ಶಾಶ್ವತ ಸ್ಥಾನವನ್ನು ಪಡೆಯುತ್ತಾನೆ.

ನೀರೊಳಗೆ ಮುಳುಗಿ ವೇದವ ತಂದದಣುವಿಕೆಯೊ
ಭಾರ ಬೆನ್ನಿಲಿ ಪೊತ್ತಧಾವತಿಯೋ ಮಾಧವನೆ
ಕೋರೆಯಲಿ ನೆಲಕೆದರಿ ಅಲಸಿದೆಯೊ ಶ್ರೀ ಹರಿಯ
ಕ್ರೂರ ರಕ್ಕಸನ ಕರುಳಕಂಡು ಬೆದರಿದ ಪರಿಯೋ
ಧಾರುಣಿಯನಳೆದು ಪಾದಗಳು ಅಲಸಿತೊ ಕೃಷ್ಣ
ಶೂರರನು ಮಡುಹಿ ಕೊಡಲಿಯ ಪಿಡಿದ ಪೌರುಷವೋ
ನಾರಿಯನು ಅರಸಿ ಬಹುಬಳಲಿದಾಯಸವೋ
ಊರನಾರೇರಮನೆ ಬೆಣ್ಣೆ ತಿಂದ ಮದವೋ
ತ್ರಿಪುರ ಸತಿಯರ ವ್ರತವ ಅಪಹರಿಸಿದ ಪರಿಯೋ
ಕುದುರೆಯೇರುತ ಬಂದ ಕಡುಧಾವತಿಯೊ ದೇವ
ಪರಮ ಭಕ್ತರುಗಳ ಉದ್ಧರಿಸುವಾಲೋಚನೆಯೊ
ಏನು ಕಾರಣ ಮಲಗಲೊಲ್ಲೆಯೋ ಮಾಧವನೇ
ದಾನವಾಂತಕ ಕಮಲನಾಭ ವಿಠ್ಠಲ ನಿನ್ನ
ನಾ ಬೇಡಿಕೊಂಬೆನು ನೀ ಮಲಗು ಮಲಗೊ ದೇವ

## ಆರ್‍ಯ

ಈ ಪರಿಯಲಿ ಗೋಪಿಯು ಪ್ರಾರ್ಥಿಸಲು
ಆ ಪರಮಾತ್ಮನು ಹರುಷದಲಿ
ಮಾತೆಯ ಕರಗಳ ಪಿಡಿದು ನುಡಿದನು
ಆ ಶಶಿಮಂಡಲ ತೋರುತಲಿ

ಚಂದ್ರನ ತಾರೆ ಅಮ್ಮಾ ಅಮ್ಮಾ ಅಮ್ಮ ಪ

ಕಂದುಗೊರಳ ಶಿವನ ಸಿರದಿ ಮೆರೆಯುವಂಥ ಅ.ಪ

ಅಂಗಳದೊಳು ಬಾರೆ ಬೆಳದಿಂಗಳ ನೋಡುವೆ
ಅಂಗೈಯಲಿ ಚಂದ್ರನ ತಂದು ಕೊಡಮ್ಮ
ಕಂಗಳಿಗೆ ನಿದ್ರೆಬಾರದೆ ಯಶೋದೆ
ಚಂದದಿ ಆಟವ ಆಡಬೇಕೆನ್ನುವೆ ೧

ಮಗನಮಾತನು ಕೇಳಿಮಿಗೆ ಆಶ್ಚರ್ಯ ತಾಳಿ
ಸೊಗಸಿನಿಂದ ಮಗನನು ಮುದ್ದಿಸುತ
ಗಗನದಿ ಬೆಳಗುವ ಚಂದ್ರನ ತಂದು ನಿನ್ನ
ಕರದಲ್ಲಿ ನೀಡುವದೆಂತೋ ಕಾಣೆನೊ ಕೃಷ್ಣ ೨

ಅಂದ ಮಾತನು ಕೇಳಿದ ಯಶೋದೆ ನೋಡೆ
ಚಂದ್ರನ ಕರೆಸುವೆನೆ
ಮಂದರೋದ್ಧರ ಕಮಲನಾಭವಿಠ್ಠಲ ಕರದಿ
ಚಂದ್ರನ ಪಿಡಿದು ಮಾತೆಗೆ ತೋರಿದನು ಹರಿ ೩

## ಆರ‍್ಯ

ಹರಿಯನು ಈ ಪರಿ ಉಪಚರಿಸುತಲೆ
ಮನೆಕೆಲಸಗಳನು ನಡಸದಲೆ
ಹಗಲು ಇರಳು ಈ ಪರಿ ಹಟ ಮಾಡುವ
ಹರಿಯನು ಎತ್ತುತ ನುಡಿದಳು ಹೀಗೆ ೧

ಮಕ್ಕಳ ಪಡೆದವರೆಲ್ಲರು ತಮ್ಮಯ
ಮಕ್ಕಳ ಲಾಲಿಸದಲೆ ಇಹರೆ
ಅಕ್ಕರೆಯಿಂದಲಿ ಸಾಕಿದ ದೇವನ
ಅಚ್ಚ ಹೆಚ್ಚಿತು ಎಂದೆನುತ

ಹೀಗೆನುತಲಿ ಗೋಪಿಯು ದಶದಿಕ್ಕಿಗೆ
ನೋಡುತ ಆಲೋಚಿಸುತಿರಲು
ಬೇಗನೆ ರಾಧೆಯು ಬಂದಳು ದೇವನ
ನಾನೆತ್ತುತ ಆಡಿಪೆನೆಂದು ೨

ಬಂದೆತ್ತುತ ಆನಂದ ಕಂದನನು
ಗೋವಿಂದನೆ ಬಾಬಾ ನಮ್ಮನೆಗೆ
ಸುಂದರ ಕಮಲಾನಾಭವಿಠ್ಠಲನ
ವಂದಿಸಿ ಬೇಡಿದಳ್ವಿನಯದಲಿ ೩

೬

**ಎಂತು ಶೋಭಿಸುತಿಹಳು ಈ ಕನ್ನಿಕೆ** ವಿಷ್ಣುವಿನ ಮೋಹಿನಿರೂಪದ ವರ್ಣನೆ. ದೇವದಾನವರಿಗೆ ಅಮೃತವನ್ನು ಹಂಚುವ ಕಾಲದಲ್ಲಿ ವಿಷ್ಣು ರಾಕ್ಷಸರನ್ನು ವಂಚಿಸಲು ಮೋಹಿನಿರೂಪ ಧರಿಸಿದ. ಶಿವ ಮೋಹಿನಿ ರೂಪವನ್ನು ನೋಡಲು ಬಯಸಿದ ಹರಿ ಬೇಡವೆಂದರೂ ಕೇಳಲಿಲ್ಲ. ಕೊನೆಗೆ ವಿಷ್ಣು ಅವನೆದುರಿಗೆ ಸ್ತ್ರೀರೂಪವನ್ನು ತೋರಿಸಿದಾಗ ಮೋಹಗೊಳ್ಳುತ್ತಾನೆ. ಶಿವನ ವರದಿಂದ ಭಸ್ಮಾಸುರನು ಯಾರ ತಲೆಯ ಮೇಲೆ ಕೈ ಇಟ್ಟರೂ ಅವರು ಸುಟ್ಟು ಭಸ್ಮವಾಗುತ್ತಾರೆಂದು, ಶಿವನ ತಲೆಯ ಮೇಲೆ ಕೈ ಇಡಲು ಹೊರಟಾಗ, ಶಿವ ವಿಷ್ಣುವನ್ನು ಪ್ರಾರ್ಥಿಸಲು ಹರಿ ಮೋಹಿನಿ ರೂಪತಾಳಿ ಭಸ್ಮಾಸುರನನ್ನು ಆಕರ್ಷಿಸಿ ಅವನು ತನ್ನ ತಲೆಯ ಮೇಲೆ ತಾನೆ ಕೈ ಇಟ್ಟುಕೊಂಡು ಭಸ್ಮವಾಗುವಂತೆ ಮಾಡುತ್ತಾನೆ (ನು.೯).

೭

**(ನು ೨) ಕರಿರಾಜ ವರದ** : ಪೂರ್ವದಲ್ಲಿ ಇಂದ್ರದ್ಯುಮ್ನನೆಂಬ ವಿಷ್ಣು ಭಕ್ತ ಅಗಸ್ತ್ಯರ ಶಾಪದಿಂದ ಆನೆಯ ಜನ್ಮವನ್ನು ಪಡೆದನು. ಒಮ್ಮೆ ಪದ್ಮ ಸರೋವರದಲ್ಲಿ ನೀರು ಕುಡಿಯುತ್ತಿದ್ದಾಗ ಮೊಸಳೆಯೊಂದು ಅದರ ಕಾಲನ್ನು ಹಿಡಿಯಿತು. ಆನೆಯು ಶ್ರೀ ಹರಿಯನ್ನು ಪ್ರಾರ್ಥಿಸಲು ಅವನು ಓಡಿ ಬಂದು ಚಕ್ರಾಯುಧದಿಂದ ಮೊಸಳೆಯನ್ನು ಕೊಂದು ಗಜೇಂದ್ರನನ್ನು ರಕ್ಷಿಸುತ್ತಾನೆ.

**ಉರಗಗಿರಿ**

ತಿರುಪತಿ ಬೆಟ್ಟಕ್ಕೆ ದ್ವಾಪರಯುಗದಲ್ಲಿ ಶೇಷಾಚಲ ಅಥವಾ ಉರಗಾದ್ರಿ, ಉರಗಗಿರಿ ಎಂಬ ಹೆಸರು ಬಂತು. ಒಮ್ಮೆ ವಾಯುದೇವನು ನಾರಾಯಣನ ದರ್ಶನಕ್ಕಾಗಿ ವೈಕುಂಠಕ್ಕೆ ಬಂದನು. ಆದಿಶೇಷನು ಆತನನ್ನು ತಡೆದನು. ವಾಯುವಿಗೂ ಆದಿಶೇಷನಿಗೂ ವಾದವಿವಾದ ಬೆಳೆಯಿತು. ಆದಿಶೇಷನು ನನ್ನ ಸಮಾನ ಭಕ್ತರು ಬೇರೆ ಇಲ್ಲ ಎಂದು ಗರ್ವದಿಂದ ನುಡಿದನು. ಅಷ್ಟರಲ್ಲಿ ಹರಿ ಅಲ್ಲಿಗೆ ಬರಲು ಶೇಷನು ವಾಯುವಿನ ಮೇಲೆ ದೂರಿತ್ತನು. ಭಗವಂತನು ಇಬ್ಬರಿಗೂ ಒಂದು ಪರೀಕ್ಷೆಯನ್ನು ಒಡ್ಡಿದನು. ಉತ್ತರ ದಿಕ್ಕಿನಲ್ಲಿ ಮೇರು ಪರ್ವತಕ್ಕೆ ಪುತ್ರನೆನಿಸಿದ ಆನಂದಾದ್ರಿ ಇದೆ. ಶೇಷನು ಅದನ್ನು ಸುತ್ತಿಕೊಂಡು ನಿಲ್ಲಲಿ. ವಾಯುವು ಆ ಪರ್ವತವನ್ನು ಕದಲಿಸಲಿ, ಇದರಿಂದ ಜಯಾಪಜಯ ನಿರ್ಣಯವಾಗುತ್ತದೆ. ಇದಕ್ಕೆ ಒಪ್ಪಿ ಶೇಷನು ಆನಂದಾದ್ರಿಯನ್ನು ಸುತ್ತಿಕೊಂಡು ಬಲವಾಗಿ ಕುಳಿತನು. ವಾಯುವು ಹರಿಯನ್ನು ಧ್ಯಾನಿಸುತ್ತ, ಆ ಪರ್ವತವನ್ನು ದಕ್ಷಿಣಕ್ಕೆ ಐವತ್ತೊಂದು ಸಾವಿರ ಯೋಜನ ದೂರಕ್ಕೆ ನೂಕಿಬಿಟ್ಟನು. ಆಮೇಲೆ ವಾಯುವಿನ ಅನುಗ್ರಹ ಪಡೆದ ಆ ಪರ್ವತವು ಸುವರ್ಣಮುಖಿ ನದಿಯ ಉತ್ತರದಡದಲ್ಲಿ ನಿಂತಿತು. ಆದಿಶೇಷ ವಾಯುವಿನಲ್ಲಿ ಕ್ಷಮೆಯಾಚಿಸಿದ.

## ಭಾಮಿನಿ ಷಟ್ಪದಿ

ಕಂದ ಬಾರೈ ಚಂದದಿಂದಲಿ
ವಂದಿಸುತ ಬೇಡುವೆನು ನಿನ್ನನು
ಇಂದಿರಾಪತಿ ಸಂಭ್ರಮದಿ ಕರೆದೊಯ್ವೆ ನಾನೀಗ
ಮಂದಿರದಿ ಮಹವೈಭವದಿ ನಿನ್ನ
ಶೃಂಗರಿಸಿ ಪಾಲ್ಬೆಣ್ಣೆ ಕೊಡುವೆನು ಮು–
ಕುಂದ ಬಾರೈ ಪರಮಾನುಗ್ರಹದಿಂದ ಎನ್ನ ಮನೆಗೆ

ಬಾರಯ್ಯ ಕೃಷ್ಣ ಬಾರಯ್ಯ
ಬಾರಯ್ಯ ಎನ್ನ ಭಾಗ್ಯದ ನಿಧಿಯೆ ಪ

ಚಿಣ್ಣಿಕೋಲು ಚಂಡು ಬಣ್ಣದ ಬುಗುರಿಯು
ರಂಗಯ್ಯ ನಿನಗೆ ನಾ ಕೊಡೆವೆನು ಬಾ
ಸಣ್ಣ ಬಾಲರ ಕೂಡಿ ಬೆಣ್ಣೆ ಮೆಲ್ಲುತ ನಮ್ಮ
ಅಂಗಳದೊಳು ಕುಣಿದಾಡಲು ಬೇಡುವೆ ೧

ಗೆಜ್ಜೆ ಕಾಲ್ಗಡಗವು ಘಲಘಲರೆನ್ನುತ
ಹೆಜ್ಜೆಯನಿಡು ಬಾರೈ ಅರ್ಜುನ ಸಖನೇ
ವಜ್ರದುಂಗುರಗಳು ಹೊಳೆಯುವ ಕರದಲಿ
ಸಜ್ಜಾಗಿಡಿದಿಹ ಮುರಳಿಯನೂದುತ ೨

ನಂದಗೋಪನ ಕಂದ ಹಿಂಡುಗೋವ್ಗಳ ಕೂಡಿ
ಸಂಜೆಗೆಂಪಿನ ಹೂವುಸಿರದಿ ಹೊಳೆಯುತಲಿ
ಇಂದಿರೆಯರಸ ಗೋವಿಂದ ನಿನ್ನಯ ಪಾದ–
ದ್ವಂದ್ವಕೆ ನಮಿಪೆ ಶ್ರೀಕಮಲನಾಭ ವಿಠ್ಠಲ ೩

ಬಾರೋ ಬಾರೋ ನೀನು ಎನ್ನಯ ಮನೆಗೆ
ಬಾರೋ ಶ್ರೀ ಹರಿ ನೀನು ಪ

# ಅನುಬಂಧ-೨

## ಟಿಪ್ಪಣಿಗಳು

### ೧

**(ನು ೪) ವಾನರನಿಕರದೊಳು ಶ್ರೇಷ್ಠನ ಪ್ರಭು** : ವಾನರರ ಗುಂಪಿನಲ್ಲಿ ಶ್ರೇಷ್ಠ ಹನುಮಂತ ಅವನ ಪ್ರಭು ಶ್ರೀರಾಮ.

**(ನು ೫) ಸನಕ** : ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬ

### ೩

**(ನು ೨) ಮಧ್ವಸರೋವರ** : ಉಡುಪಿಯ ಕೃಷ್ಣ ಮಠದೊಳಗಿರುವ ಸರೋವರ

**(ನು ೩) ಅನಂತೇಶ್ವರ** : ಉಡುಪಿಯ ಕೃಷ್ಣಮಠದ ಸಮೀಪವಿರುವ ಪ್ರಾಚೀನ ದೇವಾಲಯದ ಅನಂತಾಸನ. ಶಂಕರ-ನಾರಾಯಣರನ್ನು ಜತೆಯಾಗಿ ಆರಾಧಿಸುವ ಹರಿಹರಲಿಂಗ.

**(ನು ೬) ಮಣ್ಣಗೆಡ್ಡೆಯೊಳಗೆ ಪೊಳೆದು** : ನಾವಿಕ ನೀಡಿದ ಗೋಪಿಚಂದನದ ಗಟ್ಟಿಯೊಳಗಿಂದ ಮಧ್ವಾಚಾರ್ಯರಿಗೆ ಕೃಷ್ಣನ ಮೂರ್ತಿ ದೊರೆತದ್ದು.

**(ನು ೮) ಪರಿಯಾಯ > ಪರ್ಯಾಯ** : ಉಡುಪಿಯ ಅಷ್ಟಮಠದ ಯತಿಗಳು ಶ್ರೀ ಕೃಷ್ಣ ಪೂಜೆ ಮತ್ತು ಶ್ರೀ ಕೃಷ್ಣ ಮಠದ ಆಡಳಿತದ ಅಧಿಕಾರವನ್ನು ಎರಡು ವರ್ಷಗಳಿಗೊಮ್ಮೆ ಸರದಿಯಂತೆ ಇನ್ನೊಬ್ಬ ಯತಿಗೆ ಹಸ್ತಾಂತರಿಸುವರು ಇದೇ ಪರ್ಯಾಯ ಮಹೋತ್ಸವ.

**(ನು ೧೧) ಸ್ತ್ರೀರೂಪ ಧರಿಸಿದ** : ಉಡುಪಿಯ ಶ್ರೀ ಕೃಷ್ಣನಿಗೆ ಪ್ರತಿ ಶುಕ್ರವಾರ ಮತ್ತು ನವರಾತ್ರಿಯ ಒಂಭತ್ತು ದಿನಗಳು ದೇವಿಯ ಅಲಂಕಾರ ಮಾಡುತ್ತಾರೆ.

**(ನು ೨) ವಿಶ್ವ ಬಾಯೊಳು ತೋರ್ದ** : ನೋಡಿ ಕೀ ೯ ನು ೩ ರ ಟಿಪ್ಪಣಿ

**(ನು. ೩) ಖಗವರ ವಾಹನ** : ನೋಡಿ ಕೀ ೧೬ ನು೨ ರ ಟಿಪ್ಪಣಿ

**(ನು ೩) ಕಂಸಮರ್ದನ** : ನೋಡಿ ಕೀ ೯ ನು೧ರ ಟಿಪ್ಪಣಿ

## ೧೬೫

ಹಣಿಸೆ ಹಣ್ಣಿನ ಹಿರಿಮೆಯನ್ನು ಹೇಳುವ ಹಾಡು.

ಅನೇಕ ಹಣ್ಣುಗಳ ವಿಷಯ ಹೇಳಿ, ಎಲ್ಲಕ್ಕಿಂತ ಮಿಗಿಲಾದದ್ದು ಹಣಿಸೇಹಣ್ಣು ಎಂದು ಪ್ರತಿಪಾದಿಸಿದ್ದಾರೆ.

**(ನು ೩) ಫರಂಗಿಯರು** : ಇಂಗ್ಲಿಷಿನವರು

## ೧೬೭

**ಶ್ರೀಗೋಪೀಗೀತಾ** : ೨೭ ನುಡಿಗಳ ದೊಡ್ಡ ಕೀರ್ತನೆ . ಕೊಳಲ ಧ್ವನಿಯ ಕೇಳಿ ಗೋಪಿಯರು ಧಾವಿಸಿ ಬರುವುದು. ಕೃಷ್ಣ ಅವರೊಂದಿಗೆ ಸರಸವಾಡುವುದು. ಅವರು ಮೈಮರೆತಾಗ ಮರೆಯಾಗುವುದು. ಕೃಷ್ಣನನ್ನು ಕಾಣದೆ ಗೋಪಿಯರು ಪರಿತಪಿಸುವುದು. ಕೃಷ್ಣ ಮೈದೋರುವುದು. ಇದು ಕೀರ್ತನೆಯ ವಸ್ತು.

## ೧೬೭

ತಿರುಪತಿಯಾತ್ರೆಯ ವಿವರಗಳಿವೆ. ತಿರುಪತಿ ತಿಮ್ಮಪ್ಪನ ದರ್ಶನದ ಆನಂದ ಅಲ್ಲಲ್ಲಿ 'ಆಹಾ' ಎಂಬ ಮಾತಿನಲ್ಲಿ ವ್ಯಕ್ತವಾಗಿದೆ.

## ೧೬೮

ನೀರಿನ ಅಗತ್ಯ ಎಷ್ಟಿದೆ, ಅದರ ಮಹತ್ತ್ವ ಏನು ಎಂಬುದನ್ನು ಹೇಳುವ ಹಾಡು

**(ನು ೯) ವಾರುಣಿಯ ಪತಿ** : ಸಮುದ್ರರಾಜ

**(ನು ೯ ಮತ್ತು ೧೦) ನೀರಿನೊಳು ಮುಳುಗಿ.........ಕಟ್ಟಿದನು** : ದಶಾವತಾರಗಳಲ್ಲಿ ರಾಮಾವತಾರದವರೆಗೆ ಹೇಳಿದೆ

ನೋಡಿ ಕೀ ೧೦ರ ಟಿಪ್ಪಣಿ

**(ನು ೧೧) ನೀರಿನೊಳು...........ಪೊರೆದನು** : ನೋಡೆ ಕೀ ೭ ನು ೨ ರ ಟಿಪ್ಪಣಿ

**(ನು ೧೧) ನೀರೆ ದ್ರೌಪದಿಯ...........ಕಾಯ್ದ** : ನೋಡಿ ಕೀ ೯ ನು ೨ ರ ಟಿಪ್ಪಣಿ

**(ನು ೧೧) ನೀರಮಧ್ಯದಿ..........ರಚಿಸಿದನು** : ನೋಡಿ ಕೀ ೧೩ ನು ೩೮ ಟಿಪ್ಪಣಿ

**(ನು ೧೧) ನೀರಜಾಕ್ಷಿಯರ..........ಆಡಿದನು** : ಶ್ರೀಕೃಷ್ಣ ಗೋಪಿಯರ ಜೊತೆ ಜಲಕ್ರೀಡೆಯಾಡಿದ

**(ನು ೧೨) ಶ್ರಮವ ಪರಿಹರಿಪ.................ಜಲವಯ್ಯ** : ಕ್ಷೀರಸಾಗರ ಮಥನದಲ್ಲಿಯೇ ಚಂದ್ರ, ಕಾಮಧೇನು, ಐರಾವತಗಳು ಹುಟ್ಟಿದವು.

೧೭೯

ವಾದಿರಾಜಾಶ್ರಮದಲ್ಲಿ ಪುರಂದರದಾಸರ ಪುಣ್ಯದಿನವನ್ನು ಆಚರಿಸಿದ ಸಂಭ್ರಮವನ್ನು ವರ್ಣಿಸುವ ಹಾಡು.

**(ನು ೨) ಪವಮಾನಮತ** : ಮಧ್ವಮತ

**(ನು ೩) ಯಾಯಿವಾರ** : ಸದಾ ತಿರುಗುತ್ತಾ ಇರುವ ಸನ್ಯಾಸಿ. ಹರಿದಾಸರು ಹಾಡುತ್ತಾ ಬೀದಿ ಬೀದಿಗಳಲ್ಲಿ ಭಿಕ್ಷೆ ಪಡೆಯುವುದನ್ನು ಹೀಗೆ ಕರೆಯುತ್ತಾರೆ. ಧರ್ಮದ ಅನುಷ್ಠಾನದಲ್ಲಿ ದಿನವೂ ಊರೂರು ತಿರುಗುತ್ತಾ ಭಿಕ್ಷೆ ಬೇಡಿ ಹೊಟ್ಟೆ ಹೊರೆಯುತ್ತಾ ತೃಪ್ತರಾಗಿರುವವರಿಗೆ 'ಯಾಯಾವರ ' ರೆಂದು ಹೆಸರು. ಕನ್ನಡದಲಿ ಯಾಯಿವಾರ ಆಗಿದೆ.

**(ನು ೩) ಪಾರ್ಥಿವ ವತ್ಸರ** :ಒಂದು ಸಂವತ್ಸರದ ಹೆಸರು

೧೭೦

ನವವಿಧ ಭಕ್ತಿಯನ್ನು ಹೇಳುವ ಹಾಡು

ನೋಡಿ ಕೀ ೧೦೬ ನು ೪ ರ ಟಿಪ್ಪಣಿ

**(ನು ೨) ಮಾತುಳಾಂತಕ** : ಸೋದರ ಮಾವನಾದ ಕಂಸನನ್ನು ಕೊಂದವನು

**(ನು ೩) ಮಧುವೈರಿ** : ನೋಡಿ ಕೀ ೮ ನು ೨ ರ ಟಿಪ್ಪಣಿ

**(ನು ೪) ಶಿಲೆಯಾದ ಅಹಲ್ಯೆಯ.........ಪಾದ** : ನೋಡಿ ಕೀ ೯ ನು ೬ ರ ಟಿಪ್ಪಣಿ

**(ನು ೪) ಧರಣಿ ಈರಡಿಗೈದ ದಿವ್ಯ ಪಾದ** : ವಾಮನ ಅವತಾರ

**(ನು ೪) ಶರಧಿಯೊಳು ಧುಮುಕಿ.............ಪಾದ** : ನೋಡಿ ಕೀ ೯ ನು ೩ ರ ಟಿಪ್ಪಣಿ

೪. ಸಮುದ್ರಮಥನ

**(ಗೌರೀತನಯ-ನು ೩) ಕಶ್ಯಪನ ಕಂದ** : ಕಶ್ಯಪರೇ ದ್ವಾಪರದಲ್ಲಿ ವಸುದೇವನಾಗಿ ಜನಿಸುತ್ತಾರೆ. ಅವರ

ಮಗನೇ ಕೃಷ್ಣ.

**(ಶರದಿಯ ಮಥಿಸಿದರು-ನು ೯) ಧನ್ವಂತರಿ** : ಕ್ಷೀರಸಾಗರಮಥನ ಕಾಲದಲ್ಲಿ ಕ್ಷೀರಸಾಗರದಿಂದ ಜನಿಸಿದ. ದೇವತೆಗಳ ವೈದ್ಯ. ವೇದವನೆ ಕದ್ದ....ನಡೆಸುತಿಹನು (ಶ್ರೀಧರ ತಾಳಿದ ನು .೨,೩)

ನೋಡಿ ದಶಾವತಾರ ಕೀ ೧೦ರ ಟಿಪ್ಪಣಿ.

**ನರನ ವಾಹನನನ್ನು ಒಲ್ಲೆ ನಿರುತಿ ಎಂಬುವನ**

**(ಕಮಲಮುಖಿಯು -ನು ೩)** : ಮನುಷ್ಯನನ್ನೇ ವಾಹನವಾಗಿ ಮಾಡಿಕೊಂಡ ನಿರುತಿ ಎಂಬ ದಿಕ್ಪಾಲಕ. ನೈರುತ್ಯದಿಕ್ಕಿನ ಒಡೆಯ.

**ಸ್ವಚ್ಛಜಲನಿವಾಸಿ...ಕಲ್ಕ್ಯನೊಲ್ಲೆನಾ** (ಕಮಲ ಮುಖಿಯು-ನು ೭ರಿಂದ ೧೧)

ದಶಾವತಾರಗಳು ನೋಡಿ ಕೀ ೧೦ರ ಟಿಪ್ಪಣಿ. ಮಂಗಳ ಪದ್ಯ ನು೧ ರಿಂದ ೩ ದಶಾವತಾರ ಸ್ತುತಿ ನೋಡಿ ಕೀ ೧೦ರ ಟಿಪ್ಪಣಿ.

**೫. ಶ್ರೀ ಪುರಂದರ ವಿಠಲದಾಸರ ಚರಿತ್ರೆ**

ಆರ್ಯ-ನೋಡಿ ಹರಿಲೀಲಾ ಕೀರ್ತನೆಯ ಟಿಪ್ಪಣಿ

ತಂದೆ ಮುದ್ದು ಮೋಹನ ವಿಠ್ಠಲ ದಾಸರು : ನೋಡಿ ಕೀ ೪೨ ರ ಟಿಪ್ಪಣಿ

**(ನು ೧) ಉರಗಾದ್ರಿವಾಸ ವಿಠ್ಠಲದಾಸರು** :ನೋಡಿ ಕೀ ೪೨ರ ಟಿಪ್ಪಣಿ

**(ನು ೨) ತಂದೆ ವೆಂಕಟೇಶ ವಿಠ್ಠಲ ದಾಸರು** : ನೋಡಿ ಕೀ ೮೧ ನು ೪ರ ಟಿಪ್ಪಣಿ

**(ವಚನ) ಭಾರತಾದೇವಿ** : ನೋಡಿ ಕೀ ೭೮ರ ಟಿಪ್ಪಣಿ

**(ಹರಿನಾರಾಯಣ) ವೇದನಗೋದ್ಧಾರ...ಕುದುರೆಯನೇರಿದ** : ಕೃಷ್ಣ

ನುಡಿ ೧ರಿಂದ೫ ದಶಾವತಾರ.

ನೋಡಿ ಕೀ ೧೦ರ ಟಿಪ್ಪಣಿ

**(ಕಂದ) ಮಹತಿ** : ನಾರದರ ವೀಣೆ

**(ವಚನ) ಸರಸ್ವತಿ** : ಪುರಂದರದಾಸರ ಹೆಂಡತಿ ಶ್ಲೋಕ ಅಸ್ಥಿರಂ.....ಸ್ಥಿರಂ

ಈ ಲೋಕದಲ್ಲಿ ಜೀವನ, ಯೌವ್ವನ, ಧನ, ಹೆಂಡತಿ ಮಕ್ಕಳೆಲ್ಲವೂ ಅಸ್ಥಿರ. ಧರ್ಮ ಮತ್ತು ಕೀರ್ತಿಗಳೆರಡೆ ಸ್ಥಿರವಾದುದು.

**(ನೀಲವರ್ಣನ ತೋರು ನು ೧) ಸೋಮ ಸಹೋದರಿಯ ಪ್ರಿಯನರಸಿಯೆ** : ಕ್ಷೀರಸಾಗರವನ್ನು ಅಮೃತಕ್ಕಾಗಿ ಕಡೆಯುವಾಗ ಅದರಲ್ಲಿ ಚಂದ್ರ ಮತ್ತು ಲಕ್ಷ್ಮೀಯರು ಉದ್ಭವಿಸಿದರು. ಆದ್ದರಿಂದ ಲಕ್ಷ್ಮೀ ಸೋಮಸಹೋದರಿ. ಆಕೆಯ ಪ್ರಿಯ ಶ್ರೀಹರಿ. ಆ ಹರಿಯ ಅರಸಿ ಶ್ರೀ ತುಳಸಿ.

**(ಇಂದಿರೇಶನೆ ನು ೧) ಕುಂದರದನ** : ಮಲ್ಲಿಗೆಯಂತಹ ಹಲ್ಲು

ವರ ಮತ್ಸ್ಯ....ಹರಿಯೆ ನೀನು (ಶರಣು ಸಜ್ಜನ ಪ್ರಿಯ ನು ೭ಮತ್ತು ೮) ದಶಾವತಾರ. ನೋಡಿ ಕೀ ೧೦ರ ಟಿಪ್ಪಣಿ.

**(ಶರಣು ಸಜ್ಜನ ಪ್ರಿಯ ನು ೧೨) ಸಪ್ತಸಾಗರ** : ಲವಣ ಸಮುದ್ರ (ಉಪ್ಪು) ಇಕ್ಷು ಸಮುದ್ರ (ಕಬ್ಬಿನ ಹಾಲು) ಸುರಾ ಸಮುದ್ರ (ಮದ್ಯ) ಸರ್ಪಿಸ್ ಸಮುದ್ರ (ತುಪ್ಪ) ದಧಿ ಸಮುದ್ರ (ಮೊಸರು) ಕ್ಷೀರ ಸಮುದ್ರ (ಹಾಲು) ಜಲಸಮುದ್ರ (ಸಿಹಿನೀರು)

**(ಶರಣು ಸಜ್ಜನ ಪ್ರಿಯ ನು ೧೨) ಸಪ್ತಋಷಿಗಳು** :ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮಿ, ಜಮದಗ್ನಿ, ವಸಿಷ್ಠ

**(ಶರಣು ಸಜ್ಜನ ಪ್ರಿಯ ನು.೧೩) : ಹತ್ತೆಂಟುಪುರಾಣ ಹದಿನೆಂಟು ಪುರಾಣಗಳು** : ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತಪುರಾಣ, ಲೈಂಗ, ವಾರಾಹ, ಸ್ಕಾಂದ ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಬ್ರಹ್ಮಾಂಡ.

**ಕಚ್ಚನು ಕುಡಿದಂತಾಗಿರಲು**

ವಿಶೇಷ ದಿನಗಳಲ್ಲಿ ಪುರಂದರದಾಸರು ಮಠದಲ್ಲಿ ಪ್ರಸಾದ ಸ್ವೀಕರಿಸುತ್ತಿದ್ದರು. ಒಂದು ದಿನ ದಾಸರು ಪೂಜೆಗೆ ಕುಳಿತ್ತಿದ್ದಾಗ ಸ್ವಾಮಿಗಳಿಂದ ಆಹ್ವಾನ ಬಂದಿತು. ಗುರುಗಳ ಮೇಲಿನ ಭಕ್ತಿಯಿಂದ ನೈವೇದ್ಯ ಮಾಡದೆ ಮಠಕ್ಕೆ ಹೋದರು. ಅಲ್ಲಿನ್ನೂ ಅರ್ಚನೆಯಾಗುತ್ತಿತ್ತು. ಪರಿಚಾರಕನು ಅಕ್ಕಿಯನ್ನು ತೊಳೆದು ಕಲಗಚ್ಚನ್ನು ಚೆಲ್ಲುತ್ತಿದ್ದನು. ದಾಸರು ಇವತ್ತು ನಿನಗಿದೇ ನೈವೇದ್ಯ ಎಂದು ಕೃಷ್ಣಾರ್ಪಣ ಹೇಳಿದರು. ಒಡನೆಯ ಸ್ವಾಮಿಗಳು ಪೂಜಿಸುತ್ತಿದ್ದ ಕೃಷ್ಣನ ವದನದಿಂದ ಬಿಂದುವಾಗಿ ಕಲಗಚ್ಚು ಬೀಳಲಾರಂಭವಾಯಿತು. ಸ್ವಾಮಿಗಳು ದಾಸರನ್ನು ಕರೆದು ವಿಷಯ ತಿಳಿಸಲು ಮುಡಿಯ ನೇವರಿಸಿ ಕಲಗಚ್ಚು ಬರುವುದನ್ನು ನಿಲ್ಲಿಸಿದರು.

**ಪಂಚಭೇದ ಪ್ರಪಂಚ ( ಆರ್ಯ)**

ಚೇತನದಿಂದ ಚೇತನಕ್ಕಿರುವ ಭೇದ, ಜಡದಿಂದ ಜಡಕ್ಕಿರುವ ಭೇದ, ಚೇತನದಿಂದ ಜಡಕ್ಕಿರುವ ಭೇದ, ಚೇತನದಿಂದ ಬ್ರಹ್ಮಗಿರುವ ಭೇದ, ಜಡದಿಂದ ಬ್ರಹ್ಮಗಿರುವ ಭೇದ ಮೈಲಾರಪ್ಪನ..........ತೋರಿದ ಮಹಿಮೆಯ ( ಕೇಳಿ ಕೇಳಿ ದಾಸರ ಸುಚರಿತ್ರವಾ ನು ೨)

ಮೈಲಾರಪ್ಪ ವಾಮಾಚಾರದಿಂದ ಪರಶುಶಿಲೆಯನ್ನು ಪಡೆದು ಅದರಿಂದ ಬೇಕಾದಷ್ಟು ಬಂಗಾರ ಮಾಡಿಕೊಂಡು ಮೋಜಿನ ಜೀವನ ನಡೆಸುತ್ತಿದ್ದ. ಒಮ್ಮೆ ಮನೆಗೆ ಬೀಗರು ಬರಲು ದಾಸರು ಮನೆಯಲ್ಲಿ ಇಲ್ಲದ್ದರಿಂದಲೂ ಒಂದು ಕಾಳು ಧಾನ್ಯವೂ ಇಲ್ಲದಿರಲು ದಾಸರಪತ್ನಿ ಮೈಲಾರಪ್ಪನ ಹೆಂಡತಿಯನ್ನು ಕೇಳಿ ಪರುಶುಶಿಲೆಯನ್ನು ತಂದು ಸ್ವಲ್ಪ ಬಂಗಾರ ಮಾಡಿ ಮಾರಿ ಮನೆಗೆ ಬೇಕಾದ ವಸ್ತುಗಳನ್ನು ತಂದಳು. ದಾಸರಿಗೆ ಈ ವಿಷಯ ಗೊತ್ತಾಗಿ ಅವರು ಆ ಎಲ್ಲಾ ವಸ್ತುಗಳನ್ನು, ಪರಶುಶಿಲೆಯನ್ನು ಚಕ್ರತೀರ್ಥದಲ್ಲಿ ಬಿಸಾಡಿದರು. ಮೈಲಾರಪ್ಪ ವಿಷಯ ತಿಳಿದು ಜಗಳಕ್ಕೆ ಬಂದ. ದಾಸರು ಬಾಲಕನೊಬ್ಬನನ್ನು ಚಕ್ರತೀರ್ಥದಲ್ಲಿ ಇಳಿಸಿ ನಾಲ್ಕು ಕಲ್ಲುಗಳನ್ನು ತರಿಸಿ ಅವನಿಗೆ ಕೊಟ್ಟರು. ಮೈಲಾರಪ್ಪ ಇವು ತನ್ನದಲ್ಲ ತನ್ನ ಪರಶುಶಿಲೆಯೇ ಬೇಕು ಎಂದಾಗ ದಾಸರು ಅವುಗಳನ್ನು ಒಂದಕ್ಕೊಂದು ತಗುಲಿಸಿ ಬಂಗಾರ ಮಾಡಿ ತೋರಿಸಿದರು. ಮೈಲಾರಪ್ಪನಿಗೆ ಜ್ಞಾನೋದಯವಾಯಿತು.

**ದಾಸರ ಗ್ರಂಥಕೆ..........ಕರೆದರು (ಕೇಳಿ ಕೇಳಿ ದಾಸರ ಸುಚರಿತ್ರವನು ೩ ರಿಂದ ೬)**

ವ್ಯಾಸರಾಯ ಸ್ವಾಮಿಗಳು ದಾಸರ ಹಾಡಿನ ಪುಸ್ತಕವನ್ನು ವ್ಯಾಸಪೀಠದಲ್ಲಿಟ್ಟು ಮಂಗಳಾರತಿ ಮಾಡಿದರು. ಇದು ಕುಹುಕಿಗಳಾದ ಪಂಡಿತರಿಗೆ ಸಹನೆಯಾಗಲಿಲ್ಲ. ಸರ್ವಜ್ಞರ ಗ್ರಂಥಗಳೊಡನೆ ಅದನ್ನು ಇಡಬಾರದು ಎನ್ನಲು, ಸ್ವಾಮಿಗಳು ನಾವಿಡದಿದ್ದರೂ ಅದು ಬಿಡುವುದಲ್ಲ ಎಂದರು. ಕುಹುಕಿಗಳು ಪುಸ್ತಕ ತೆಗೆದು ಎಸೆದರು. ಅದು ತಾನಾಗಿ ಬಂದು ವ್ಯಾಸಪೀಠದ ಮೇಲೆ ಕುಳಿತು ಕೊಂಡಿತು. ಆಗ ಸ್ವಾಮಿಗಳು ಅದನ್ನು ಪುರಂದರೋಪನಿಷತ್ತು ಎಂದು ಕರೆದರು.

**ಗುರುಗಳು.........ಪೇಳಿದರು(ಕೇಳಿ ಕೇಳಿ ದಾಸರ ಸುಚರಿತ್ರವನು ನು ೭ರಿಂದ ೧೨)**

ಒಮ್ಮೆ ಸಭೆಯಲ್ಲಿ ದಾಸರು ಅಂಗವಸ್ತ್ರವನ್ನು ಎರಡು ಕೈಗಳಿಂದಲೂ ಮುದುರಿ ಒರೆಸಿ ಗಸಗಸ ತಿಕ್ಕಿದರು. ಸ್ವಾಮಿಗಳು ಕಾರಣ ಕೇಳಿದಾಗ ವಿಠಲನ ಗುಡಿಯ ಪರದೆಗೆ ಬೆಂಕಿ ತಗುಲಿತ್ತು ಆರಿಸಿದಿ ಎಂದರು. ವಿಚಾರಿಸಲು ವಿಷಯ ಸತ್ಯ ಎಂದು ತಿಳಿಯಿತು.

**( ಕರುಣಾಕರ ಹರಿ ನು ೬) ಪಂಚ ಕರ್ಮೇಂದ್ರಿಯಂಗಳು** : ಕಣ್ಣು, ಕಿವಿ, ಮೂಗು, ನಾಲಿಗೆ, ಸ್ಪರ್ಶ ( ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ)

ಮಲಿನವಾಗಲು ಕಾರಣಕರ್ತನಾಗಿದ್ದ ಗಂಧರ್ವ ಚಿತ್ರರಥ ನಾರದರಿಂದ ವಿಷಯ ತಿಳಿದು ಅರ್ಜುನನ ಮಡದಿ ಸುಭದ್ರೆಯ ಕಾಲಿಗೆ ಬಿದ್ದು ಅವಳಿಂದ ಅಭಯ ಪಡೆಯುತ್ತಾನೆ. ಸುಭದ್ರೆ ಚಿತ್ರರಥನ ಪ್ರಾಣ ಉಳಿಸಬೇಕೆಂದು ಅರ್ಜುನನನ್ನು ಕೇಳಿಕೊಳ್ಳುತ್ತಾಳೆ. ಅರ್ಜುನ ಅದಕ್ಕೊಪ್ಪಿ ಗಂಧರ್ವವನನ್ನು ಉಳಿಸಲಾಗದಿದ್ದರೆ ಅಗ್ನಿಪ್ರವೇಶ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಕೃಷ್ಣಾರ್ಜುನರಿಗೆ ಯುದ್ಧ ನಡೆದು ಕೃಷ್ಣ ಚಿತ್ರರಥನ ತಲೆ ಕತ್ತರಿಸುತ್ತಾನೆ. ಅರ್ಜುನ ಅಗ್ನಿಪ್ರವೇಶಕ್ಕೆ ಸಿದ್ಧನಾಗುತ್ತಾನೆ. ಶ್ರೀಹರಿ ಅವನನ್ನು ತಡೆದು ಚಿತ್ರರಥನನ್ನು ಬದುಕಿಸುತ್ತಾನೆ. ಹೀಗೆ ಇಬ್ಬರ ಪ್ರತಿಜ್ಞೆಗಳು ನೆರವೇರುತ್ತದೆ. ಈ ಕಥೆಗೆ ಪ್ರೇರಣೆ ಹರಿಕತೆಯಿಂದ ದೊರೆತಿರಬಹುದು.

**ಪಾಹಿ ಪಾಹಿ ಕೇಶವ**– ದಶಾವತಾರ ಸ್ತುತಿ

ನೋಡಿ ಕೀ ೧೦ ರ ಟಿಪ್ಪಣಿ

**೮. ಶ್ರೀ ವರಮಹಾಲಕ್ಷ್ಮಿಯ ಕಥೆ**

**ಚಾರುಮತಿ**

ಕುಂಡಿನ ಎಂಬ ಪಟ್ಟಣದಲ್ಲಿದ್ದ ಬಡಬ್ರಾಹ್ಮಣನ ಹೆಂಡತಿ. ಕನಸಿನಲ್ಲಿ ದರ್ಶನ ನೀಡಿದ ಲಕ್ಷ್ಮಿಯ ಆದೇಶದಂತೆ ವರ ಮಹಾಲಕ್ಷ್ಮಿ ವ್ರತವನ್ನು ಆಚರಿಸಿದಳು.

ಭಾರ್ಗವ ವಾಸರ – ಶುಕ್ರವಾರ

ಪಂಚಪಲ್ಲವ

ನ್ಯಗ್ರೋಧ(ಆಲ) ಪಿಪ್ಪಲ( ಅರಳಿ) ಪ್ಲಕ್ಷ ( ಬಸರಿ)

ಜಂಬೂ ( ನೇರಿಳೆ ) ಚೂತ (ಮಾವು)

**(ನು ೧,೨,೩) ಆರುತಿ ಎತ್ತುತ ಚಾರುಮತಿ** :ದಶಾವತಾರಗಳು, ನೋಡಿ ಕೀ ೧೦ ರ ಟಿಪ್ಪಣಿ

**ಮಂಗಳವ ಪಾಡಿರೆ ( ೧,೨,೩)** : ದಶಾವತಾರಗಳು, ನೋಡಿ ಕೀ ೧೦ ರ ಟಿಪ್ಪಣಿ

**೯. ಶ್ರೀ ಪಾಂಡುರಂಗ ಚರಿತ್ರೆ**

ತಂದೆ ಮುದ್ದು ಮೋಹನ ವಿಠ್ಠಲದಾಸರು

ಉರಗಾದ್ರಿವಾಸ ವಿಠ್ಠಲ ದಾಸರು

ನೋಡಿ ಕೀ ೪೨ ರ ಟಿಪ್ಪಣಿ

ತಂದೆ ವೆಂಕಟೇಶ ವಿಠ್ಠಲದಾಸರು

ನೋಡಿ ಕೀ ೮೧ನು ೪ ರ ಟಿಪ್ಪಣಿ

| | |
|---|---|
| ೧೪೫ | ೨೩–೩–೧೯೬೬ |
| ೧೪೬ | ೨೩–೩–೧೯೬೬ |
| ೧೪೭ | ೧೦–೪–೧೯೬೭ |
| ೧೪೮ | ೧೦–೪–೧೯೬೭ |
| ೧೪೯ | ಶ್ರೀ ಸೌಮ್ಯನಾಮ ಸಂವತ್ಸರದ ಶ್ರೀಗುರುಕಾಣಿಕೆ ೧೯–೩–೧೯೬೯ |
| ೧೫೦ | ಶ್ರೀ ಸಾಧಾರಣ ಸಂವತ್ಸರದ ಗುರುಕಾಣಿಕೆ ೭–೪–೧೯೭೦ |
| ೧೫೨ | ೨೭–೦೩–೧೯೭೧ |
| ೧೫೩ | ೨೭–೩–೧೯೭೧ |
| ೧೫೪ | ೨೪–೩–೧೯೭೪ |
| ೧೫೫ | ೧೨–೪–೧೯೭೫ |
| ೧೫೬ | ಶ್ರೀ ಪೈಂಗಳನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಭಾನುವಾರ ೨೦–೦೩–೧೯೭೭ |
| ೧೫೭ | ಶ್ರೀ ಕಾಳಯುಕ್ತಿನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಶನಿವಾರ ೮–೪–೧೯೭೮ ರಂದು ಶ್ರೀ ಗುರುಗಳಲ್ಲಿ ಗುರುಕಾಣಿಕೆ ಸಮರ್ಪಿಸಲ್ಪಟ್ಟಿತು. |
| ೧೫೮ | ಸಿದ್ಧಾರ್ಥಿ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ಮಂಗಳವಾರ ೨೯–೩–೧೯೭೯. |
| ೧೫೯ | ೧೭–೩–೧೯೮೦ |
| ೧೬೦ | ರೌದ್ರಿ ನಾಮ ಸಂವತ್ಸರ ಚೈತ್ರಶುದ್ಧ ಪ್ರತಿಪದಿ ೧೭–೩–೧೯೮೦ |

**(ಕರುಣಾಕರ ಹರಿ ನು ೬) ಪಂಚ ಜ್ಞಾನೇಂದ್ರಿಯಗಳು** : ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ, ನಾಸಿಕ

**(ಕರುಣಾಕರ ಹರಿ ನು ೭) ಪಂಚ ಶರ** : ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ

**(ಕರುಣಾ ಕರ ಹರಿ ನು ೭) ಪಂಚತನ್ಮಾತ್ರ** ಶಬ್ದ, ಸ್ಪರ್ಶ, ರೂಪ, ರಸ, ಗಂಧ

**( ಕರುಣಾಕರ ಹರಿ ನು ೭) ಪಂಚ ಭೂತ** : ಪೃಥ್ವೀ, ಅಪ್ಪು, ತೇಜಸ್ಸು, ವಾಯು, ಆಕಾಶ

**( ಅಕ್ಷರೇಡ್ಯ ಅನಿರುದ್ಧ ನು ೮) ಪಂಚರೂಪಾತ್ಮಕ** : ಪರ, ವ್ಯೂಹ, ಅಂತರ್ಯಾಮಿ, ವಿಭವ, ಅರ್ಚಾ

**೭. ಗಾಲವ ಚರಿತ್ರೆ**

ಯಕ್ಷಗಾನ ಬಯಲಾಟಗಳಲ್ಲಿ ಜನಪ್ರಿಯವಾದ ಕೃಷ್ಣಾರ್ಜುನರ ಕಾಳಗ ಈ ಕೃತಿಯ ವಸ್ತು. ಪುರಾಣದಲ್ಲಿ ಉಕ್ತವಾಗಿರುವ ವಿಶ್ವಾಮಿತ್ರನ ಶಿಷ್ಯ ಗಾಲವ ಬೇರೆ ಈತ ಬೇರೆ. ಗಯೋಪಾಖ್ಯಾನವೆಂಬ ಹೆಸರಿನಿಂದ ಜನಜನಿತವಾಗಿರುವ ಕತೆ ಇಲ್ಲಿ ಗಾಲವ ಚರಿತ್ರೆಯಾಗಿದೆ. ಗಯನೆಂಬ ಗಂಧರ್ವ ಉಗುಳಿದ ತಂಬುಲ, ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಿದ್ದ ಕೃಷ್ಣನ ಬೊಗಸೆಯಲ್ಲಿ ಬಿದ್ದಿತು. ಕೋಪಗೊಂಡ ಕೃಷ್ಣ 'ಇಂತಹ ಅಪರಾಧ ಮಾಡಿದವನನ್ನು ಕೊಲ್ಲದೆ ಬಿಡೆನು' ಎಂದು ಪ್ರತಿಜ್ಞೆ ಮಾಡಿದ. ಇದನ್ನು ತಿಳಿದ ಗಯ ಕಂಡ ಕಂಡವರಲ್ಲಿ ಮೊರೆಯಿಟ್ಟ. ಕಡೆಗೆ ನಾರದರ ಸೂಚನೆಯ ಮೇರೆಗೆ ಅರ್ಜುನನ ಮೊರೆಹೊಕ್ಕ. ಅರ್ಜುನ ಅಭಯ ನೀಡಿದ. ವಿಷಯ ತಿಳಿದ ಕೃಷ್ಣ ಗಯನನ್ನು ಬಿಟ್ಟು ಕೊಡುವಂತೆ ಹೇಳಿ ಕಳುಹಿಸಿದ. ಪಾರ್ಥ ಮರೆ ಹೊಕ್ಕವರನ್ನು ಬಿಟ್ಟು ಕೊಡಲಾರೆ ಎಂದು ಹೇಳಿದ . ಕೃಷ್ಣಾರ್ಜುನರು ಗಯನಿಗಾಗಿ ಯುದ್ಧ ಮಾಡಬೇಕಾಯಿತು. ಆಗ ದೇವತೆಗಳೆಲ್ಲಾ ಬಂದು ಸಮಧಾನ ಪಡಿಸಿ, ಗಯನನ್ನು ಕೃಷ್ಣನ ಚರಣಗಳಿಗೆ ಅಡ್ಡಬೀಳಿಸಿ ಅಭಯಪ್ರದಾನ ಮಾಡಿಸಿದರು. ಇದು ಗಯೋಪಾಖ್ಯಾನದ ವಸ್ತು.

ಗಾಲವ ಚರಿತ್ರೆಯಲ್ಲಿ ಭಾಗವತ್ತೋತ್ತಮರಾದ ಗಾಲವರು ಒಮ್ಮೆ ಸ್ನಾನ ಮಾಡಿ ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಿರುವಾಗ, ಬೊಗಸೆಯಲ್ಲಿನ ನೀರು ಮಲಿನವಾಗಲು 'ಅಸ್ತಮಾನದೊಳವನ ಸಿರವ ತರಿವೆ' ಎಂದು ಪ್ರತಿಜ್ಞೆ ಮಾಡುತ್ತಾರೆ. ಆ ಹೊತ್ತಿಗೆ ಅಲ್ಲಿಗೆ ಬಂದ ನಾರದರು ಈ ಪ್ರತಿಜ್ಞೆ ನೆರವೇರಬೇಕಾದರೆ ಶ್ರೀ ಹರಿಯ ಮೊರೆ ಹೋಗು ಎಂದು ಹೇಳುತ್ತಾರೆ. ಅದರಂತೆ ಗಾಲವ ಹರಿಯಿಂದ ಅಭಯ ಪಡೆಯುತ್ತಾನೆ. ಅರ್ಘ್ಯದ ನೀರು

ಸಾರು – ಬಳಿ ಸೇರು
ಸಿರಿದೇವಿ – ಲಕ್ಷ್ಮೀ
ಸುಮನಸ – ದೇವತೆ
ಸೂಕರ – ಹಂದಿ
ಸೂನು – ಮಗ
ಸೋಗೆ – ಕಣ್ಣಿನ ಕುಡಿಯ ಗೆರೆ
ಸೋಜಿಗ – ಆಶ್ಚರ್ಯ
ಸೋಪಾನ – ಮೆಟ್ಟಿಲು
ಸೋಮ – ಚಂದ್ರ
ಸೋಸಿಲಿ – ಶೌಶೀಲ್ಯ, ಒಳ್ಳೆಯ ನಡತೆ
ಸೌರಣೆ – ತಯಾರಿ
ಸೌಳಸಾಸಿರ – ಹದಿನಾರು ಸಾವಿರ
ಹಂಸವಾಹನ – ಬ್ರಹ್ಮ
ಹಯ – ಕುದುರೆ
ಹರದೆ – ಹೆಂಡತಿ, ಮುತ್ತೈದೆ
ಹರಿ – ವಿಷ್ಣು, ಕೋತಿ
ಹರಿದಿನ – ಏಕಾದಶಿ
ಹಸ್ತಿ – ಆನೆ
ಹಾಟಕ – ಹಿರಣ್ಯ, ಚಿನ್ನ
ಹಾಟಕಾಶ್ಯ – ಹಿರಣ್ಯ ಕಶ್ಯಪು
ಹಿರಣ್ಯ – ಚಿನ್ನ
ಹೃದ್ಗೃಹ – ಹೃದಯವೆಂಬ ಮನೆ
ಹೇಯ – ಕೆಟ್ಟ, ಅಸಹನೀಯ

ಭಾಗೀರಥಿಯ ಪಿತ ಭಾಗವತರ ಪ್ರಿಯ
ಯೋಗಿಗಳರಸನೆ ಬಾಗಿ ನಮಿಸುವೆನು ಅ.ಪ

ಸೃಷ್ಟಿಗೊಡೆಯ ದೇವ ಶ್ರೀ ಕೇಶವಾ
ಭಕ್ತವತ್ಸಲ ಸ್ವಾಮಿ
ಭಕ್ತರ ಶೃತಿಗೆ ನೀ ಅತ್ಯಂತ ಹರುಷದಿ
ಚಿತ್ತದಿ ಹೊಳೆಯುವ ಉತ್ತಮ ಶ್ರೀಹರಿ ೧

ಅಂದಿಗೆ ಪಾಡಗವು ಪೈಜನಿ ರುಳಿ
ಗುಂಡುಬಿಂದಲಿ ನೀಡುವೆ
ಅಂಗಿತೊಡಿಸಿ ಜರದವಲ್ಲಿ ಹೊದಿಸುವೆ ಉ-
ತ್ತುಂಗ ಮಹಿಮ ಸಾಧುಸಂಗ ವಂದಿತ ದೇವ ೨

ಕಮಲ ಸಂಭವ ಪಿತನೆ ಕರುಣಿಸಿ ಎನ್ನ
ಮನಕೆ ಹರುಷ ನೀಡೈ
ದಿನಕರ ತೇಜ ಶ್ರೀ ಕಮಲನಾಭ ವಿಠ್ಠಲ
ಸುವಿನಯದಿಂದಲಿ ನಮಿಸಿ ಬೇಡುವೆ ನಿನ್ನ ೩

## ಪದ್ಯ

ಇಂದಿರಾಪತಿ ಕೃಷ್ಣ ಇಂದು ನಮ್ಮನೆಗಳು
ಪೊಂದಿದ್ದ ದುರಿತಗಳ ಕಳೆವೆ ಮುದದಿ ೧

ತಂದೆ ತಾಯ್ಗಳ ಬಿಟ್ಟು ಬರಲಾರೆ ಎಂಬೆಯಾ
ತಂದೆ ತಾಯ್ಗಳು ಯಾರೊ ಹರಿಯೆ ನಿನಗೆ ೨

ಒಡಹುಟ್ಟಿದವರನ್ನು ಬಿಡಲಾರೆ ಎಂಬೆಯ
ಕಡುಕೋಪ ತಾಳಿ ಕಂಬದಲಿ ಬಂದಿ ೩

ಬಂಧು ಬಳಗವು ಬಿಟ್ಟು ಬರಲು ಮನಸಿಲ್ಲವೆ
ನಿಂದಲ್ಲಿ ಬಂಧು ಬಳಗಗಳು ನಿನಗೆ ೪

ಭಕ್ತರನು ಬಿಟ್ಟು ನಾ ಬರಲೊಲ್ಲೆನೆಂದರೆ
ಭಕ್ತರ ಹೃದಯವೇ ವಾಸ ನಿನಗೆ ೫

ಏನು ಹೇಳಲು ನಿನ್ನ ಬಿಡುವಳಲ್ಲ
ಶ್ರೀ ನಿಧಿಯೆ ಬೇಗ ಬಾ ತಡೆಯದೀಗ ೬

ನಾನೆತ್ತಿಕೊಂಡು ಕರದೊಯ್ವೆ ನಿನ್ನ
ಮಾಧವನೆ ಬಾರೆಂದೆತ್ತಿದಳು ಶ್ರೀಶನ ೭

## ಆರ್‍ಯ

ಇಂದಿರೆಯರಸನ ಕರದೊಯ್ವೆನು ವರ
ಮಂದಗಮನೆ ತಡಮಾಡದಲೆ
ಚಂದದಿ ಆಡಿಸಿ ಪಾಡಿ ತೂಗುವೆನು
ಎಂದು ಕರೆದು ತಂದಳು ಮನೆಗೆ

## ವಚನ

ನೋಡು ಶ್ರೀ ಕೃಷ್ಣ ನಿನ್ನಾನಾಡಿಸಿ ಜೋಗುಳುವ
ಪಾಡಿ ತೂಗುವೆನೆಂದು ಪರಮ ಸಂಭ್ರಮದಿಂದ
ಜೋಡು ಮುತ್ತನು ಬಿಗಿದ ಸರಪಣಿಗೆ ಹಾಕಿದಳು
ತೂಗುತಲೆ ಮುತ್ತು ರತ್ನಗಳು ಝಳ ಝಳಪಿಸಲು
ಸಾಗರದಿ ಸರ್ಪನ ಮೇಲೆ ಮಲಗಿದ ಹರಿಯಾ
ಪಾಡಿ ತೂಗಿದಳಾಗ ರಾಧೆ ಬಲು ಹರುಷದಿಂದ

ಜೋ ಜೋ ಜೋ ಜೋ ನಂದಕುಮಾರ
ಆನಂದ ಮುಕುಂದ
ಗೋಪಿಯ ಕಂದ
ಜೋ ಜೋ ಜೋ ಮಲಗೊ ಪ

ಸೋಜಿಗವಾಗಿದೆ ಶ್ರೀ ಕೃಷ್ಣ ನಿನ್ನನು
ಪಾಡಿ ತೂಗುವೆನು ಪರಮಾತ್ಮನೆ ನಿನ್ನ ಅ.ಪ

ರಾವುತ – ಕುದುರೆ ಸವಾರ
ರುಳಿ – ಕಾಲಂದುಗೆ
ಲಲಾಟ – ಹಣೆ
ಲವ – ಸ್ವಲ್ಪ
ವಟಪತ್ರಶಾಹಿ – ಆಲದೆಲೆಯ ಮೇಲೆ ಮಲಗಿದವ
ವಟು – ಬ್ರಹ್ಮಚಾರಿ ಹುಡುಗ
ವತ್ಸ – ಕರು
ವನಜಜಾಂಡ – ಬ್ರಹ್ಮಾಂಡ
ವನಧಿ – ಸಮುದ್ರ
ವರಸೆ – ವಂಶ, ಮನೆತನ
ವಲ್ಲಿ – ಅಂಗವಸ್ತ್ರ
ವಸನ – ಬಟ್ಟೆ
ವ್ಯಜನ – ಬೀಸಣಿಗೆ
ವಾರಿ – ನೀರು
ವಾರಿಧಿ – ಸಮುದ್ರ
ವಾರಿಣಿ – ವರುಣನ ಹೆಂಡತಿ
ವಾವೆ – ನಂಟು, ಸಂಬಂಧ
ವಾಸವ – ಇಂದ್ರ
ವ್ಯಾಳ – ಸರ್ಪ
ವ್ಯಾಳ್ಯಾ – ವೇಳೆ
ವಿತತ – ವಿಸ್ತಾರ
ವಿಧಿಸುತ – ನಾರದ
ವಿತುಲ – ಶುದ್ಧ, ದೋಷರಹಿತ
ವಿನುತಸುತ – ಗರುಡ
ವಿವರ್ಜಿಸು – ದೂರಮಾಡು
ವಿಹಂಗ – ಪಕ್ಷಿ

ವೃತ್ರಾರಿ – ಇಂದ್ರ
ವೈನತೇಯ – ಗರುಡ
ವ್ಯೋಮ – ಆಕಾಶ
ಶಂಬರಾರಿ – ಮನ್ಮಥ
ಶಂಭು – ಶಿವ
ಶರ್ವ – ಶಿವ
ಶಶಿ – ಚಂದ್ರ
ಶ್ರವಣ – ಕೇಳುವುದು
ಶ್ವಾನ – ನಾಯಿ
ಶುಕ – ಗಿಳಿ
ಶುಭ್ರ – ರೂಪಾಯಿ, ಬೆಳ್ಳಿ
ಶೂಲಿ – ಶಿವ
ಶೇಷಗಿರಿ – ತಿರುಪತಿ ಬೆಟ್ಟ
ಶೌರಿ – ಕೃಷ್ಣ
ಸಂಕರ – ಬೆರಕೆ
ಸಂದಣಿ – ಗುಂಪು
ಸನ್ಮತ – ಒಪ್ಪಿಗೆ
ಸಮಯ – ಹೊತ್ತು, ಧರ್ಮ, ಮತ
ಸರಸಿಜಾಸನ – ಬ್ರಹ್ಮ
ಸವ್ಯಸಾಚಿ – ಅರ್ಜುನ
ಸಾರಂಗ – ಚಿಕ್ಕೆಗಳನ್ನುಳ್ಳ ಗಂಡು ಚಿಗರೆ
ಸಾರ – ಅತ್ಯುತ್ತಮ
ಸಾರಣೆ – ಲೇಪಿಸು, ಬಳಿಯುವುದು
ಸಾರಸ – ಕೊಕ್ಕರೆ, ಕಮಲ, ನೀರಹಕ್ಕಿ

ನೀರೊಳು ಮುಳುಗಿ ವೇದವ ತಂದ ಭಾರವನೆ ಪೊತ್ತ
ಕೋರೆದಾಡೆಯಲಿ ಭೂಮಿಯನೆ ತಂದ ಕಂಬದಲಿ ಬಂದ
ಮೂರಡಿ ಭೂಮಿಯ ಬೇಡುತನಿಂದ, ಕೊಡಲಿಯನೆ ಪಿಡಿದ
ನಾರು ಸೀರೆಯನುಟ್ಟು ನಾರಿಯನರಸಿದ
ಮಾವನ ಕೊಂದು ಮಧುರೆಲಿ ನಿಂದ ೧

ಗೊಲ್ಲರ ಮನೆಯಲಿ ಬೆಣ್ಣೆಯ ತಿಂದ ಪಾಲ್ಮೊಸರನೆ ಸವಿದ
ನಿಲ್ಲದೆ ಗೋಪೇರ ಸಂಗಡ ಮೆರೆದ ವಸನಂಗಳ ಕದ್ದ
ಗುಲ್ಲು ಮಾಡುತ ಬರಿಮಯ್ಯಲಿ ನಿಂದ ಕುದುರೆಯನೆ ಏರಿದ
ಎಲ್ಲಿ ನಿನಗೆ ಸರಿ ಇಲ್ಲವೊ ಜಗದೊಳು
ಬಲ್ಲಿದ ಹರಿ ಶ್ರೀಮಲ್ಲ ಮರ್ಧನನೆ ೨

ಶ್ರೀ ಕೇಶವನಾರಾಯಣ ಮಾಧವ ಗೋವಿಂದನೆ ಶರಣು
ಶ್ರೀ ವಿಷ್ಣು ಮೂರುತಿ ಮಧಸೂದನನೆ ತ್ರಿವಿಕ್ರಮ ಮೂರುತಿ
ಶ್ರೀ ವಾಮನ ಶ್ರೀಧರ ಹೃಶಿಕೇಶನೆ ಶ್ರೀ ಪದ್ಮನಾಭಹರೇ
ಶ್ರೀ ದಾಮೋದರ ಶ್ರೀದ ಶ್ರೀಕಮಲನಾಭ
ವಿಠ್ಠಲ ಮನನಲಿದು ಪಾಡುವೆನು ೩

## ವಚನ

ಹೀಗೆ ಪಾಡುತ ರಾಧೆ ತೂಗಿ ಶ್ರೀ ಕೃಷ್ಣನನು
ಬೇಗ ನಿದ್ರೆಯು ಮಾಡುವಂತೆ ಮಾಡುತಲಾಗ
ಸಾಗರ ಶಯನನಿಗೆ ಹಾಸಿ ಹೊದಿಸುತ ಬೇಗ
ಹೀಗೆ ಕಾಲವು ಕಳೆಯುತಿರಲು ಆ ತರುಣಿಯು
ಬೇಗನೆಚ್ಚೆತ್ತೆದ್ದು ಯೋಗಿ ವಂದ್ಯನು ಪರರ
ಆಲಯಗಳಿಗೆ ಪೋಗೆ ಬೇಗ ಕರತರವಳು
ಆಗ ಶ್ರೀಹರಿಗೆ ಬಿಸಿನೀರನೆರೆಯುತ ಭರದಿ
ತೂಗೋ ತಕ್ಕಡಿ ಮುತ್ತು ರತ್ನದಾಭರಣಗಳ
ಶ್ರೀಧರಗೆ ತೊಡಿಸುತ್ತ ಭಾರಿ ಪೀತಾಂಬರವ
ನುಡಿಸಿ ಶೃಂಗಾರ ಮಾಡಿ ನುಡಿದಳು ಶ್ರೀಹರಿಗೆ

ಬಕುಳ ಪುಷ್ಪ – ರಂಜೆಹೂ
ಬಟ್ಟೆ – ಭಕ್ಷ್ಯ
ಬಣಗು – ಕೀಳು
ಬವಣೆ – ಕಷ್ಟ
ಬಹಿರ ಭೂಮಿ – ಹೊರಗಡೆ ಮಲವಿಸರ್ಜನೆಗೆ ಹೋಗುವುದು
ಬಿಂದಲಿ – ಎಳೆಯ ಮಕ್ಕಳ ಮುಂದಲೆಯ ಆಭರಣ
ಬಿನಗು – ನೀಚ
ಬಿಸಜ – ತಾವರೆ
ಬುಧ – ಪಂಡಿತ
ಭರಣಿ – ಡಬ್ಬಿ
ಭವ – ಸಂಸಾರ, ಜನ್ಮ
ಭವಾಟವಿ – ಭವವೆಂಬ ಅಡವಿ
ಭಾಂಡ – ಪಾತ್ರೆ
ಭಾಮ – ಕಾಂತಿ
ಭಾರ್ಗವ ವಾಸರ – ಶುಕ್ರವಾರ
ಭಾಷಿಕ – ಮಾತು ನಡೆಸುವವ?
ಭುಕ್ತಿ – ಭೋಜನ
ಭುಜಗ – ಸರ್ಪ
ಭೌಮ – ಭೂಮಿಗೆ ಸಂಬಂಧಿಸಿದ
ಮಂತಣೆ – ಕಡೆಯುವುದು
ಮಲಕು – ಕುಣಿಕೆ ಗಂಟು ಹಾಕು
ಮಲಿನ – ಕೊಳಕು
ಮರುತಮತ – ಮಧ್ವಮತ
ಮಹಂತಾ – ಹಿರಿಯ ಶ್ರೇಷ್ಠ
ಮಹತಿ – ನಾರದರ ವೀಣೆ
ಮಹಿತ – ಪೂಜ್ಯ
ಮಹೀಪಾಲ – ಅರಸು, ರಾಜ
ಮಾ – ಲಕ್ಷ್ಮೀ
ಮಾತರಿಶ್ವ – ವಾಯು
ಮಾದಳ – ಒಂದು ಜಾತಿಯ ಹಣ್ಣು
ಮಾರುತ – ವಾಯು
ಮಿಥ್ಯ – ಸುಳ್ಳು
ಮಿಸುಣಿ – ಚಿನ್ನ
ಮುಂಜಿ – ಉಪನಯನ
ಮುದ್ರಿಕೆ – ಸಂಕೇತವನ್ನು ಕೆತ್ತಿದ ಉಂಗುರ
ಮೂರು ಏಳು – ಇಪ್ಪತ್ತೊಂದು
ಮೃಡ – ಶಿವ
ಮೃತ್ತಿಕೆ – ಮಣ್ಣು
ಮೇರು – ಒಂದು ಪರ್ವತ, ದೊಡ್ಡ
ಮೋದ – ಸಂತೋಷ
ಮೋದಕ – ಕಡುಬು
ಮೌಕ್ತಿಕ – ಮುತ್ತು
ರಘುಪ – ರಾಮ
ರದನ – ಹಲ್ಲು
ರಸಕಸೆ – ಕಕ್ಕುಲತೆ, ಆಸೆ
ರಾಜಾವರ್ತ – ಒಂದು ಬಗೆಯ ನೀಲ ರತ್ನ

ನಾಕೇಶ – ಇಂದ್ರ
ನಾಗಾರಿ – ಗರುಡ
ನಾರಗ – ನಾರಾಯಣ
ನಾಸಿಕ – ಮೂಗು
ನಿಕರ – ಗುಂಪು, ಸಮೂಹ
ನಿಬ್ಬಣ – ದಿಬ್ಬಣ
ನಿರ್ಲೇಪ – ಲೇಪವಿಲ್ಲದಂತೆ
ನಿಶಿ – ರಾತ್ರಿ
ನೀಗಿಸು – ಹೋಗಲಾಡಿಸು
ನೀಟು – ನೇರವಾಗಿ (ಕೊಂಕಿಲ್ಲದೆ)
ನೀರಧಿ – ಸಮುದ್ರ
ನೆಗಳೆ – ಮೊಸಳೆ
ನೆಲುವು – ಪಾತ್ರೆ ಇಡಲು ಎತ್ತರದಲ್ಲಿ ಇಳಿಬಿಟ್ಟ ಹಗ್ಗದ ಜಾಳಿಗೆ
ನೊಸಲು – ಹಣೆ
ನೌಬತ್ತು – ಮಂಗಳಸೂಚಕ ವಾದ್ಯ
ಪಂಕಜ ಪಾಣಿ – ಕಮಲವನ್ನು ಕೈಯಲ್ಲಿ ಹಿಡಿದವಳು
ಪಣವ – ದುಂದುಭಿ
ಪತ್ರ – ಎಲೆ
ಪದುಮಜಾಂಡ – ಬ್ರಹ್ಮಾಂಡ
ಪದುಳ – ನೆಮ್ಮದಿ
ಪನ್ನಂಗ – ಪಲ್ಲಂಕ, ಮಂಚ
ಪನ್ನಗವೇಣಿ – ಹಾವಿನಂತೆ ಜಡೆ ಉಳ್ಳವಳು
ಪರಮೇಷ್ಠಿ – ಬ್ರಹ್ಮ, ಶಿವ
ಪರಶು – ಕೊಡಲಿ
ಪವಡಿಸು – ಮಲಗು
ಪವನ – ವಾಯು
ಪವನಮತ – ಮಧ್ವಮತ
ಪವಮಾನ – ವಾಯು
ಪವಮಾನ ಮತ – ಮಧ್ವಮತ
ಪಾಕ – ಅಡಿಗೆ
ಪಾಕಶಾಸನ – ಇಂದ್ರ
ಪಾದ್ಯ – ಪಾದ ತೊಳೆಯುವ ನೀರು
ಪಾವಕ – ಬೆಂಕಿ
ಪಾವಡಿ /ಪಾವಡ – ತಲೆಯ ರುಮಾಲು
ಪಾಹಿ – ಕಾಪಾಡು
ಪಿಕ – ಕೋಗಿಲೆ
ಪುಚ್ಛ – ಬಾಲ
ಪುನ್ನಾಗ – ಸುರಹೊನ್ನೆ
ಪುಬ್ಬು – ಹುಬ್ಬು
ಪುರಂದರ – ಇಂದ್ರ
ಪೃಥ್ವಿ – ಭೂಮಿ
ವೈಶ್ವದೇವ – ಅಗ್ನಿ
ಪೊಕ್ಕಳು – ಹೊಕ್ಕಳು
ಪೋರ – ಚಿಕ್ಕಹುಡುಗ
ಪ್ರಣವ – ಓಂಕಾರ
ಪ್ರಭಂಜನ – ವಾಯು, ಬಿರುಗಾಳಿ
ಪ್ರಾಜ್ಞ – ತಿಳಿದವನು, ನಿಪುಣ
ಫರಂಗಿಯರು – ವಿಲಾಯಿತಿ, ಇಂಗ್ಲಿಷರು
ಫಾಲ – ಹಣೆ
ಬಂಡಿ ಬೋವ – ಸಾರಥಿ

ಬಾರೆನ್ನ ದೊರೆಯೆ ಭಕ್ತರ ಭಾಗ್ಯಸುರಧೇನು
ನೋಡುವೆನು ಕಣ್ದಣಿಯ ಮಾಧವನೆ ಬಾರೆನುತ
ಪೂದೋಟದೊಳಗೆ ಕರೆದೊಯ್ದು ಆಟವನಾಡುತ

ಆಟವಾಡುವ ಬಾರೊ ಶ್ರೀಹರಿಯೆ ಬೇಗ
ಕೋಟಿ ಜನ್ಮದ ಪುಣ್ಯ ಫಲಿಸಿತೊ ಎನಗಿಂದು ಪ

ಪನ್ನಗಶಯನ ಪನ್ನೀರು ಕೊಳವ ನೋಡು
ರನ್ನ ಮಾಣಿಕ್ಯ ಸೋಪಾನವಿದೆ
ಘನ್ನ ಗಿಳಿಗಳು ನಿನ್ನ ಧ್ಯಾನಮಾಡುತಲಿದೆ ಪ್ರ-
ಸನ್ನನಾಗೆನುತ ಕೋಗಿಲೆಯು ಕೂಗುತಲಿದೆ
ಧನ್ಯಳು ರಾಧೆ ಎನುತಲಿ
ಚನ್ನ ಸ್ವರಗಳು ಕೇಳ ಬರುತಿದೆ
ಇನ್ನು ಎನಗೆ ಪ್ರಸನ್ನನಾಗು ಶ್ರೀ-
ಚನ್ನ ಕೇಶವ ಮಾಧವ ಹರಿ ೧

ಬಿನ್ನಹ ನುಡಿಕೇಳಿದ ಭಕ್ತರ ದೊರೆ
ಮನ್ನಿಸಿ ಮಾತಾಡಿದ
ನಿನ್ನ ಮನಸಿನ ಕೋರಿಕೆಗಳನು
ಇನ್ನು ತಡಮಾಡದಲೆ ಪೇಳುನೀ
ನಿನ್ನ ಮನದಿಷ್ಟಗಳ ಸಲಿಸುವೆ
ಸನ್ನುತಾಂಗಿಯೆ ಸಂಶಯವ ಬಿಡು
ಬಿನ್ನವಿಸು ನಿನ್ನಯ ಮನೋಗತ
ಇನ್ನು ತಡಮಾಡದಲೆ ಬೇಗದಿ
ಮನ್ನಿಸೀಗಲೆ ನಿನಗೆ ವರಗಳ
ಇನ್ನು ದಯಪಾಲಿಸುವೆ ಸುಂದರಿ ೨

ಹರಿಯ ಮಾತನು ಕೇಳುತ
ಹರುಷದಿ ರಾಧೆ

ಮನದೊಳಗ್ಹರುಷಿಸುತ
ಪರಮ ಸಂಭ್ರಮದಿಂದ ನುಡಿದಳು
ಹರಿಯ ಕೈ ಪಿಡಿಯುತಲಿ ನಲಿಯುತ
ಹರಿಯ ಭಕ್ತರ ಮನದಭೀಷ್ಟವ
ಸಲಿಸು ಶ್ರೀ ಹರಿ ಕೃಷ್ಣಶೌರಿ
ಹಗಲಿರುಳು ನಿನ್ನ ಬಿಡಲಾರೆ ಶ್ರೀ-
ಕಮಲನಾಭ ವಿಠ್ಠಲನೆ ನಲಿದು
ಅಗಲದಂತಿರು ಎನ್ನ ಮನದಲಿ
ನಗಧರನೆ ಕೈ ಮುಗಿದು ಬೇಡುವೆ ೩

## ವಚನ

ಬೇಡಿದೊರಗಳ ಕೊಡುವೆ ಮಾಡದಿರು ಚಿಂತೆಯನು
ಮಾಡಿರುವಿ ಸೇವೆಯನು ಮನಮೆಚ್ಚುವಂದದಲಿ
ನೀಡುವೆನು ಅಭಯ ನಿರ್ಭಯದಿವರ್ತಿಸು ಎನಲು
ನೋಡಿದಳು ಮಂದಹಾಸದಿ ಹರಿಯ ಮುಖಚಂದ್ರ
ನಾಡೊಳಗೆ ಈ ಪುಣ್ಯಕೆ ಎಣೆಗಾಣೆನೆಂದೆನುತ
ಮನದೊಳಗೆ ಹರುಷಿಸುತ ಸಲಹೊ ಶ್ರೀ ಹರಿ ಎನ್ನುತ

## ಆರ‍್ಯ

ಈ ಪರಿಯಿಂದಲಿ ರಾಧೆಯು ಹರುಷದಿ
ಆ ಪರಮಾತ್ಮನ ಪೊಗಳುತಲಿ
ತಾಪಸವಂದ್ಯನ ಸೇವಿಸುತೀಪರಿ
ಬಹುದಿನಗಳ ಕಳೆಯುತಲಿರಲು ೧

ಬಗೆ ಬಗೆ ಆಟಗಳಿಂದಲಿ ರಾಧೆಗೆ
ನಗಧರ ಹುರಷಗೊಳಿಸುತ
ಖಗವಾಹನನೊಡಗೂಡುತ ರಾಧೆಯು
ಮಿಗೆ ಹರುಷದಿ ಕಾಲವ ಕಳೆಯೆ ೨

ಜಲ್ಲರಿ>ಜಾಲರಿ – ಹೂ ಸರಗಳನ್ನು ತೂಗಾಡಿಸುವುದು
ಜವ – ವೇಗ
ಜವ – ಯಮ
ಜಾಗರ – ಜಾಗರಣೆ, ಎಚ್ಚರ ಇರುವುದು
ಜಿಷ್ಣು – ಜಯಶಾಲಿ, ಅರ್ಜುನ, ಇಂದ್ರ
ಜಿಹ್ವೆ – ನಾಲಿಗೆ
ಜೋಕು – ಠೀವಿ
ಜೋಳಿಗೆ – ಚೀಲ
ಝಳಪು – ಹೊಳಪು
ಟೊಂಕ – ಸೊಂಟ
ಡಂಬಕ – ಮೋಸಗಾರ, ವಂಚಕ
ತಂಡುಲ – ಅಕ್ಕಿ
ತನಯ – ಮಗ
ತಬಕು – ಎಲೆಅಡಿಕೆ ತಟ್ಟೆ
ತರಣಿ – ಸೂರ್ಯ
ತರಳ – ಹುಡುಗ
ತರಿದ – ಕತ್ತರಿಸಿದ
ತವ – ನಿನ್ನ
ತಳಿರು – ಚಿಗುರು
ತಾಡನ – ಬಡಿಯುವಿಕೆ, ಒದೆಯುವುದು
ತಾಪತ್ರಯ – ಆಧಿದೈವಿಕ, ಆಧ್ಯಾತ್ಮಿಕ, ಆಧಿ ಭೌತಿಕ ಎಂಬ ಮೂರು ತಾಪಗಳು
ತೃಣ – ಹುಲ್ಲು
ತ್ವರದಿ – ಬೇಗ, ಶೀಘ್ರ
ತ್ರಿಗುಣ – ಸತ್ವ, ರಜಸ್, ತಮೋ
ತ್ರಿಜಗತ್ – ಮೂರುಲೋಕ
ತಿತ್ತಿರಿ – ತೂತ್ತೂರಿ
ತುಡುಗ – ಕಳ್ಳ, ಮೋಸಗಾರ
ತುರು – ದನ
ತುಷ್ಟ – ತೃಪ್ತ
ತೇಜಿ – ಕುದುರೆ
ತೋಕ – ಸಂತತಿ, ಮಗ
ತೋಯ – ನೀರು
ತೋಯಜ – ಕಮಲ
ತೋರ – ದಪ್ಪ, ದೊಡ್ಡ
ತೋಷ – ಆನಂದ, ಸಂತೋಷ
ಥಾಲಿ>ತಾಲಿ – ಜಲಪಾತ್ರೆ, ಗಿಂಡಿ
ದಂತ – ಹಲ್ಲು
ದಂತಧಾವನೆ – ಹಲ್ಲು ಉಜ್ಜುವುದು
ದಲ್ಲಣ – ನಾಶ ಮಾಡುವವ
ದಾನವಾರಿ – ಕೃಷ್ಣ, ವಿಷ್ಣು
ದಿತಿಜರು – ರಾಕ್ಷಸರು
ದೈತ್ಯ – ರಾಕ್ಷಸ
ದ್ವಂದ್ವ – ಎರಡು
ದೋರ – ದ್ವಾರ. ಬಾಗಿಲು
ಧರಣಿಸುತೆ – ಸೀತೆ
ನಖ – ಉಗುರು
ನರಮೃಗ – ನರಸಿಂಹ
ನಕ್ರ – ಮೊಸಳೆ

ಕರಿ – ಆನೆ
ಕರಿಪುರ – ಹಸ್ತಿನಾಪುರ
ಕಲ್ಹಾರ – ನೈದಿಲೆ
ಕಶ್ಯಪನ ಕಂದ – ಗರುಡ
ಕಳತ್ರ – ಹೆಂಡತಿ
ಕಾಂಚಿದಾಮ – ಒಡ್ಯಾಣ, ಸೊಂಟಪಟ್ಟಿ
ಕಾಮ್ಯ – ಬಯಸಿದ
ಕಾಯಜ – ಮನ್ಮಥ
ಕೀರ – ಗಿಳಿ
ಕುಂದ ಕುಸುಮ – ಮಲ್ಲಿಗೆ ಹೂ
ಕುಂದಣ – ಚಿನ್ನದಲ್ಲಿ ಹರಳನ್ನು ಕೂಡಿಸುವುದು
ಕುಂದಣ – ಅಪ್ಪಟ ಚಿನ್ನ
ಕುಂಭ – ಮಡಕೆ
ಕುಜನರು – ಕೆಟ್ಟಜನರು, ದುಷ್ಟರು
ಕುಕ್ಷಿ – ಹೊಟ್ಟೆ
ಕುಟಿಲ – ಮೋಸ
ಕುಠಾರ – ಕೊಡಲಿ
ಕುಲಾಲ – ಕುಂಬಾರ
ಕೂಪ – ಬಾವಿ
ಕ್ಲೇಶ – ಕಷ್ಟ, ದುಃಖ
ಕ್ರೋಡ – ಹಂದಿ
ಕೋಲ – ಮುಖವಾಡ, ಹಂದಿ
ಖಳ – ನೀಚ, ರಾಕ್ಷಸ
ಗದ್ದುಗೆ – ಪೀಠ
ಗಳ – ಕೊರಳು, ಕುತ್ತಿಗೆ
ಗಾಡನೆ – ಬೇಗ
ಗಾಢ – ಉದ್ದೇಶ ಪೂರ್ಣ ಉತ್ತೇಜಿತ
ಗಾರು – ಕಾಡು, ಹಾಳು ಮಾಡು
ಗಾವುದ – ನಾಲ್ಕು ಹರದಾರಿ (೧೨ ಮೈಲು)
ಗುಡ – ಬೆಲ್ಲ
ಗುಪಿತ – ಗುಪ್ತ, ಗುಟ್ಟು
ಗುರುಳು – ಗುಂಗುರು ಕೂದಲು
ಗೋಮೇದಿಕ – ನೇರಳೆಬಣ್ಣದ ರತ್ನ
ಗ್ರಾಸ – ಆಹಾರ
ಘನ – ದೊಡ್ಡ
ಘಾಸಿ – ನೋವು, ಕಷ್ಟ
ಚಂಪಕ – ಸಂಪಿಗೆ
ಚಲ್ಲಣ – ಚಡ್ಡಿ
ಚಾಗು – ಕೊಂಡಾಟದ ನುಡಿ
ಚಾರು – ಮನೋಹರ
ಚಿದ್ರೂಪ – ಜ್ಞಾನವೇ ರೂಪಗೊಂಡದ್ದು, ಪರಮಾತ್ಮ
ಚೀರ – ಹರಕು ಬಟ್ಟೆ, ನಾರು ಬಟ್ಟೆ
ಚೌಕುಳಿ – ನಾಲ್ಕು ಹರಳುಗಳ ಕಿವಿಯ ಆಭರಣ
ಜಂಬೀರ – ಲಿಂಬೆ
ಜಂಬುಫಲ – ನೇರಳೆ ಹಣ್ಣು
ಜತ್ತು – ಜೊತೆ
ಜತ್ತಿಲಿ – ಜೊತೆಯಲ್ಲಿ

ಬಗೆ ಬಗೆ ಪೂದೋಟಗಳಲಿ ಶ್ರೀಹರಿ
ಸೊಗಸಿನಿಂದ ರಾಧೆಯ ಕೂಡಿ
ನಗಧರನಾಡಿದ ಲೀಲೆಗಳೆಲ್ಲವು
ಗಗನದಿ ಸುರರೆಲ್ಲರು ನೋಡಿ ೩

ಮಧುಸೂಧನನಿಗೂ ಸುದತಿ ರಾಧೆಗೂ
ಮದುವೆಯ ಮಾಡಬೇಕೆಂದೆನುತ
ಒದಗಿಸಿ ಸೌರಣೆ ನಡೆಸಿದರಾಗಲೆ
ವಧುವರರಿವರೆನ್ನುತ ಬೇಗ ೪

ಈ ಪರಿ ವೈಭವ ನೋಡಲು ಗಗನದಿ
ಭೂಪರೆಲ್ಲ ನೆರೆದರು ಭರದಿ
ಶ್ರೀಪತಿ ಕಮಲನಾಭ ವಿಠ್ಠಲನ
ವಿವಾಹ ನೋಡುವೆವೆನ್ನುತ ಜವದಿ ೫

## ಭಾಮಿನಿ ಷಟ್ಪದಿ

ಬಂದರಾಗಲೆ ದೇವತೆಗಳು ಆ–
ನಂದಗೋಪನ ಮಂದಿರದೊಳು
ಚಂದದಿಂ ಕುಳಿತಾಗ ಮಾತುಗಳಾಡುತಿರೆ ಮುದದಿ
ಪೊಂದಿ ಹರುಷವ ನಂದಗೋಪನು
ಮಂದಿಗಳಿಗ್ಹೇಳಿದನು ವಿನಯದಿ
ಇಂದೆ ಶ್ರೀಹರಿ ಲಗ್ನವೆಂದೆನ್ನುತಲಿ ಪೇಳಿದನು

## ವಚನ

ಹೀಗೆ ನುಡಿಯಲು ಗೋಪ ಆ ಪುರದ ಜನರೆಲ್ಲ
ಬೇಗ ಹರುಷವಗೊಂಡು ಆ ಪುರವ ಶೃಂಗರಿಸೆ
ಬೀದಿ ಬೀದಿಗಳಲ್ಲಿ ಕಸ್ತೂರಿ ಸಾರಣೆಯು
ಪನ್ನೀರುಗಳನೆ ಚೆಲ್ಲಿ ಘಮಿಘಮಿಪ ಗಂಧಗಳು
ಅಲ್ಲಲ್ಲಿ ಇಡಿಸಿಹರು ಚಲ್ವ ಕನ್ನಡಿಗಳನು

ಮನೆ ಮನೆಗೆ ತೋರಣವು ಗೊನೆ ಬಾಳೆ ಕಟ್ಟಿಹರು
ಆಣೆ ಮುತ್ತಿನ ಗೊಂಚಲುಗಳಿಂದ ಶೃಂಗರಿಸಿ
ಅಮರಾವತಿಯನು ಅಣಕಿರುವಂಥ ವೈಭವವು
ಚಿತ್ರವಿಚಿತ್ರದಿ ಪುರವ ಶೃಂಗರಿಸಿರಲು
ಸತ್ಯಭಾಮೆಯ ರಮಣನಿಗೆ ವಿವಾಹವು ಎಂದು
ಎತ್ತಿ ಡಂಗುರ ಹೊಯ್ದರು ಬಹಳ ಸಂಭ್ರಮದಿ
ಅರ್ಥಿವೈಭವ ವರ್ಣಿಸಲು ಆದಿಶೇಷನಿಗೆ ಮಿಗಿಲೆನುತ

### ಆರ‍್ಯ

ಬಂದರು ಮಂದಿಗಳೆಲ್ಲರು ಬೇಗದಿ
ನಂದಗೋಪನ ಗೃಹದಲ್ಲಿ
ಚಂದದಿ ಮದುವೆಯ ಸಂಭ್ರಮ ನೋಡಲು
ಮುಂದೆ ಮುಂದೆ ಬರುತಿರಲಾಗ

### ವಚನ

ಬಂದವರಿಗಾದರವು ನಂದಗೋಪನು ನಡೆಸಿ
ಚಂದದಿಂದುಪಚರಿಸಿ ಆದರದಿ ಕುಳ್ಳಿರಿಸಿ
ಮಂದಹಾಸದಿ ಮಾತನಾಡುತಲಿ ನಲಿದಾಡೆ
ಇಂದಿರೇಶನ ವಿವಾಹ ಚಂದದಿಂದಲಿ ನಡಸುತಿರಲು

ನಂದಗೋಪನು ಮುದದಿ ಮಂದಿಗಳ ಮಧ್ಯದಲಿ
ನಾಂದಿ ಪೂಜೆಯ ಮಾಡಿ ಹರುಷ ಪಡುತ ೧

ಲಗ್ನ ಮಂಟಪದೊಳಗೆ ಮುದ್ದು ಗೋಪಾಲನು
ಭದ್ರೆರಾಧೆಸಹಿತ ಕುಳ್ಳಿರಿಸುತ ೨

ಇವರಿಬ್ಬರ ನಡುವೆ ಮಹಿತದಂತ:ಪಟವ
ವಿಹಿತದಿಂದಲಿ ಪುರೋಹಿತರು ಪಿಡಿದು ೩

ಆಚಮನ – ಅಂಗೈಯಲ್ಲಿ ನೀರನ್ನುಹಾಕಿಕೊಂಡು ಮಂತ್ರಪೂರ್ವಕ ವಾಗಿ ಸೇವಿಸುವುದು

ಆಚ್ಚ – ಮುದ್ದು

ಆದಿಕಾರಿಣಿ – ಮೂಲಕಾರಣಗಳು

ಆನನ – ಮುಖ

ಆಪದ – ಆಪತ್ತು

ಆಪನ್ನ – ಸಂಕಟಕ್ಕೊಳಗಾದ

ಆರೋಗಣೆ – ಊಟ, ಭೋಜನ

ಆಸು – ಅಷ್ಟು

ಇಂಬಿಡು – ಆಶ್ರಯ ಕೊಡು

ಇನ – ಸೂರ್ಯ

ಇರುವಂತಿ – ಒಂದು ಬಗೆಯ ಮಲ್ಲಿಗೆ

ಇಳೆ – ಭೂಮಿ

ಈಡು – ಸಮಾನ

ಈಕ್ಷಿಸು – ನೋಡು

ಉಡುಪ – ಚಂದ್ರ

ಉತ್ತತ್ತಿ – ಖರ್ಜೂರ

ಉದಕ – ನೀರು

ಉದರ – ಹೊಟ್ಟೆ

ಉನ್ಮತ್ತತೆ – ಹುಚ್ಚು

ಉರಗಾದ್ರಿ – ತಿರುಪತಿ ಬೆಟ್ಟ

ಉರುತರ – ಬಹಳ ಶ್ರೇಷ್ಠ

ಉರ – ಎದೆ

ಉಲಿವು – ಶಬ್ದ

ಉಸುರು – ಹೇಳು

ಎರದು – ಸ್ನಾನ ಮಾಡಿಸಿ (ಅಭ್ಯಂಜನ)

ಏಸೇಸು – ಎಷ್ಟೆಷ್ಟು

ಏಳಿದ – ತಿರಸ್ಕಾರ

ಒಗತನ – ಬೀಗತನ

ಒಲವು – ಒಲುಮೆ

ಕಂಜ – ಕಮಲ

ಕಂತು – ಮನ್ಮಥ

ಕಂಧರ – ಕೊರಳು

ಕಂಬು – ಶಂಖ

ಕಂಬುಕಂಧರ – ಶಂಖದಂತಹ ಕುತ್ತಿಗೆ

ಕಚ್ಚು – ಹಲ್ಲಿನಿಂದ ಕಚ್ಚುವುದು, ತುತ್ತು ಕಲಗಚ್ಚು

ಕಟಕ – ಸೈನ್ಯ

ಕಟಿ – ಸೊಂಟ

ಕಡಹಲ್ದಮರ – ತಾಳೆಮರ (ಕಡವಾಲ) ಕದಂಬ

ಕದಮು – ಕೆನ್ನೆ

ಕದಳೀ – ಬಾಳೆ

ಕನಕಗರ್ಭ – ಬ್ರಹ್ಮ

ಕನಕಗಿರಿ – ಮೇರು ಪರ್ವತ

ಕನಲಿಕೆ – ಕೋಪ

ಕಬ್ಬಿನ ಗಣಿಕೆ – ಕಬ್ಬಿನ ಎರಡು ಗಂಟುಗಳ ನಡುವಿನ ತುಂಡು

ಕಮಲಸಖ – ಸೂರ್ಯ

ಕರವೀರ – ಕಣಗಿಲ ಹೂ

ಮಂಗಳಾಷ್ಟಕ ಪೇಳುತಿರಲು ವಧುವರರಿಗೆ
ಮಂಗಳಾಕ್ಷತೆಗಳನು ತಳಿದರಾಗ ೪

ಅಂಬರದಿ ನೆರೆದ ಸುರರೆಲ್ಲ ಪುಷ್ಪದ ಮಳೆಯ
ನಿಲ್ಲದಲೆ ಸುರಿದರಾ ಸಂಭ್ರಮದಲಿ ೫

ಸುತ್ತ ತುಂಬುರರು ನಾರದರು ಪಾಡುತಿರಲು
ಅಪ್ಸರೆಯರು ನೃತ್ಯಮಾಡಿದರು ಬೇಗ ೬

ದೇವ ದುಂದುಭಿಗಳು ನೇಮವಿಲ್ಲದೆ ನುಡಿಸೆ
ದೇವನ ಲಗ್ನ ನಡೆಸಿದರು ಬೇಗ ೭

ಲಾಜ ಹೋಮವ ನಡೆಸಿ ಮೇಲೆ ಅರುಂಧತಿ ನೋಡಿ
ಬೇಗ ಉರುಟಣೆ ಮಾಡಿ ನಲಿದು ಪಾಡಿ ೮

ಗೋಕುಲಪತಿ ಕೃಷ್ಣ ಓಕಳಿಗಳನೆ ಆಡಿ
ಶ್ರೀಕಾಂತ ಬರೆ ರಾಧೆ ಬಾಗಿಲನು ಕಟ್ಟಿ ೯

ನಾಲ್ಕು ದಿವಸಗಳಾಗೆ ನಾಗವಲ್ಲಿಯು ಮಾಡಿ
ನಾಕ ಗಮನೆಯರು ಮಂಗಳನ ಪಾಡಿ ೧೦

ಮಂಗಳಂ ಮುರಹರಗೆ ಮಂಗಳಂ ನರಹರಿಗೆ
ರಾಧಾಮಾಧವರಿಗೆ ಜಯ ಮಂಗಳಂ ೧೧

ಕನಕ ಗರ್ಭನ ಪಿತಗೆ ಕರುಣಸಾಗರ ಹರಿಗೆ
ಕಮಲನಾಭ ವಿಠ್ಠಲನಿಗೆ ಮಂಗಳ ೧೨

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

ಅಂಗುಟ - ಹೆಬ್ಬೆಟ್ಟು
ಅಂಗುಷ್ಠ - ಹೆಬ್ಬೆರಳು
ಅಂಘ್ರಿ - ಪಾದ
ಅಂದಣ - ಪಲ್ಲಕ್ಕಿ
ಅಂಧಕನ ಸುತ- ದುರ್ಯೋಧನ
ಅಂಬಕ - ಕಣ್ಣು
ಅಂಬುಧಿ - ಸಮುದ್ರ
ಅಕೃತ - ಅಪಕ್ವ
ಅಕ್ಷರೇಢ್ಯ? - ನಾಶವಿಲ್ಲದ ಬಲಾಢ್ಯ
ಅಕ್ಷಿ - ಕಣ್ಣು
ಅಗ್ರೋದಕ - ದೇವರ ಪೂಜೆಗೆ ಮೀಸಲಾದ ನೀರು
ಅಘ - ಪಾಪ
ಅರ್ಘ್ಯ - ಕೈತೊಳೆಯುಲುಕೊಡುವ ನೀರು
ಅಚ್ಚ - ಶುದ್ಧ, ಪಾರದರ್ಶಕ
ಅಟ್ಟುಳಿ - ಜನಸಂದಣಿ, ಕಾಟ, ಪೀಡೆ
ಅಣಿ - ಸಿದ್ಧ
ಅಣು - ಕಣ, ತೀರಸಣ್ಣ
ಅಣುಗ - ಮಗ

ಅರ್ತಿ - ಪ್ರೀತಿ
ಅದಿತಿ - ಕಶ್ಯಪರ ಹೆಂಡತಿ
ಅಧೋಕ್ಷಜ - ವಿಷ್ಣು
ಅನಲ - ಬೆಂಕಿ
ಅನಲಸಖತನಯ- ಹನುಮಂತ
ಅನಿಮಿಷರು - ದೇವತೆಗಳು
ಅನಿಮಿಷೇಶ - ದೇವತೆಗಳ ಒಡೆಯ
ಅನುಜ - ತಮ್ಮ
ಅನುಸಂಧಾನ - ಶೋಧ, ಪ್ರಯತ್ನ, ಗುರಿ ಇಡುವುದು
ಅಪ್ರಮೇಯ - ಅಳೆಯಲಾಗದ
ಅಬ್ಜಭವ - ಬ್ರಹ್ಮ
ಅರಳೆಲೆ - ಮಕ್ಕಳ ಮುಂದಲೆಯ ಆಭರಣ
ಅರಿ - ಶತ್ರು
ಅರಿದು - ಅಸಾಧ್ಯ
ಅವನಿಜೆ - ಸೀತೆ
ಅವಲಿ - ಅವಲಕ್ಕಿ
ಅಸನ, ಅಶನ - ಊಟ
ಅಸುರ - ರಾಕ್ಷಸ
ಅಹಿ - ಸರ್ಪ

## ಆರ್ಯ

ರಾಧಾಮಾಧವ ವಿಲಾಸವ ಮುದದೊಳು
ಆದರದಿಂದಲಿ ಕೇಳುವರ
ಸಾಧುಗಳರಸನು ಸಂಭ್ರಮದಿಂದಲಿ
ಕಾದುಕೊಂಡಿರುವನು ಹಗಲಿರುಳು ೧

ಪಂಕಜಾಕ್ಷನು ನಡಿಸಿದ ಲೀಲೆಯ
ಶಂಕೆ ಇಲ್ಲದಲೆ ನುಡಿಸಿರುವ ನಿ-
ಶ್ಶಂಕೆಯಿಂದಲಿ ಶ್ರೀ ಗುರುಗಳ ಪಾದ
ಪಂಕಜಗಳಿಗೆರಗುವೆ ಮುದದಿ ೨

ಸಾಧುಗುರುಗಳ ಕರುಣವ ಪಡೆಯದೆ
ಸಾಧುಸಂಗ ದುರ್ಲಭವಹುದು
ಶ್ರೀದ ಕಮಲನಾಭ ವಿಠ್ಠಲನ ಕರುಣದಿ
ಆದರದಲಿ ಕೇಳಿರಿ ಮುದದಿ ೩

## ವಚನ

ಗುರುಗಳಾಜ್ಞದಿ ನುಡಿಸಿ ನಡಿಸಿರುವ ಕಾರ್ಯಗಳು
ಪರಮಾತ್ಮನಿಗೆ ಅರ್ಪಣೆಯ ಮಾಡಿ ಹರುಷದಲಿ
ಪರಮ ಮಂಗಳನೀವ ರಾಧಾಮಾಧವರಿಗೆ
ಹರುಷದಿಂದಲಿ ಮಂಗಳವಪಾಡಿ ಮುದದಿಂದ
ಬರೆದೋದಿ ಹರುಷಿಸಲಿ ಸುಜನರು ಎಂದು ಬೇಡುವೆನು
ಇರುವ ತಪ್ಪುಗಳು ಹರಿಚರಣಕರ್ಪಿಸಿ ಮುದದಿ
ಅರಿಯದಜ್ಞಾನಿಯ ಅಪರಾಧಗಳ ಮನ್ನಿಪುದು
ಕರಮುಗಿದು ಬೇಡುವೆನು ಹಿರಿಯರ ಚರಣಕ್ಕೆ
ಹಗಲಿರುಳು ಎಡೆಬಿಡದೆ ಹೃದಯ ಮಂದಿರದಲ್ಲಿ
ಕಮಲನಾಭ ವಿಠ್ಠಲ ನಲಿದಾಡುತಿರಲೆಂದು
ವರಬೇಡಿ ನಮಿಸುತಿಹೆನು

೫-೭-೧೯೫೯

೧೨೩ ಶ್ರೀ ವ್ಯಯನಾಮ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯೆ (೧೯೪೭ನೇ ಇಸವಿ ಜನವರಿ) ಶ್ರೀ ಪುರಂದರ ದಾಸರಾಯರ ಆರಾಧನಾ ಮಹೋತ್ಸವದಲ್ಲಿ ಶ್ರೀ ಪೂಜ್ಯ ಗುರುಗಳ ದಿವ್ಯ ಚರಣಾರವಿಂದದಲ್ಲಿ ನಮಸ್ಕರಿಸಿ ಸಮರ್ಪಿಸಿದ ಶ್ರೀ ಗುರುಕಾಣಿಕೆ.

೧೨೪ ೧೫-೧-೧೯೮೧

೧೨೮ ೧೫-೬-೧೯೬೬

೧೨೯ ರೌದ್ರಿನಾಮ ಸಂವತ್ಸರ ಆಶ್ವಯುಜ ಶುದ್ಧ ಪೌರ್ಣಿಮಾ ಗುರುವಾರ ೨೩-೧೦-೧೯೮೦

೧೩೧ ೨೦-೪-೧೯೬೪

೧೩೨ ಶ್ರೀ ದುರ್ಮತಿನಾಮ ಸಂವತ್ಸರ ಶ್ರಾವಣ ಬಹುಳ ಪ್ರತಿಪದಿ ಭಾನುವಾರ ೧೬-೮-೧೯೮೧

೧೩೩ ೧೦-೪-೧೯೬೪

೧೩೫ ಶುಕ್ರವಾರ ೨೧-೭-೧೯೬೪

೧೩೬ ೧೨-೨-೧೯೬೭

೧೩೭ ೨೨-೧೨-೧೯೭೯

೧೩೮ ೨೨-೧೨-೧೯೭೯

೧೩೯ ೩೦-೩-೧೯೬೬

೧೪೧ ೨೫-೩-೧೯೬೬

೧೪೩ ಪ್ಲವಸಂವತ್ಸರ ಚೈತ್ರಶುದ್ಧ ಪಾಡ್ಯ ೧೭-೦೩-೧೯೬೧

೧೪೪ ೨-೪-೧೯೬೫

**ಕಳಸಗಿತ್ತಿ**

ಮದುವೆಯಲ್ಲಿ ಕಳಸ ಕನ್ನಡಿ ಹಿಡಿಯುವ ಹುಡುಗಿ. ಸಾಮಾನ್ಯವಾಗಿ ವರನ ತಂಗಿ ಈ ಕೆಲಸ ಮಾಡುತ್ತಾಳೆ.

**ಭೂಮ**

ನೋಡಿ ಶ್ರೀರಾಮಜನನ ಮತ್ತು ಸೀತಾಕಲ್ಯಾಣದ ಟಿಪ್ಪಣಿ

**(ಪೊರೆಯೊ ದೇವನೆ ನು. ೧) ಇಟ್ಟಿಗೆ ಮೇಲೆನಿಂತ ವಿಠ್ಠಲ ಮೂರುತಿ** : ನೋಡಿ ಕೀ ೫ ನು ೪ ರ ಟಿಪ್ಪಣಿ

**೧೦. ರಾಧ ಮಾಧವ ವಿಲಾಸ**

ಅಸುರೆ ಪೂತಣಿ ಅಸುವ ಹೀರಿದ

ನೋಡಿ ಕೀ ೨೫ ನು ೩ ರ ಟಿಪ್ಪಣಿ

**ಶಕಟನನು ಸಂಹರಿಸಿ ಮೆರೆದನು**

ನೋಡಿ ಕೀ ೪೭ ರ ನು ೩ ರ ಟಿಪ್ಪಣಿ

**ಕೇಶಿ, ಧೇನುಕ, ಬಕ, ವತ್ಸಾಸುರ,**

ಕಂಸನ ಪರಿವಾರದ ಒಬ್ಬ ರಾಕ್ಷಸ, ಕುದುರೆಯ ರೂಪದಿಂದ ಬಲರಾಮ, ಕೃಷ್ಣ , ಗೋಪಾಲಕರನ್ನು ಪೀಡಿಸಿದ, ಕೃಷ್ಣ ಇವನನ್ನು ಕೊಂದ.

ಒಬ್ಬ ರಾಕ್ಷಸ ಕತ್ತೆಯ ರೂಪವನ್ನು ಧರಿಸಿ ತೊಂದರೆ ಕೊಡುತ್ತಿದ್ದ. ಬಲರಾಮನಿಂದ ಹತನಾದ.

ಕಂಸಪರಿವಾರದ ರಾಕ್ಷಸ ಬಕಪಕ್ಷಿಯ ರೂಪದಿಂದ ಕೃಷ್ಣನನ್ನು ನುಂಗಿ ತನ್ನ ದವಡೆಗಳಲ್ಲಿ ಅಗಿದು ನೆಲಕ್ಕೆ ಉಗುಳಿದ. ಕೃಷ್ಣನಿಗೆ ಏನೂ ಆಗಲಿಲ್ಲ. ಕೃಷ್ಣ ,ಬಕನನ್ನು ಕೊಂದ ಒಬ್ಬ ರಾಕ್ಷಸ. ಕರುವಿನ ರೂಪದಿಂದ ಕೃಷ್ಣ ಬಲರಾಮರನ್ನು ಕೊಲ್ಲುವ ಉದ್ದೇಶದಿಂದ ಕರುಗಳ ಹಿಂಡನ್ನು ಸೇರುತ್ತಾನೆ. ಇದನ್ನು ಗುರುತಿಸಿದ ಕೃಷ್ಣ ಅವನನ್ನು ಕೊಲ್ಲುತ್ತಾನೆ.

**ಒರಳ ಸೆಳೆದನು ಮರವ ಮುರಿದನು**

ನೋಡಿ ಶ್ರೀ ಕೃಷ್ಣಲೀಲಾ, ಯಮಳಾರ್ಜುನರು

**ತರುಣಿಯರ...........ತುಡುಗ ನೆನಿಸಿದನು**

ನೋಡಿ ಕೀ ೩೦ ನು ೪ ರ ಟಿಪ್ಪಣಿ

# ಅನುಬಂಧಗಳು

೧. ಕಠಿಣಶಬ್ದಗಳ ಅರ್ಥ
೨. ಟಿಪ್ಪಣಿಗಳು
೩. ಅಂಕಿತನಾಮ ಹಾಗೂ ವಿಶೇಷ ಪದ ಸೂಚಿ
೪. ಕೀರ್ತನೆಗಳ ಅಕಾರಾದಿ ಸೂಚಿ
೫. ಕೀರ್ತನೆಗಳು ರಚಿತವಾದ ದಿನಾಂಕ
೬. ಸಹಾಯಕ ಸಾಹಿತ್ಯ

## ೧೦. ರಾಧಾ ಮಾಧವ ವಿಲಾಸ

ಸ್ಮರಿಸುವೆ ನಿನ್ನನು ವರಗಣಪನೆ ನಿನ್ನ ಪ

ವರಗಾನದಿ ಶ್ರೀ ಹರಿಯನು ಸೇವಿಸೆ
ಬರುತಿಹ ವಿಘ್ನವ ಪರಿಹರಿಸೆನ್ನುತ ೧

ಹರಿಲೀಲೆಗಳನ್ನು ಹರುಷದಿ ಪಾಡಲು
ವರವಿತ್ತು ಪಾಲಿಸು ಹರನ ಕುಮಾರ ೨

ಅಂಬುಧಿ ಶಯನನ ಚಂದದಿ ಪಾಡುವ
ಸಂಭ್ರಮ ಕೊಡಿಸು ಶ್ರೀ ಅಂಬಾತನಯ ೩

ಕಡಲೊಡೆಯನ ಗುಣ ಕಡುಹರುಷದಲಿ
ಬಿಡದಲೆ ಪಾಡುವ ಸಡಗರ ತೋರೈ ೪

ಕರುಣಿಗಳರಸನ ಕರುಣವ ಪಡೆಯಲು
ಕಮಲನಾಭ ವಿಠ್ಠಲನ ಕರುಣದಲಿ ೫

### ವಚನ

ಗುರುಹಿರಿಯರಡಿಗಳಿಗೆ ಎರಗಿ ವಂದನೆ ಮಾಡಿ
ವರದ ಲಕ್ಷ್ಮೀರಮಣ ನಡೆಸಿರುವ ಲೀಲೆಗಳ
ಪರಮ ಗುರುಗಳ ಕರುಣದಿಂದ ಪೇಳುವೆನೀಗ
ವರಕೊಟ್ಟು ಪಾಲಿಸಲಿ ಸರ್ವರಾದರದಿ ಎನ್ನ

ಒಂದು ದಿನ ಯಶೋದೆ ತನ್ನಯ
ಕಂದನನು ತೊಡೆಲಿಟ್ಟು ಹರುಷದಿ
ಚಂದದಿಂದಲಿ ಮುಖವ ನೋಡುತ
ಆನಂದ ಪಡುತಿರಲು ೧

ಬಂದನಲ್ಲಿಗೆ ನಂದಗೋಪನು
ಕಂದನನು ಮುದ್ದಿಸುತ ಹರುಷದಿ

ಇಂದಿರೇಶನು ಗೈದ ಕ್ರಿಯೆಗಳ
ಮುಂದೆ ಸ್ಮರಿಸಿದನು ೨

ಅಸುರೆ ಪೂತಣಿ ಅಸುವಹೀರಿದ
ಶಕಟನನು ಸಂಹರಿಸಿ ಮೆರೆದನು
ಕೇಶಿ ಧೇನುಕ ಬಕವತ್ಸಾಸುರ–
ರ ಮಡುಹಿದನು ೩

ಒರಳನೆಳೆದನು ಮರವ ಮುರಿದನು
ಹರಿವ ಹಾವನು ಪಿಡಿದು ತಂದನು
ತರುಣಿಯರ ವಸ್ತ್ರಗಳ ಕದಿಯುತ
ತುಡುಗನೆನಿಸಿದನು ೪

ತಾಳೆ ಫಲಗಳನುಣಿಸಿ ಗೋಪರಿಗೆ
ಕಾಳಿ ಸರ್ಪನ ಹೆಡೆಯ ತುಳಿದನು
ಕಾಡಕಿಚ್ಚನು ಪಾನ ಮಾಡಿದ
ಪೇಳಲಿನ್ನೇನು ೫

ಏಳುದಿನ ಮಳೆಗರೆಯೆ ಇಂದ್ರನು
ಬಾಲಕರು ವೃದ್ಧರುಗಳೆಲ್ಲ ಆ
ವ್ಯಾಳೆ ಪಶುಗಳು ಭಯದಿ ನಿಲ್ಲಲು
ನೋಡಿ ನಸುನಗುತಾ ೬

ಬಿಟ್ಟುಬಿಡಿ ಭಯವೆನುತ ಮಾಧವ
ಬೆಟ್ಟವನು ಬೆರಳಿಂದ ಎತ್ತಿದ
ಸೃಷ್ಟಿಮಾಡಿದ ಜಗವು ಬೆಟ್ಟದ
ಬುಡದಿ ನಿಲಿಸಿದನು ೭

ಅಂದು ಋಷಿ ಪತ್ನಿಯರ ಬೇಡಿದ
ಇಂದಿರಾ ಪತಿ ಮೊಸರು ಬುತ್ತಿಯ–

ಭಕ್ತವತ್ಸಲ ಸ್ವಾಮಿ ಭಯನಿವಾರಣನೆಂದು
ಭಕ್ತರಿಂದ್ಹೊಗಳಿಸಿ ಕೊಂಬುವ ರಾಣಿಗೆ ೪

ಕರಿರಾಜ ವರದನೆಂದೆನಿಸಿ ಮೆರೆದ ನಮ್ಮ
ಸಿರಿ ಕಮಲನಾಭ ವಿಠ್ಠಲನರಸಿಗೆ ಬೇಗ ೫

ವರಲಕ್ಷ್ಮಿ ಪಾಲಿಸು ದೇವಿ
ಕರಣಾರಸಾಮೃತವನ್ನೆ ಬೀರಿ ಪ

ಪದ್ಮಪಾಣಿಯೆ ಪದ್ಮನಯನೆ
ಪದ್ಮಮುಖಿಯೆ ಪದ್ಮವಾಸಳೆ
ಪದ್ಮನಾಭನೊಡನೆ ಹೃ-
ತ್ಪದ್ಮದೊಳಗೆ ನೆಲಸು ತಾಯೆ ೧

ಸುರರು ಅಸುರರೆಲ್ಲ ಕೂಡಿ
ಶರಧಿಯನ್ನೆ ಮಥಿಸುತಿರಲು
ಪರಮ ಮಂಗಳ ಚರಿತ ಹರಿಯ
ವರಿಸೆ ನೀನುದ್ಭವಿಸಿದೆ ದೇವಿ ೨

ಅಬ್ಜವರರು ನಿನ್ನ ಮಹಿಮೆ
ಹೆಜ್ಜೆ ಹೆಜ್ಜೆಗೂ ಸ್ತುತಿಸುತಿಹರು
ಮೂರ್ಜಗದೊಳು ಪೂಜೆಗೊಂಬ
ಅರ್ಜುನ ಸಾರಥಿ ಪಟ್ಟದ ರಮಣಿ ೩

ಪ್ರಳಯ ಕಾಲದಲ್ಲಿ ಹರಿಯು
ಜಲದೊಳಾಲದೆಲೆ ಮೇಲೆ ಮಲಗೆ
ಹಲವು ಕಾಲವು ಮಲಗೆ ಜಲವು
ಎಲೆಯು ಆಭರಣಗಳು ಆಗೆ ೪

ಮಂಗಳ ಮಹಿಮಗೆ ಶೃಂಗಾರ ರೂಪಗೆ
ಅಂಗಜಜನಕಗೆ ಜಯ ಜಯತು
ಗಂಗೆಯಪಿತ ಪಾಂಡುರಂಗಗೆ ಯದುಕುಲ–
ಚಂದ್ರಗೆ ಸದ್ಗುಣ ಸಾಂದ್ರ ಶ್ರೀಹರಿಗೆ ೧

ರಣದೊಳು ಪಾರ್ಥಗೆ ಸಾರಥಿಯಾಗುತ
ನಯದೊಳು ಗೀತೆಯ ಪೇಳಿದಗೆ
ಸುಲಭದಿ ಕುರು ಸೈನ್ಯವನೆಲ್ಲ ಮಡುಹಿಸಿ
ಗುರುಗಾಂಗೇಯಗೆ ಒಲಿದವಗೆ ೨

ಪುಂಡರೀಕನಿಗೆ ಒಲಿದು ವರವನಿತ್ತು
ಪಂಡರಪುರಿ ಪಾಂಡುರಂಗನಿಗೆ
ಇಂದು ವದನೆಯಳ ಪೊಂದಿದ ವಸುದೇವ
ಕಂದನೆಂದೆನಿಸುತ ಮೆರೆದವಗೆ ೩

ಭಕ್ತರ ಮೊರೆ ಕೇಳಿ ಯುಕ್ತಿಯಿಂ ಪಾಲಿಸಿ
ಅಕೃತಾತ್ಮರನೆಲ್ಲ ಕೆಡಿಸಿದಗೆ
ಭಕ್ತವತ್ಸಲ ಸ್ವಾಮಿ ಸತ್ಯಮೂರುತಿಗೀಗ
ಮುತ್ತಿನಾರತಿ ಎತ್ತಿ ಪಾಡಿದರು ೪

ಕಾಳಿಯ ಮಡುವನು ಕಲಕಿದ ಧೀರಗೆ
ಕಂಸನ ಮರ್ಧಿಸಿ ಕೊಂದವಗೆ
ಖಗನ ಹೆಗಲೇರಿ ಕನ್ನಿಕೆಯನು ತಂದ
ಜಗದೀಶ ಕಮಲನಾಭ ವಿಠ್ಠಲಗೆ ೫

೨೧–೫–೧೯೪೭ ।

ಎಷ್ಟು ಕಾಲದಿಂದ ನಿನ್ನ
ಮುಟ್ಟಿ ಭಜಿಸಿ ಪೂಜಿಪೆನೆಂಬ
ಇಷ್ಟ ಸಲಿಸಿದೆ ಕಮಲನಾಭ–
ವಿಠ್ಠಲನರಸಿ ತುಷ್ಟಳಾಗಿ ೫

ಈ ಪರಿ ಸ್ತೋತ್ರವ ಮಾಡುತ ಆ ಕಮಲ
ಮುಖಿಯನ್ನು ಪೂಜಿಸುತ ನಲಿದು ಗೋಪತಿ
ಕೃಷ್ಣನ ಸತಿಯನು ತಾ ಪ್ರಾರ್ಥಿಸಿ ಬೇಡುತಿದ್ದಳು
ವಿನಯ ಭಕ್ತಿಗಳಿಂದ

ಕಮಲ ಕೋಮಲೆ ಭ್ರಮರ ಕುಂತಳೆ
ಕಮಲವಾಸಿನಿಯೇ ಪ

ಕಮಲವದನೆ ಕಮಲಸದನೆ
ಕಮಲನಯನೆ ನಮಿತ ಚರಣೆ ಅ.ಪ
ಕ್ಷೀರವಾರಿಧಿ ಕನ್ನಿಕೆಯೆ ನೀ
ಸಾರಸಾಕ್ಷಿಯೆ ಸರ್ಪವೇಣಿಯೆ
ಕ್ಷೀರಸಾಗರ ಶಯನನರಸಿ
ಕೀರವಾಣಿಯೆ ಮಾರಜನನಿ
ಮಾರಮಣನ ಮಡದಿಯೆ ನೀ
ಕೋರಿದ ವರಗಳ ಪಾಲಿಪೆ
ರೂಢಿಗೊಡೆಯನಂಘ್ರಿ ಭಜನೆ
ನೀಡೆನುತ ಬೇಡುವೆನು ನಿನ್ನ ೧

ಪದ್ಮಸಂಭವೆ ಪದ್ಮಪಾಣಿಯೆ
ಪದ್ಮಪದಯುಗೆ ಪದ್ಮನಯನೆ
ಪದ್ಮಮುಖಿಯೆ ಪದ್ಮನಾಭನ ಹೃ–
ತ್ಪದ್ಮವಾಸಳೆ ಮುದ್ದು ರಮೆಯೆ
ಪದ್ಮಾರಮಣನ ಧ್ಯಾನ ಹೃ–

ಬಂದರು ದಂಪತಿಗಳು ಕುವರಿಯ ಆ–
ನಂದ ಕಂದನಿಗರ್ಪಿಸಿ ಮುದದಿ
ನಿಂದರು ಮಾನಸ ಮಂದಿರದಲಿ ಗೋ–
ವಿಂದನ ಧ್ಯಾನವ ಮಾಡುತಲಿ ೩

ಗುರುಗಳ ಕರುಣದಿ ನುಡಿಸಿದ ನುಡಿಗಳು
ನರಹರಿ ಪಾದಕೆ ಅರ್ಪಿತವು
ಅರಿತ ಸಜ್ಜನರು ಜರಿಯದೆ ಆಲಿಸಿ
ಸರಿ ಮಾಳ್ಪರು ತಪ್ಪುಗಳನ್ನು ೪

ಅರಿಯೆನು ಒಂದನು ಬರೆಯಲು ಗುರುಗಳು
ಬರೆಸಿದರಿದು ಬೇಸರಿಸದಲೆ
ಹಿರಿಯರು ಆದರದಲಿ ಕೇಳುವದು ಶ್ರೀ
ಪವನಂತರ್ಯಾಮಿಯ ಚರಿತೆಯನು ೫

ಶ್ರೀಪತಿ ಮಾಡುವ ವ್ಯಾಪರವು ಬಲು
ನೂತನವಾಗಿಹುದಿದು ಕೇಳಿ
ಗೋಪತಿ ಕೃಷ್ಣನ ಗುಣಗಳ ಪಾಡಲು
ನಾಕೇಶನು ಆಜ್ಞಾಪಿಸಲು ೬

ದೇವೇಂದ್ರನ ನುಡಿ ಕೇಳುತ ತ್ವರದಲಿ
ದೇವ ದುಂದುಭಿಗಳು ಮೊಳಗಿದವು
ಗಾನದಿ ಪಾಡುತ ಶ್ರೀನಿಧಿ ಕಮಲ
ನಾಭ ವಿಠ್ಠಲನ ಪೊಗಳಿದರ್ವರಿಗೆ ೭

## ಮಂಗಳ

ಜಯ ಜಯ ಶ್ರೀ ಲಕ್ಷ್ಮಿರಮಣನಿಗೆ
ಜಯ ಜಯ ಶ್ರೀ ಭೂರಮಣ ಶ್ರೀಹರಿಗೆ ಪ

ತ್ವದ್ಮದೊಳಗೆ ಬಿಡದೆ ಮಾಳ್ಪ
ಸದ್ಬುದ್ಧಿ ಕೊಟ್ಟು ಪಾಲಿಸೆನ್ನ
ಉದ್ಧರಿಸೆಂದೆನುತ ನಮಿಪೆ ೨

ಬಗೆ ಬಗೆಯಲಿ ಪ್ರಾರ್ಥಿಸುವೆನು
ಖಗವಾಹನನ ಮಡದಿ ನಿನ್ನನು
ಪೊಗಳಲೊಶವೆ ನಿನ್ನ ಮಹಿಮೆ
ಜಗದೊಡೆಯನ ಮಡದಿ ಲಕ್ಷ್ಮಿಯೆ
ಅಡಿಗೆರಗುತ ಪ್ರಾರ್ಥಿಸುವೆನು
ಬಿಡದೆ ರಕ್ಷಿಸೆಂದು ನಮಿಪೆ
ಕಡಲಶಯನ ಕಮಲನಾಭ
ವಿಠ್ಠಲನರಸಿ ಸಡಗರದಲಿ ೩

## ಆರ್ಯ

ಈ ಪರಿ ಸ್ತೋತ್ರವ ಮಾಡುತ ಸ್ತುತಿಸುವ
ಆ ಪರಮಾತ್ಮನ ಸತಿಯಳನು
ಧೂಪದೀಪ ನೈವೇದ್ಯಗಳರ್ಪಿಸಿ
ಶ್ರೀಪತಿಗರ್ಪಿಸಿ ಸರ್ವವನು ೧

ಬಂದ ವಿಪ್ರಸುವಾಸಿನಿಯರಿಗೆ ಸು-
ಗಂಧ ಪುಷ್ಪ ತಾಂಬೂಲಗಳು
ವಂದಿಸಿ ಅರಿಶಿನ ಕುಂಕುಮ ಕೊಡುತಲಿ
ಚಂದದಿಂದಲವರ ಕಳುಹಿದಳು ೨

ಪ್ರಾರ್ಥನೆ ಮಾಡುತ ಶ್ರೀ ಮಹಲಕ್ಷ್ಮಿಗೆ
ಪ್ರೀತಿಲಿ ಪುನಃ ಪೂಜೆಯ ಮಾಡಿ
ಪ್ರಾರ್ಥಿಸಿ ಕೊಂಡಳು ಮನದ ಇಷ್ಟಾರ್ಥವ
ಪ್ರತಿ ಮಾಸದಿ ಪೂಜಿಸುತಿಹಳು ೩

ಸತ್ಯ ಭಾಮೆಯ ರಮಣ ಶ್ರೀಹರೆ
ಉತ್ತಮರ ಸೇವೆಯನು ಮಾಡುವ ೧

ಸರ್ಪಶಯನ ನಿನಗೆ ಮುತ್ತಿನ ಸು–
ಪ್ಪತ್ತಿಗೆಸೇವೆ ಮಾಡುವೆ
ಸತ್ಯ ಸಂಕಲ್ಪ ನಿನ್ನ ಇಚ್ಛಾನುವರ್ತನಾಗಿ
ಉತ್ತಮ ಪಾದಗಳನೊತ್ತಿ
ಮತ್ತೆ ನೀ ನಿದ್ರಿಸುವ ಸಮಯದಿ
ಮುತ್ತಿನ ವ್ಯಜನದಲಿ ಬೀಸುತ
ಮತ್ತೆ ನಿನ್ನ ಕೀರ್ತನೆ ಮಾಡುವೆ ೨

ಗರಡುಗಮನ ನಿನ್ನ ಒಡಗೂಡಿ ಬಂದು
ಬಿಡದೆ ಛತ್ರಿಯನ್ಹಿಡಿಯುವೆ
ಕಡಲಶಯನ ನಿನಗೆ ಸಡಗರದಿಂದ ಬಂದು
ನಡೆ ಮುಡಿಯ ಹಾಸುತ್ತ ನಿನ್ನನು
ಅಡಿಗಡಿಗೆ ವಂದಿಸುತ ಸ್ತುತಿಪೆನು
ಕಡಲೊಡೆಯ ಶ್ರೀ ಕಮಲನಾಭ ವಿಠ್ಠಲನೆ
ಸರ್ವದ ನಿನ್ನ ಸ್ಮರಿಸುವ ೩

## ಆರ‍್ಯ

ಇಂತೀಪರಿ ಸತಿಪತಿಗಳು ಲಕ್ಷ್ಮಿ
ಕಾಂತನ ಗುಣಗಳ ಪೊಗಳುತಿರೆ
ಸಂತೋಷದಿ ಶ್ರೀ ಹರಿ ಅವರನು ಬಹು
ಸಂತವಿಡುತ ನುಡಿದನು ಅಂದು ೧

ಒಲ್ಲೆನು ಮಾನವ ವಲ್ಲಭೆಯನು ನಾ
ಕಲ್ಲಾಗಿರುತಿಹೆನಿದು ನೋಡಿ
ಮೆಲ್ಲನೆ ನಿಮ್ಮಯ ಸ್ಥಳಕೆ ಪೋಗಿ ಎನ್ನ
ಉಲ್ಲಾಸದಿ ಸ್ತುತಿ ಮಾಡಿರೆನೆ ೨

ಬಿರುದು ಕೇಳಿ ನಲಿವೆ ಭವ
ಶರಧಿಯಿಂದುದ್ಧರಿಸು ದೇವ ೨

ಹರಿಯೆ ನೀ ಸರ್ವೋತ್ತಮನು
ಸಿರಿಯು ನಿನ್ನ ಮಡದಿ ಪವನ–
ತನಯ ಜೀವರೊಳುತ್ತಮ ಭವನು
ಪರಮ ವೈಷ್ಣವ ನೆನಿಸುತಿಹನು ೩

ಸುರರು ನಿನ್ನ ಕಿಂಕರರು
ಸರ್ವಕಾಲದಲ್ಲಿ ಅವರು ಬಿಡದೆ
ನಿನ್ನ ಸೇವಿಸುವರು ವರದ
ಕಮಲನಾಭ ವಿಠ್ಠಲ ೪

## ಆರ್ತ

ಅರಿಯದ ಅಜ್ಞಾನಿಯನೀಪರಿ ಸು
ಮ್ಮನೆ ಬಳಲಿಸುವುದುಚಿತವಲ್ಲ
ಸರಸಿಜ ಭವ ಮುಖರಿಗೆ ಒಲಿದಂದದಿ ದಾ
ಸ್ಯವ ಕೈಗೊಳ್ಳುತೆನ್ನನು ರಕ್ಷಿಪುದು

ಸಂಬಳಕಿಟ್ಟು ಕೊಳ್ಳೋ ಹೇ ದೇವ ನಿನ್ನ
ಸಂಬಳಕಿಟ್ಟು ಕೊಳ್ಳೊ ಪ

ಸಂಬಳಕಿಟ್ಟುಕೊ ನಿನ್ಹಂಬಲ ಬಿಡಿಸದೆ
ಶಂಬರಾರಿಯ ಪಿತ ನಂಬಿದೆ ನಿನ್ನ ಸೇವಾ ಅ.ಪ

ಸತ್ಯ ಸಂಕಲ್ಪ ನಿನ್ನಯ ದ್ವಾರದ ಹೊಸ
ಮುತ್ತಿನ ಕದ ತೆಗೆಯುವ
ವಿಶ್ವಮೂರುತಿ ನಿನ್ನ ದರ್ಶನ ನಂತರದಿ
ಮುತ್ತಿನ ಗದ್ದುಗೆಯನಿಟ್ಟು
ಮತ್ತೆ ಚಾಮರ ಬೀಸಿ ನಲಿಯುವೆ

ಸುಂದರಿ ಉಮೆ ಕೇಳೆಂದು ನುಡಿದನು
ಮಂದ ಭಾಗ್ಯರಿಗೆ ದುರ್ಲಭವು
ಇಂದಿರೇಶನ ರಮಣಿಯ ಪೂಜೆಯು
ಇಂದು ನಿನಗರುಹಿದೆನೆಂದೆನೆ ಶಿವನು ೪

ಕೇಳುತ ಪಾರ್ವತಿ ಪತಿಪಾದಕೆ ನಮಿಸುತ
ಭಾಳ ಸಂಭ್ರಮದಿ ನಲಿದಾಡೆ
ಹೇಳಿ ಕೇಳುವರೀ ಚರಿತೆಯನು
ನಾಳೆ ಇಂದು ಎನ್ನದೆ ಪಠಿಸಿ ೫

ಭಕ್ತಿಲಿ ಬರೆದೋದಲು ಪರಮಾತ್ಮನು
ಲಕ್ಕುಮಿ ಸಹಿತವರಿಗೆ ಒಲಿವ
ಅರ್ಥಿಲಿ ಸೂತರು ಶೌನಕರಿಗೆ ಪೇಳಿದ
ಅರ್ಥ ನಿನಗೊರೆದೆನೆಂದನು ಶಿವನು ೬

ಬ್ರಹ್ಮನ ಪಿತನರಸಿಯ ಚರಿತೆಯನು
ಬ್ರಹ್ಮಾಂಡ ಪುರಾಣದ ಕಥೆಯೆಂದು
ಬ್ರಹ್ಮಾನಂದವ ಪೊಂದುತ ಋಷಿಗಳು
ಹೆಮ್ಮೆಯಿಂದ ಹರಿಲಕ್ಷ್ಮಿಯರ ಭಜಿಸೆ ೭

ಹರಿಸತಿಯಳು ಬಹುಭಕ್ತಿಲಿ ಭಜಿಪರ
ಪರಿ ಪರಿ ಕ್ಲೇಶವ ಕಳೆಯುವರು
ದುರಿತಗಳಿವರ ಸಮೀಪಕೆ ಸೇರದು
ಹರಿವುದು ಭವತಾಪತ್ರಯಗಳು ೮

ಹರಿ ಗುರುಗಳು ದಯ ಮಾಡಿ ಚರಿತೆಯ
ಬರೆಸಿದರಿದು ಬಹು ಕರುಣದಲಿ
ಸಿರಿವರ ಕಮಲನಾಭ ವಿಠ್ಠಲನಿದ
ಸರಿ ಮಾಳ್ಪದು ಎಂದು ಪ್ರಾರ್ಥಿಪೆನು ೯

ನಂದನೆಯನು ಪಾಲಿಸೆ
ಅಂದು ಆಡಿದ ವಚನ ಮೀರಲು
ಚಂದದಿಂದಲಿ ಬಂದು ನೀನು
ಸುಂದರಿಯ ಕರ ಪಿಡಿದು ಬೇಗದಿ
ಬಂದು ನಿಂತೆಯಾ ಕಪಟ ವೇಷದಿ ೧

ಪೊಕ್ಕಳಿಂದಲಿ ಬೊಮ್ಮನ ಪಡೆದವನಿಗೆ
ಲೆಕ್ಕವೆ ಇಲ್ಲ ಜನ ಶ್ರೀ ಲಕುಮಿಯನು ಸಹ
ಲೆಕ್ಕಿಸದಿಹ ದೇವನ
ಕಕ್ಕುಲಾತಿಯ ಜನರ ತೆರದಿ
ಚಿಕ್ಕವನಿತೆಯ ಕೂಡಿಕೊಂಡು
ಮಿಕ್ಕಜನರಿಗೆ ಮೋಹಗೊಳಿಸುತ
ಭಕ್ತರನು ಉದ್ಧರಿಸುತಿರ್ಪೆಯೊ ೨

ಮಾಯಾರಮಣ ನಿನ್ನಯ ಮಾಯಕೆ ಸಿಲುಕಿ
ಬಾಯ ಬಿಟ್ಟರೊ ದುರ್ಜನ ಸಜ್ಜನರಿಗೆ
ನೀಡಿದೆ ಅಭಯವನು
ಮಾರಜನಕನೆ ಮದನ ಮೋಹನ
ಸಾರಿದೆನೊ ಪಾದಾರವಿಂದವ
ಪಾರುಗಾಣಿಸಿ ಪೊರೆಯೊ ಕಮಲ
ನಾಭ ವಿಠ್ಠಲನೆ ಪೊರೆಯೊ ಸಂತತ ೩

ಪಾರ್ಥಸಾರಥೇ ಪಾಲಿಸೆನ್ನ
ಪಾರ್ಥಸಾರಥೇ ಪ

ಪಾರ್ಥಸಾರಥೆಯೆ ದೇವ
ಕೀರ್ತಿಸುವೆನು ನಿನ್ನ ಗುಣವ
ಕುಕ್ಷಿಯೊಳಗೆ ಸರ್ವ ಜಗವ
ಇಟ್ಟು ಪೊರೆವೊ ದೇವ ದೇವ ೧

ಕರುಣಸಾಗರನೆ ದೇವ
ಶರಣ ಜನರ ರಕ್ಷಿಸುವ

## ಮಂಗಳಂ

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ಮಂಗಳವು ಮಹಲಕ್ಷ್ಮಿದೇವಿಗೆ ಜಯ ಶುಭ
ಮಂಗಳವು ಮದನಜನಕನ ಮಾತೆಗೆ
ಮಂಗಳವು ಮಹಮಹಿಮಳಾದ ಶ್ರೀ ಲಕ್ಷ್ಮಿಗೆ
ಮಂಗಳವು ಮನಸಿಜನ ಪಿತನ ಪಟ್ಟದ ಸತಿಗೆ ೧

ಮೂರ್ಲೋಕ ದೊಡೆಯನನು ಮೆಚ್ಚಿ ಮಾಲಿಕೆ ಹಾಕಿ
ಬಾಲಕೃಷ್ಣನ ಸತಿಯು ಎನಿಸಿ ಮೆರೆವ
ಭೂಲೋಕ ಸ್ವರ್ಗಪಾತಾಳಕೆ ದೊರೆಯಾದ
ಮೇಲುಗಿರಿ ವೆಂಕಟನೆಂದೆನಿಪನ ರಾಣಿಗೆ ೨

ಬಗೆ ಬಗೆಯ ಭಕುತರನು ಬಿಡದೆ ಪಾಲಿಸುತಿಪ್ಪ
ನಗಧರಗೆ ಸತಿಯಾದ ಸುಗುಣವತಿಗೆ
ಖಗಗಮನ ಶ್ರೀಕಮಲ ನಾಭ ವಿಠ್ಠಲನಿಗೆ
ಅಗಣಿತ ಮಹಿಮೆ ತೋರ್ದನಿಗಮ ವೇದ್ಯಳಿಗೆ ೩

ಮಂಗಳವ ಪಾಡಿರೆ ರಂಗನಾಥ ರುಕ್ಮಿಣೀಶಗೆ
ಗಂಗಾಪಿತಗೆ ಅಂಗನೆಯರು ರಂಗಿನೋಕಳಿಯ ತಂದು ಪ

ನೀರೊಳಾಡಿ ಭಾರಪೊತ್ತು ಬೇರು ಮೆಲುವನಾರಸಿಂಹ
ಮೂರುಪಾದದಾನ ಬೇಡಿ ಭೂಮಿಪರ ತರಿದವನ ಸತಿಗೆ ೧

ವಾರಿಧಿಯ ಬಂಧಿಸಿ ಕ್ರೂರ ರಕ್ಕಸನ ಕೊಂದೆ
ವಾರಿಧಿಯೊಳಗಾಡಿದ ಕೃಷ್ಣನ ಸತಿಗೆ ಮುತ್ತಿನ ೨

ಬುದ್ಧನೆನಿಪ ದೇವನ ಹದ್ದನೇರಿ ಮೆರೆದನ
ಮುದ್ದು ತೇಜಿನೇರಿ ಮೆರೆವ ಪದ್ಮನಾಭ ಸತಿಗೆ ಬೇಗ ೩

ಲಲಾಟ ಕಸ್ತೂರಿ ತಿಲುಕ ಶೋಭಿಸೆ
ಹಾಟಕಾಕ್ಷನ ಒದೆದ ಪಾದಕೆ ೨

ಇಷ್ಟ ಭಕುತರುಗಳೆಲ್ಲ ನಿನ್ನನು ಮನ
ಮುಟ್ಟಿ ಪೂಜಿಸೆ ಶ್ರೀನಲ್ಲನೆನುತ ಬಲು
ಶ್ರೇಷ್ಠನೆಂದರಿತರೆಲ್ಲ
ಇಟ್ಟಿಗೆ ಕೊಟ್ಟಾತನಿಗೆ ಬಲು
ಕಷ್ಟ ಪಡಿಸದೆ ಕೊಟ್ಟುದರ್ಶನ
ದಿಟ್ಟ ತನದಲಿ ಪುಟ್ಟ ಪಾದದ
ದೃಷ್ಟಿ ಅವನಿಗೆ ಕೊಟ್ಟು ಸಲಹಿದಿ
ಅಷ್ಟು ಇಷ್ಟೆಂದ್ಹೇಳ್ವ ಮಹಿಮೆಯು
ತುಚ್ಛ ಮನುಜರಿಗಳವೆ ಶ್ರೀಹರೆ
ಇಷ್ಟದೈವ ಶ್ರೀ ಕಮಲನಾಭ–
ವಿಠ್ಠಲ ನಿನ್ನ ಪುಟ್ಟ ಪಾದಕೆ ೩

## ಆರ್ಯ

ಸತಿ ಈ ಪರಿಯಲಿ ಸ್ತುತಿಸಲು ಹರಿಯನು
ಪತಿ ನೋಡುತ ಬೆರಗಾಗುತಲಿ
ಅತಿ ಹರುಷದಿ ಸತಿ ಪತಿಯರು ಕೂಡುತ
ಪತಿತ ಪಾವನನ ಪೊಗಳಿದರು

ಪರಿ ಪಾಲಿಸು ಶ್ರೀಶನೆ ಭೂರಮಾನಾಥನೆ
ಪರಿ ಪಾಲಿಸು ಶ್ರೀಶನೆ ಪ

ಶರಧಿ ಶಯನನೆ ಗರುಡಗಮನನೆ
ಪರಮ ಪುರಷನೆ ಪಾಪ ದೂರನೆ
ಶರಣಜನ ಸಂರಕ್ಷ ಶ್ರೀ ಹರಿ
ವರದ ಪಂಡರಿವಾಸ ಶ್ರೀಶನೆ ಅ.ಪ

ಮಂದಿಗಳೆಲ್ಲ ನಿಂದಿಸೆ ನಿನ್ನನು ಬಲು
ಚಂದದಿಂದಲಿ ಪ್ರಾರ್ಥಿಸೆ ತಡಮಾಡದಲೆ ನೀ

ಪ್ರೇಮದಿಂದ ಪರಶಿವನು ಭಾಮೆಗೊರೆದ ಲಕ್ಷ್ಮಿ ಚರಿತ
ನೇಮದಿಂದ ಪಠಿಸುವರಿಗೆ ಕಾಮಿತಾರ್ಥಗಳ ನೀವ ದೇವಗೆ ೪

ಕನಕಗರ್ಭಪಿತನಿಗೆ ಕಮಲನಾಭ ವಿಠ್ಠಲನಿಗೆ
ಕನಕದಾರತಿಗಳನೆತ್ತಿ ವನಿತೆ ಲಕ್ಷ್ಮಿನಾರಾಯಣರಿಗೆ ೫

ಶ್ರೀ ಮಧ್ವೇಶಾರ್ಪಣ ಮಸ್ತು

ಶ್ರೀ ಮತ್ಕೀಲಕನಾಮ ಸಂವತ್ಸರ ಶ್ರಾವಣ ಶುದ್ಧ ಶುಕ್ರವಾರ ಶ್ರೀ ವರಮಹಾಲಕ್ಷ್ಮಿ ಕಥೆಯು ಶ್ರೀ ಹರಿ ವಾಯು ಗುರುಗಳ ಅನುಗ್ರಹದಿಂದಲೂ ಹಿರಿಯರ ದಯದಿಂದಲೂ ಯಥಾಮತಿಯಾಗಿ ಬರೆಯಲ್ಪಟ್ಟಿತು (ಗುರುಕಾಣಿಕೆ)ನಿಡಗುರುಕಿ ಜೀವೂಬಾಯಿ ೨–೮–೧೯೬೮

## ೯. ಶ್ರೀ ಪಾಂಡುರಂಗ ಚರಿತ್ರೆ

ವಾಯುಸುತನ ತಂದು ಪೂಜಿಪ ತಂದೆ ಮುದ್ದು
ಮೋಹನ ವಿಠ್ಠಲದಾಸರಿಗೆರಗಿ
ಪ್ರೇಮದಿಂದ ಉರಗಾದ್ರಿವಾಸ ವಿ–
ಠ್ಠಲದಾಸರ ಪಾದಕೊಂದಿಸುತ ೧

ಇಂದಿರೇಶನನು ಚಂದದಿ ಪೂಜಿಸಿ
ಮಂದಮತಿಗಳನುದ್ಧರಿಪ
ತಂದೆ ವೆಂಕಟೇಶ ವಿಠಲದಾಸರಿ–
ಗೊಂದಿಸಿ ಬೇಡುವೆನನವರತ ೨

ಕಲಿಯುಗದಲಿ ಹರಿಲೀಲೆ ಪೊಗಳಲು
ಸುಲಭ ಮಾರ್ಗವನು ತೋರಿರುವ
ಪವನಾಂತರ್ಗತ ಕಮಲನಾಭ ವಿ–
ಠ್ಠಲನ ಪ್ರಾರ್ಥಿಸುತಲನುದಿನವು ೩

ವರಗಣಪತಿ ನಿನ್ನ ಚರಣಕೆ ನಮಿಸುವೆ
ಕರುಣದಿ ವರಗಳ ಕರುಣಿಸೆಂದೆನುತ ಪ

ಇನಕುಲತಿಲಕನು ವನಧಿಯ ಬಂಧಿಸೆ
ಘನಮಹಿಮನು ನಿನ್ನ ಒಲಿಸಿದನೆನುತ ೧

ಪಾಂಡುನಂದನ ನಿನ್ನ ಛಂದದಿ ಸ್ತುತಿಸಲು
ಛಂದದ ವರಗಳ ಅಂದು ನೀಡಿದನೆ ೨

ಕಮಲನಾಭ ವಿಠ್ಠಲನೊಲಿದ ಸಚ್ಚರಿತ್ರವ
ಸುಲಭದಿ ನೀನುಡಿಸಯ್ಯ ನಮಿಸುವೆ ನಿನಗೆ ೩

## ಆರ್ಯ

ಒಂದಾನೊಂದಿನ ಪಂಢರಿಪುರದಲಿ
ಇಂದು ಮುಖಿಯೊರ್ವಳು ತಾನು
ಕಂದರಿಲ್ಲದಲೆ ತವಕಿಸುತಲಿ ಗೋ–
ವಿಂದನ ಮುದದಿಂ ಪ್ರಾರ್ಥಿಪಳು

ಬಾಲಗೋಪಾಲ ಸುಶೀಲ ಸಜ್ಜನ ಪಾಲ ಪ

ಶ್ರೀಲೋಲ ಗುಣಶೀಲ ಶ್ರೀ ತುಳಸಿಯಮಾಲ
ಶ್ರೀ ಲಕುಮಿಯ ಲೋಲ ಬಾಲ ಸುರಮುನಿ ಪಾಲ ಅ.ಪ

ಕಂದರಿಲ್ಲದ ಬಹುನಿಂದ್ಯದ ಜನುಮವ
ಪೊಂದಿದೆ ವ್ಯರ್ಥದಿ ಇಂದಿರೆ ರಮಣನೆ ೧

ಬಾಲಲೀಲೆಗಳಿಂದ ಬಾಲಹಾಡುತಲಿರೆ
ಲಾಲಿಸಿ ಹರುಷಿಪ ಕಾಲಕಾಣೆನೊ ದೇವ ೨

ವಂದಿಸಿ ಬೇಡುವೆನು ವೈಕುಂಠಪತಿ ನಿನ–
ಗೊಂದಿಸಿ ಬೇಡುವೆನು ಪ

ಹಿಂದೆ ಮುಂದೆಂದಿಗು ಗೋ_
ವಿಂದ ನೀಗತಿಯೆಂದು ನಂಬಿದೆ
ಇಂದಿರಾಪತಿ ಬಂದು ರಕ್ಷಿಸೊ
ನಂದ ಗೋಪಿಯ ಕಂದ ಮಾಧವ ಅ.ಪ
ಸುಂದರ ಚರಣಗಳ ಸುಮನಸರು ಹೃನ್ಮನ–
ಮಂದಿರದೊಳು ಧ್ಯಾನಿಸೆ ಸನಕಾದಿ ಮುನಿಗಳು
ಚಂದದಲಿ ಪ್ರಾರ್ಥಿಸೆ
ಮಂದರೋದ್ಧರ ಮದನ ಮೋಹನ
ನಂದ ವ್ರಜದೊಳು ಚಂದ ತೋರಿದೆ
ಇಂದು ನಿನ್ನ ಪೋಲುವವರ ಕಾಣೆನೊ
ಬಂಧ ಮೋಚಕನಹುದೊ ಶ್ರೀವರ
ಅಂದು ಗೋಪೇರ ವೃಂದ ವೃಂದ ಕೂಡಿಸಿ
ಚಂದದಿಂ ಕೊಳಲೂದಿ ನಲಿಯುವ
ಮಂದಹಾಸದ ಮುಗುಳುನಗೆ ಗೋ–
ವಿಂದ ನಿನ ಪಾದಾರವಿಂದಕೆ ೧

ಶಾಮಸುಂದರ ನಿನ್ನಯ ಕೋಮಲ ಕರದಿ
ತೋರು ಚಕ್ರಗದ ಶಂಖವು ಪದುಮವು
ತೋರ ಮುತ್ತಿನ ಹಾರವು
ವಾರಿಜಾಕ್ಷಿಯು ಲಕ್ಷ್ಮಿ ಉರದೊಳು
ತೋರುತಿಹ ವೈಜಯಂತಿ ಮಾಲೆಯು
ಶ್ರೀಶನಿಗೆ ಶ್ರೀವತ್ಸ ಕೌಸ್ತುಭ
ಮಾಲೆ ಥಳಥಳ ಹೊಳೆವ ಕಾಂತಿಯು
ಸೂರ್ಯಕೋಟಿ ಪ್ರಕಾಶದಂದದಿ
ತೋರಿ ಮೆರೆವ ಕಿರೀಟ ಹೊಳೆಯಲು

೧೩

**(ನು ೧) ಮಿತ್ರೆ ರುಕ್ಮಿಣಿ ...... ದ್ವಾರಕೆಗೈತರೆ ಬಹು** : ನೋಡಿ ಕೀ ೯ ನು ೪ರ ಟಿಪ್ಪಣಿ

**(ನು ೨) ಮುಚುಕುಂದರಾಯ** : ಸೂರ್ಯವಂಶದ ಮಾಂಧಾತನ ಮಗ ಮುಚುಕುಂದ. ಕೃಷ್ಣನನ್ನು ಕೊಲ್ಲಲು ಬೆನ್ನಟ್ಟಿ ಬಂದ ಕಾಲಯವನನು ಮುಚುಕುಂದನ ಗುಹೆಗೆ ನುಗ್ಗಿ ಮುಚುಕುಂದನಿಂದ ಭಸ್ಮನಾದ. ಮುಚುಕುಂದ ಕೃಷ್ಣನ ಅನುಗ್ರಹಕ್ಕೆ ಪಾತ್ರನಾದ. ಈ ಕೀರ್ತನೆಯಲ್ಲಿ ಕಾಲಯವನನಿಗೆ ಬದಲಾಗಿ ದುರುಳ ದೈತ್ಯರು ಎಂದು ಹೇಳಿದೆ.

**(ನು ೩) ದ್ವಾರಕಿ ಸೇರಿದ** : ಜರಾಸಂಧ ಪದೇ ಪದೇ ದಂಡೆತ್ತಿಹೋಗಿ ಕೃಷ್ಣನನ್ನು ಪೀಡಿಸುತ್ತಿದ್ದ ಕಾರಣ ಕೃಷ್ಣ ವಿಶ್ವಕರ್ಮನಿಂದ ಈ ಪಟ್ಟಣವನ್ನು ಸಮುದ್ರ ಮಧ್ಯದಲ್ಲಿ ನಿರ್ಮಿಸಿದ. ಶ್ರೀ ಕೃಷ್ಣ ಯಾದವರೊಂದಿಗೆ ಈ ಪಟ್ಟಣದಲ್ಲಿ ವಾಸಿಸುತ್ತಿದ್ದ. ಕಾಲಯವನನನ್ನು ಕೊಂದು ಅವನ ಸಂಪತ್ತನ್ನು ದ್ವಾರಕೆಗೆ ಸಾಗಿಸುವ ಸಮಯಕ್ಕೆ ಜರಾಸಂಧ ಸೈನ್ಯದೊಂದಿಗೆ ಕೃಷ್ಣನನ್ನು ಅಡ್ಡಗಟ್ಟಿದ. ಅವನನ್ನು ಕೊಲ್ಲುವ ಉದ್ದೇಶವಿಲ್ಲದ ಬಲರಾಮ ಕೃಷ್ಣರು ಓಡುತ್ತಾ ಹೋಗಿ ಗೋಮಂತ ಪರ್ವತದ ಶಿಖರ ಸೇರಿದರು. ಜರಾಸಂಧ ಪರ್ವತವನ್ನೇ ಮುತ್ತಿ, ಬೆಟ್ಟಕ್ಕೆ ಬೆಂಕಿ ಹಚ್ಚಿದ. ಕೃಷ್ಣ ಬಲರಾಮರು ಹೇಗೊ ಪಾರಾಗಿ ದ್ವಾರಕೆ ಸೇರಿದರು.

**(ನು ೪) ಅಭಿಮನ್ಯು** : ಅರ್ಜುನ ಮತ್ತು ಸುಭದ್ರೆಯರ ಮಗ. ಮಹಾಭಾರತ ಯುದ್ಧದಲ್ಲಿ ಚಕ್ರವ್ಯೂಹವನ್ನು ಬೇಧಿಸಿ, ದ್ರೋಣ, ಕರ್ಣ, ಜಯದ್ರಥ ಮುಂತಾದವರೊಡನೆ ಹೋರಾಡಿ ಸಾಯುತ್ತಾನೆ. ಪುತ್ರಶೋಕದಿಂದ ಕೂಡಿದ ಅರ್ಜುನನನ್ನು ಸಮಾಧಾನ ಪಡಿಸಲು ಕೃಷ್ಣ ಸಾಮಾನ್ಯ ನರನಂತೆ ನಟಿಸಿದ ಎಂಬುದು ಕವಯಿತ್ರಿಯ ಅಭಿಪ್ರಾಯ.

**(ನು ೫) ಹತ್ತು ಹನ್ನೊಂದನೆ .......... ಜಲಮಧ್ಯದೊಳಿರಲು** : ನೋಡಿ ನು ೩ ರ ಟಿಪ್ಪಣಿ

**(ನು ೫) ಅಷ್ಟಸತಿಯರು** : ಕೃಷ್ಣನ ಎಂಟು ಜನ ಹೆಂಡತಿಯರು. ರುಕ್ಮಿಣಿ, ಸತ್ಯಭಾಮೆ, ನೀಲೆ, ಭದ್ರೆ, ಮಿತ್ರವಿಂದೆ, ಕಾಳಿಂದಿ, ಲಕ್ಷಣೆ, ಜಾಂಬವತಿ.

**(ನು ೫) ಸೌಳಸಾಸಿರ ಸತಿಯರು** : ನರಕಾಸುರನಲ್ಲಿ ಬಂದಿಗಳಾಗಿದ್ದ ೧೬ ಸಾವಿರ ಮಂದಿ ಸ್ತ್ರೀಯರನ್ನು ಕೃಷ್ಣ ದ್ವಾರಕೆಗೆ ಕರತಂದು ತನ್ನಲ್ಲಿಯೇ ಇರಿಸಿಕೊಂಡ

ಮೂರಡಿ ಭೂಮಿಯ ಬೇಡಿ ಶೂರರ ಗೆಲಿದು
ವಾರಿಧಿಯನೆ ಕಟ್ಟಿ ನಾರಿಯ ತಂದು
ಹಾರುತ ಕಾಳಿಯ ಮಡುವ ಕಲಕಿ ತ್ರಿಪು-
ರಾರಿ ಎನಿಸಿಹ ಹಯವೇರುತ ಮೆರೆದೆ ೧

ಅಗಣಿತ ಮಹಿಮ ಶ್ರೀ ಅನಿರುದ್ಧದೇವ
ಪರಮ ಪುರಷ ಕಾಯೊ ಪ್ರದ್ಯುಮ್ನದೇವ
ಸರ್ವವ್ಯಾಪಕನೆ ಸಂಕರ್ಷಣದೇವ
ವಿಶ್ವಮೂರುತಿ ಶ್ರೀಶ ಶ್ರೀವಾಸುದೇವ
ನಾರದ ವಂದ್ಯ ನಾರಾಯಣ ರಕ್ಷಿಸು
ಶಾಂತಿ ಕೃತಿ ಜಯ ಮಾಯ ಲಕ್ಷ್ಮಿರಮಣನೆ ೨

ಇಟ್ಟಿಗೆ ವಾಸ ಶ್ರೀ ವಿಠ್ಠಲಮೂರ್ತಿ
ಮುಟ್ಟಿ ಭಜಿಪರಘ ನಷ್ಟವ ಮಾಳ್ಪೆ
ಶ್ರಿಷ್ಟಿಯೊಳಗೆ ಮಹ ಶ್ರೇಷ್ಠನೆಂದೆನಿಪೆ
ವಿಠಲ ವಿಠಲ ವಿಠೋಬ ಎಂದೆನಿಪೆ
ಇಷ್ಟ ಭಕುತರಿಗೆ ಕೊಟ್ಟು ವರವ ಕಾಯ್ವೆ
ರಕ್ಷಿಸು ಕಮಲನಾಭ ವಿಠ್ಠಲನೆ ೩

## ಆರ‍್ಯ

ಗರುಡಗಮನ ನಾರಾಯಣ ರಕ್ಷಿಸು
ಅರಿಯದ ಅಜ್ಞಾನಿಯನೀಗ
ಸ್ಮರಪಿತ ವಂದಿಪೆ ಕರುಣಿಸು ಎನ್ನನು
ಪರಿ ಪರಿ ಅಪರಾಧವ ಕ್ಷಮಿಸಿ ೧

ಪತಿ ಈ ಪರಿ ಹರಿಯನು ಪ್ರಾರ್ಥಿಸುತಿರೆ
ಸತಿ ಬೇಗದಿ ಕರಗಳ ಮುಗಿದು
ಅತಿ ಭಕ್ತಿಲಿ ಸಿರ ಬಾಗುತಲಾಕ್ಷಣ
ಪತಿ ಪಾವನನ ಸ್ಮರಿಸಿದಳು ೨

ಅಂಬೆಗಾಲಿಕ್ಕುತ ಕಂದರಾಡುತ ಬರೆ
ಚಂದದಿಂದೆತ್ತುವಾನಂದವಿಲ್ಲವೋ ದೇವ ೩

ಕಡಗಗಗ್ಗರಿಗೆಜ್ಜೆ ಘಲುರೆಂಬೊನಾದದ
ಧ್ವನಿ ಕೇಳದ್ದೋದ ಈ ಕಿವಿಗಳು ವ್ಯರ್ಥವು ೪

ಪಾಂಡುರಂಗನೆ ನಿನ್ನ ನಂಬಿ ನಾ ಸ್ತುತಿಸುವೆ
ನಿಂದೆಯ ಕಳದೆನ್ನ ಚಂದದಿಂ ಪಾಲಿಸೊ ೫

ಶ್ರೀಶ ಶ್ರೀಮಾಧವ ಕೂಸಿನ ಪಾಲಿಸಿ
ದಾಸಿಯ ಮನದಾಸೆ ನೀ ಸಲಿಸೈ ದೇವ ೬

ಬಾಲಕನಾದರೆ ಆಳನುಮಾಡುವೆ
ಬಾಲಕಿಯಾದರೆ ಧಾರೆಯನೆರೆಯುವೆ ೭

ಸಾಸಿರ ನಾಮನೆ ಭೂಸುರ ಪಾಲನೆ
ಕ್ಲೇಶ ನಾಶಕ ಕೃಷ್ಣ ನಾ ಸಿರಬಾಗುವೆ ೮

ಕಮಲನಾಭ ವಿಠ್ಠಲ ನಮಿಸಿ ಬೇಡುವೆ ನಿನ್ನ
ಶ್ರಮವ ಪರಿಹರಿಸೆನ್ನ ಭ್ರಮೆಯ ತಪ್ಪಿಸೊದೇವ ೯

## ಭಾಮಿನಿ ಷಟ್ಪದಿ

ಕಂದರಾಡುತ ಬರಲು ಮೋದದಿ
ಚಂದದಿಂ ಮುದ್ದಿಸುತ ಹರುಷದಿ
ಅಂದವಾಗಿಹ ಮುಖವನೋಡುವ ಭಾಗ್ಯವಿಲ್ಲೆನಗೆ
ಅಂದಿಗೆ ಕಾಲ್ಗೆಜ್ಜೆ ಘಲುರೆನೆ
ಮಂದಹಾಸದಿ ಬರುವ ಶ್ರೀಹರಿ
ಅಂದತೋರುವ ಪುತ್ರರಿಲ್ಲದ ಜನ್ಮವಿದು ವ್ಯರ್ಥ

ನಾವಿನ್ನಾದರು ಲಾಲಿಸಿಕಾಲವ
ಸಾನುರಾಗದಲಿ ಕಳೆಯುವದು

ಹಾಗೆನ್ನಲು ಬಾರದು ಮಾಧವನಿಗೆ
ಬಾಲಕಿಯನು ಅರ್ಪಿಸುತಲಿ ಮುದದಿ
ಬಾಲಗೋಪಾಲನ ಚರಣವ ನಂಬಲು
ತಾ ಒಲಿವನು ಭಕ್ತಿಗೆ ಮೆಚ್ಚಿ

## ಆರ‍್ಯ

ಕಡು ಹರುಷದಿ ಕಾಮನಪಿತನಿಗೆ ತನ್ನ
ಸುದತಿ ಮಣಿಯನರ್ಪಿಸಿ ಮುದದಿ
ಕರಗಳ ಜೋಡಿಸಿ ಕಮಲನಾಭ ವಿ
ಠ್ಠಲನ ಸ್ಮರಿಸುತ ಕೊಂಡಾಡಿದನು

## ಭಾಮಿನಿ ಷಟ್ಪದಿ

ಪಾಪ ರಹಿತನೆ ಪರಮ ಪುರಷನೆ
ಆ ಕಮಲ ಸಂಭವನ ಜನಕನೆ
ನಾಕ ಪಾಲಕ ವಂದ್ಯ ಚರಣನೆ ನವನೀತ ಕದ್ದವನೆ
ನರಕ ಮರ್ದನ ಯದುಕುಲೇಶನೆ
ಮದನ ಮೋಹನ ರುಕ್ಮಿಣಿ ಪ್ರಿಯ
ಖಗನ ಹೆಗಲು ಏರಿ ಮೆರೆದನೆ ಕರುಣಿಪುದು ಎನ್ನ

ಪಂಡರಿಪುರ ಪಾಂಡುರಂಗ ಪಾಲಿಪುದು
ಭಂಗವ ಬಿಡಿಸಿ ಉದ್ಧರಿಸಿ ರಕ್ಷಿಪುದು ಪ

ತಂಡ ತಂಡದ ಜನ ಬಂದು ಸೇವಿಸುವರು
ಪುಂಡರೀಕಗೊಲಿದವ ನೀನಹುದು ಅ.ಪ

ವಾರಿವಿಹಾರನೆ ಭಾರ ಪೊತ್ತವನೆ
ಕೋರೆ ತೋರುವ ಕರುಳ್ಹಾರ ಹಾಕಿದನೆ

## ಆರ್ಯ

ಈ ಪರಿ ಬಳಲುತ ಪ್ರಾರ್ಥಿಪ ಬಾಲೆಯ
ಆ ಪರಮಾತ್ಮನು ನೋಡುತಲಿ
ಶ್ರೀ ಪತಿ ದಯ ಮಾಡಿತ್ತನು ವರವನು
ಆ ತರುಣಿಯು ಹರುಷವ ತಾಳಿ

ನೋಡಿ ಮಾಯವ ಪಾಂಡುರಂಗ ಆಡಿದಾಟವ
ಆಡಿಪಾಡಿ ಪೊಗಳುವರಿಗೆ ಬೇಡಿದಿಷ್ಟಕೊಡುತಲಿಹನು ಪ

ಸೋಸಿನಿಂದ ಬಂದನಾಗ
ಮಾಸ ಮೂರರಲ್ಲಿ ಹರಿಯು
ಆ ಸತಿಯಳ ಮಂದಿರದಿ ಉ-
ಲ್ಲಾಸದಿಂದ ಮೆರೆಯುತಿಹನು ೧

ವಾವೆ ವರಸೆ ಇಲ್ಲದ್ದರಿಯು
ಮಾಮಿ ಮಾಮಿ ಎಂದು ಬಂದು
ಕಾಮಿನಿಯಳ ಮನದ ಭಾವ
ಸ್ವಾಮಿ ತಿಳಿದು ನಿಂದನಾಗ ೨

ಮಾರಜನಕ ಮನ ಹರುಷದಿ
ಆರು ಮಾಸದಲ್ಲಿ ತ್ವರದಿ
ಮಾರಮಣನ ವರ ಎಚ್ಚರದಿ
ಸಾರುತಿಹೆನು ಸಲಿಸು ಮುದದಿ ೩

ಶ್ರೀ ರಮೇಶ ಬಿಡದೆ ತಿರುಗೆ
ಮೂರು ಮೂರು ಮಾಸವಾಗೆ
ಸಾರಿ ಪೇಳಿ ನುಡಿದ ಹೀಗೆ
ಭಾರಿ ವರವ ಸಲಿಸು ಕೊನೆಗೆ ೪

ನೀವೇ ಧಾರೆಯನೆರೆದಿಹಿರಿನ್ನು ನಿರ್ಭಯದಿಂ
ನಿದ್ರಿಸುತಿಹ ಸಮಯದಿ ಶ್ರೀವರ ಎನ್ನನು
ಕರೆ ತಂದಿಹನು ತೋರದೆ ನಿಮಗಿನ್ನು

### ಆರ್ಯ

ನಡಿ ನಡಿ ಸುಕುಮಾರಿಯೆ ನಿನಗಿದು
ತರವಲ್ಲವು ಇಂದಿನ ಕಾರ್ಯ
ಮದುವೆಯ ಗಂಡನು ಶಿಲೆಯಾಗಿರುತಿರೆ
ಮುದ ತೋರುವದಿಲ್ಲವು ಎನಗೆ

ಪತಿ ನುಡಿಗಳ ಕೇಳುತಲಾಕ್ಷಣದಿ
ಸತಿಗಾಕ್ಷಣ ಜ್ಞಾಪಿಪಿದನು ಹರಿಯ
ಮತಿಹೀನಳು ನಾ ಮಾಡಿದ ತಪ್ಪು
ಅತಿಶಯವಾಗಿಹುದು

### ಆರ್ಯ

ಏನಿದು ನಿನ್ನಯ ನುಡಿಗಳು ಎನಗದು
ಮಾನಿನಿ ಬಿಡದಲೆ ತಿಳುಹುವದು
ಮಾನಾಪಮಾನವು ಸಮವು ಇಬ್ಬರಿಗು
ಮಾಣದೆ ಸಂಶಯ ಬಿಡು ಮನದಿ

ಕೇಳುತಲಾ ನುಡಿ ಪೇಳಿದಳೆಲ್ಲವು
ಬಾಲಕಿ ಉದಿಸಲು ಬೇಡಿದ ವರಗಳ
ಆಡಿದ ನುಡಿ ನಡೆಸದಿರಲು
ಶ್ರೀಧರ ಮಾಡಿದ ಮಾಯವನು

### ಆರ್ಯ

ಹಾಗಾದರೆ ಈಗೇನು ಮಾಡುವಿ
ಬಾಲಕಿಯನು ಕರತರದಿರಲು

ಸರಸಿಜಾಕ್ಷ ಬಂದು ತನ್ನ
ಸರಿಯಗೆಳೆಯರಂತೆ ಇರಲು
ಕಮಲನಾಭ ವಿಠ್ಠಲನೆಂದು
ಕಮಲ ಮುಖಿಯು ತಿಳಿಯದಿರಲು ೫

## ಆರ್ಯ

ಮಧುಸೂದನ ಈ ಪರಿ ಕ್ರೀಡಿಸುತಿರೆ
ಸುದತಿ ಮಣಿಯು ಶುಭಲಗ್ನದಲಿ
ಪಡೆದಳು ಶಿಶುರತ್ನವನೆಂದೆನುತಲಿ
ಸಡಗರದಲಿ ಬಂದನು ಹರಿಯು

ಮಾತನಾಡ ಬಂದ ಗೋವಿಂದ
ಮಾತನಾಡ ಬಂದ ಪ

ಮಾತರಿಶ್ವಪ್ರಿಯ ಮಾತುಳಾಂತಕ ಹರಿ
ಸೋತನೊ ಭಕ್ತರ ಪ್ರೀತಿಗೆನ್ನುವ ಹರಿ ಅ.ಪ

ಸುಂದರಾಂಗ ಅರವಿಂದ ಮುಕುಂದನು
ಒಂದು ತಿಂಗಳಲಿ ಬಂದು
ಸುಂದರಿ ಕೊಡು ನಿನ್ನಛಂದದ ಶಿಶುವೆನೆ
ನಿಂದರೆ ಕೊರಳು ಚಂದದಲಿ ಕೊಡುವೆ ನೆನೆ ೧

ಕೆಲವು ದಿನವು ಕಳೆಯಲು ಕಮಲಾಕ್ಷನು
ಕಳುಹಿ ಕೊಡೆಲೆ ಶಿಶುವೆಂದ
ನಳಿನಾಕ್ಷಿಯು ನುಡಿದಳು ಶ್ರೀಕೃಷ್ಣಗೆ
ಕುಳಿತಾಡುವ ಹರುಷವ ನೋಡುವೆನೆನೆ ೨

ಖಗವರವಾಹನ ಅಗಣಿತ ಮಹಿಮನು
ಮಗುವನು ಕೇಳಲು ಬಂದ

ನಗಧರನಿಗೆ ವಂದಿಸುತಲಿ ನುಡಿದಳು
ಬಗೆ ಬಗೆ ಆಟವ ನೋಡುವೆನೆನುತಲಿ ೩

ಕಡಲಶಯನ ಹರಿ ಸಡಗರದಿಂದಲಿ
ಗಡಿ ಬಿಡಿ ಮಾಡುತ ಬಂದ
ಪೊಡವಿ ಗೊಡೆಯನ ಅಡಿಗಳಿಗೆರುಗುತ
ನಡೆದಾಡಲಿ ಶಿಶುವೆನ್ನಲು ಹರುಷದಿ ೪

ಕಮಲಾಕ್ಷನು ಕರೆಕರೆಯನು ಮಾಡದೆ
ಕನಿಕರ ತೋರಿದನಂದು
ಕಮಲನಾಭ ವಿಠ್ಠಲನೆಂದರಿಯದೆ
ವನಿತೆಯು ಕಾಲವ ಕಳೆಯುತಲಿರಲು ೫

## ಆರ್ಯ

ತರಳೆಯು ಆಡಿದ ಗರುವದ ಮಾತನು
ಪರಮಾತ್ಮನು ಕೇಳುತಲಾಗ
ಕರೆ ಕರೆ ಮಾಡದೆ ತೆರಳಿದನೀಕೆಯ
ಗರುವವ ಮುರಿಯುವೆನೆಂದೆನುತ ೧

ಈ ಪರಿ ವರುಷಗಳಾಗಲು ತರಳೆಗೆ
ಶ್ರೀ ಪತಿ ನೋಡುತ ಸುಮ್ಮನಿರೆ
ಆಕೆಯ ಪಿತ ನೋಡುತ ಸುಕುಮಾರಿಗೆ
ವಿವೇಕದಿ ವರವ ವಿಚಾರಿಸಲು ೨

## ಕಂದ

ನುಡಿದರು ಭೃತ್ಯರು ನಮಿಸುತ
ಹುಡುಗಿಗೆ ತಕ್ಕವರವಿಹುದೆನುತ
ನುಡಿಯಲು ಹರುಷವ ತಾಳುತ
ನಡೆಸಲು ನಿಶ್ಚಯಿಸಿದ ಲಗ್ನವು ತಾ

ಬಂದರು ಆ ಪುರ ಮಂದಿಗಳೆಲ್ಲಾ ಗೋ–
ವಿಂದನ ಆಲಯದಲಿ ನಿಂದು
ಇಂದು ವದನೆಯಳ ಚಂದವ ನೋಡುತ
ವಂದಿಸಿದೇವನ ನಮಿಸುತಲಿ ೧

ಈ ಪರಿ ವಾರ್ತೆಯ ಕೇಳುತ ತ್ವರದಲಿ
ಆ ಸತಿ ಪತಿಯರು ನಡೆ ತಂದು
ಶ್ರೀ ಪತಿಯನು ಒಡಗೂಡುತ ನಿಂದಿಹ
ವೈಖರಿ ನೋಡುತ ಬೆರಗಾಗಿ ೨

ಏನಿದು ಕೌತುಕ ಮಾನಿನಿಯಳ ಮದು–
ವ್ಯಾದನು ಎನುವರು ಪುರಜನರು
ಶ್ರೀವರ ನಿನಗೀಕೆಯ ಕೊಡುವದು
ಹೀನತೆಯಲ್ಲವೆ ಮಾಧವನೆ ೩

ಗುಡ ಜೀರಿಗೆ ಸೆರಗಿಗೆ ಕಟ್ಟಿರುವದು
ಸೆರಗಿಗೆ ಸೆರಗಗಂಟ್ಹಾಕಿಹನು
ವದನ ಹೃದಯ ಶಾವಿಗೆ ಪರಮಾನ್ನ ಪಾ–
ದದ ಅರಿಶಿನ ಹೊಳೆ ಹೊಳೆಯುವದು ೪

ಕರತಂದವರ್‍ಯಾರಿಲ್ಲಿಗೆ ನಿನ್ನನು
ಸುಮನಸ ವಂದ್ಯನ ಬಳಿಯಲ್ಲಿ
ಕಮಲ ಮುಖಿಯೆ ಸರಿಯಲ್ಲವು ಈ ಪರಿ
ಕಮಲನಾಭ ವಿಠ್ಠಲ ಬಲ್ಲ ೫

ಈ ಪರಿಯಿಂದಲಿ ಮಾತಾಪಿತೃಗಳು
ಆ ತರುಣಿಯ ಕೇಳುತಲಿರಲು
ಆ ಪುರಜನಗಳು ಚೋದ್ಯವ ಪಡುತಲಿ
ಶ್ರೀ ಪತಿಯು ನೋಡುತಲಿರಲು

## ಆರ್ಯ

ಈ ಪರಿ ವರ ನಿಶ್ಚಯವನು ಮಾಡುತ
ಭೂಪನು ಬಲು ಸಂತೋಷದಲಿ
ಆ ಪರಮಾತ್ಮನ ಮಹಿಮೆಯ ತಿಳಿಯದೆ
ಈ ಪರಿ ವಿವಾಹೋತ್ಸವ ನಡೆಸೆ ೧

ಬರೆಸಿದ ಲಗ್ನಪತ್ರಿಕೆಗಳ ತವಕದಿ
ವರನ ಬಂಧು ಜನಗಳಿಗೆಲ್ಲಾ
ಪರಮೋಲ್ಲಾಸದಿ ಬರಬೇಕೆನುತಲಿ
ತ್ವರಿತದಿ ಲಗ್ನವ ಇಡಿಸಿದನು ೨

ಬಂದರು ಬೀಗರು ಪರಮಾನಂದದಿ
ಚಂದದ ಪಂಡರಾಪುರದಲ್ಲಿ
ಮಂದಿಗಳೆಲ್ಲರು ನೆರೆದ ಸಮಯದಿ ಗೋ–
ವಿಂದ ಯೋಚಿಸುತ ಮನದಲ್ಲಿ ೩

ಏನಿದು ಮಾಮಿಯೆ ಈ ವಿಧ ಸೌರಣೆ
ಯಾರಿಗೆ ನೀಡುವೆ ಕನ್ಯೆಯನು
ಆಡಿದ ಮಾತನು ನಡೆಸದಿರುವದು
ನಾರಿ ನಿನ್ನಪರಾಧವಿದು ೪

ಕಮಲಾಕ್ಷಿಯು ಕಣ್ತೆರದು ನೋಡಿದಳು
ಕಮಲಾಪತಿ ಶ್ರೀಹರಿಯನ್ನು
ಭ್ರಮೆಗೊಳ್ಳುತ ನಿರ್ಭಯದಿಂ ನುಡಿದಳು
ಕಮಲನಾಭ ವಿಠ್ಠಲನೊಡನೆ ೫

## ಆರ‍್ಯ

ಈ ವಿಧದಿಂ ನರಹರಿಯನು ಭಜಿಸುತ
ಆ ವಧುವಿನ ಜನರನು ಜರಿದು
ಕೋಪತಾಪಗಳ ಸಹಿಸದೆ ಹೊರಟರು
ಆ ಪುರ ಬಿಡುತ ಬೀಗರು ಜವದಿ ೧

ಮದುವೆಯ ಕಾರ್ಯವ ನೆರವೇರಿಸಿ ಆ–
ಮುದದಿಂದಲಿ ಮಲಗಿದ ನೃಪನು
ಉದಯವಾದನಂತರದಲಿ ನೋಡಲು
ವಧುವರರನು ಕಾಣದೆ ಇರಲು ೨

ಕಮಲಾಕ್ಷಿಯೆ ಕಣ್ಮರೆಯಾಗಲು ಕಾ–
ರಣವೇನಿದು ಬಲ್ಲೆಯ ಎನುತ
ಕಳವಳ ಪಡುತಿಹ ದಂಪತಿಗಳ ಮನ
ಕಮಲನಾಭ ವಿಠ್ಠಲ ತಿಳಿದ ೩

## ಭಾಮಿನಿ ಷಟ್ಪದಿ

ಅಷ್ಟರಲ್ಲಿಯೆ ವಿಠ್ಠಲನ ಗುಡಿ
ಮೆಟ್ಟಿಲೇರುತ ಅರ್ಚಕನು ಕದ
ಮುಟ್ಟಿ ತೆಗೆಯುವ ಸಮಯದಲಿ ಆಶ್ಚರ್ಯವನೆ ಕಂಡು
ಮೆಟ್ಟಿ ಬೀಳುತ ಒದರಿದನು ಬಲು
ಗಟ್ಟಿ ಸ್ವರವನು ಕೇಳುತಲಿ ಆ
ಪಟ್ಟಣದ ಜನರೆಲ್ಲ ಬಂದು ವಿಚಾರ ಮಾಡುತಿರೆ

ನೋಡಿರಿ ನೋಡಿರಿ ನೋಡಿರಿ ಹರಿ ಶರ–
ಣಾಗತ ಜನರನು ಪೊರೆವದನು ಪ

ಪಾಡಿ ಪೊಗಳಿ ಕೊಂಡಾಡುವವರ ಮುಂ–
ದಾಡುತ ನಲಿಯುವ ಪರಿ ಇದನು ಅ.ಪ

## ಕಂದ

ಕೇಳೆಲೊ ನಿಮ್ಮ ಮಾವನನು
ತಾಳದೆ ನೀಡುವ ಕನ್ಯೆಯನೆನಲು
ಕೇಳುತ ಕೋಪದಿ ನುಡಿದನು
ಕಾಳಾಹಿವೇಣಿಯನಪಹರಿಸುವೆನೆನುತಾ

## ಆರ‍್ಯ

ಇಂದಿರುಳೇ ಲಗ್ನವು ನಡೆಯುವದು
ಎಂದೆನುತಲಿ ಬಲು ಸಂಭ್ರಮದಿ
ಮಂದಿಗಳೊಳು ಆನಂದದೊಳಿರುತಿರೆ ದೇ–
ವೇಂದ್ರನಿಗಾಜ್ಞಾಪಿಸಿದ ಹರಿಯು

ಹರಿಯಾಜ್ಞೆಯಂತೆ ಚರಿಸುವುದಿದು
ಪರಮ ಧರ್ಮವು ಪ

ಇರುಳು ಲಗ್ನ ಸಮಯಕೆ
ಭರದಿ ಮಳೆಯ ಕರೆಯುತಿರೆ
ಹರಿಯು ವರನ ರೂಪದಿಂದ
ಭರದಿ ಬಂದನು ೧

ಮೀರುವದು ಶುಭ ಮುಹೂರ್ತವು
ಮೂರುಜನವು ಬಂದಿಹೆವು
ಧಾರೆಯೆರೆದು ಧನ್ಯರಾಗಿ
ರೆಂದು ನುಡಿದನು ೨

ಕಮಲಮುಖಿಯರೆಲ್ಲರು
ಕಮಲನಾಭ ವಿಠ್ಠಲನಿಗೆ
ನಮಿಸಿ ಪಾದ ತೊಳೆದು
ಕನ್ಯದಾನ ಮಾಡಲು ೩

ಈ ಪರಿ ವೈಭವದೊಳು ಬರುತಿರಲು
ಭೂಪನು ನಿದ್ರೆಯ ಸುಖದೊಳಗಿರಲು
ಶ್ರೀ ಪತಿ ಕಮಲನಾಭ ವಿಠ್ಠಲ
ಈ ಪರಿ ಪೊಗಳಿದರು ೭

## ಭಾಮಿನಿ ಷಟ್ಪದಿ

ದೇಶ ದೇಶದೊಳಿಹ ಜನಂಗಳ
ಆಸು ಕಳುಹುತ ಕರೆಯ ಕಳಿಸಿ ಉ–
ದಾಸೀನವ ಮಾಡುವದು ಧರ್ಮವೆ ಲೇಸು ತೋರುವದೆ
ಭಾಸುರಾಂಗಿಯ ಕೊಡುವ ಜನರಿಗೆ
ನೀತಿ ಕಲಿಸುವದಾತ ನಿಶ್ಚಯ
ಯಾತಕೀಪರಿ ಮಾಡಿದಿಯೋ ಬಲುಮೂರ್ಖ ನೀನೆಂದೂ

ಪೊರೆಯೊ ದೇವನೇ ನೀ ಪೊರೆಯೊ ದೇವನೆ
ಉರಗಾದ್ರಿವಾಸನೆ ಪ

ದಿಟ್ಟ ಮನದಿ ನಿನ್ನ ಮುಟ್ಟಿ ಭಜಿಪರನು
ಶ್ರೇಷ್ಠರ ಮಾಡುತ ಕಷ್ಟಗಳ್ಹರಿಸುವ
ದುಷ್ಟರ ಮರ್ದಿಸಿ ಶಿಷ್ಟರ ಪೊರೆಯುವ
ಇಟ್ಟಿಗೆ ಮೇಲೆ ನಿಂತ ವಿಠ್ಠಲ ಮೂರುತಿ ೧

ಅಕಳಂಕ ಮಹಿಮನೆ ಶುಕಮುನಿಸೇವ್ಯನೆ
ಶುಕ ಶೌನಕನಾರದ ಮುನಿವಂದ್ಯನೆ
ಭಕುತಿಯ ಮಾರ್ಗವನರಿಯೆನು ಶ್ರೀಹರೆ
ಶುಕಭಾಷಣದಿಂ ಸ್ತುತಿಸುವೆ ನಿನ್ನನು ೨

ಮಾನಪಮಾನವು ನಿನ್ನದೊ ಮಾಧವ
ಜ್ಞಾನಿಗಳರಸನೆ ಭಾನುಪ್ರಕಾಶನೆ
ಶ್ರೀನಿಧೆ ಕಮಲನಾಭ ವಿಠ್ಠಲ ಹರೇ
ಧ್ಯಾನಿಸುವ ಹೃದಯಾಬ್ಜ ಮಂದಿರನೆ ೩

ಧಾರೆಯನೆರೆದರಂದು ಶ್ರೀಧರಗೆ ಕನ್ಯೆಯ ಪ

ಗಂಗೆಯುದಕದಿ ಪಾದಂಗಳ ತೊಳೆಯುತ
ಶೃಂಗರಿಸಿದ ಮುದ್ದುಮಂಗಳ ಮೂರುತಿಗೆ ೧

ತಂಗಿ ಸುಭದ್ರೆ ಕಳಸಗಿತ್ತಿ ಪೂಜಿಸೆ
ಮಂಗಳಾಷ್ಟಕವು ಆಚಾರ್ಯರು ಪಠಿಸಲು ೨

ಮಂಗಳ ಸೂತ್ರವ ಕಟ್ಟಿ ಮಂಗಳಾಂಗಿಗೆ ಕಾ–
ಲುಂಗುರ ಮುಡಿಉಂಗುರಗಳ ಅಲಂಕರಿಸುತ ೩

ಗುಡಜೀರಿಗೆಯು ವಧುವರರ ಸೆರಗಿಗೆ ಕಟ್ಟಿ
ಮದವಣಿಗರ ಸೆರಗಿಗೆ ಸೆರಗ ಗಂಟನೆ ಹಾಕಿ ೪

ಶಾವಿಗೆ ಪರಮಾನ್ನ ಮೊದಲಾದ ಭಕ್ಷ್ಯಗಳಿಂದ
ಬೇಗ ಭೂಮ ಮಾಡಿ ಆಗ ಪವಡಿಸಿದರು ೫

ಪುಣ್ಯದಂಪತಿಗಳು ಧನ್ಯರಾದೆವು ಎಂದು
ಕನ್ಯೆಯ ವರನಿಗೊಪ್ಪಿಸಿದರು ಹರುಷದಿ ೬

ಕನಕ ಗರ್ಭನಪಿತ ಕಮಲನಾಭ ವಿಠ್ಠಲ
ವನಿತೆಯನೊಡಗೂಡಿ ಘನಹರುಷದೊಳಿರೆ ೭

## ಆರ‍್ಯ

ನಾಕೇಶನು ವೃಷ್ಟಿಯ ನಿಲಿಸಲು
ಭೀಕರ ಶಬ್ದಗಳಡಗಿದವು
ಆ ಕಾಲದಿ ಬಂದರು ಬೀಗರು ಬಹು
ಜೋಕಿನಿಂದ ವಧು ಮಂದಿರಕೆ

ಹೊರಟಿತು ನಿಬ್ಬಣ ಸಮರಾತ್ರಿಯೊಳು
ಪರಿ ಪರಿ ವಾದ್ಯದ ಪರಿ ವರ್ಣಿಸಲು
ಪರಶಿವನೊಬ್ಬನೆ ಬಲ್ಲನು ಈ ಪರಿ
ಅರುಹುವದಸದಳವು ೧

ಆನೆ ಮೇಲಂಬಾರಿಗಳಲ್ಲಿ
ಮೇನೆ ಪಲ್ಲಕ್ಕಿಗಳೊಳು ಸಹಿತ
ಭಾಳಜನ ಕುಳಿತಿರುವ ರಥಗಳು
ಸಾಲಲಿ ಬರುತಿರಲು ೨

ಮದ್ದು ಬಾಣ ಬಿರುಸಿನ ಧ್ವನಿಗೆ ಅ-
ಲ್ಲಿದ್ದ ಶುಕಪಿಕ ಪಕ್ಷಿಗಳೆಲ್ಲ
ಎದ್ದು ತಮ್ಮ ಸ್ಥಳಗಳ ಬಿಟ್ಟು
ಬಿದ್ದವು ಎಲ್ಲೆಲ್ಲೊ ೩

ಭೇರಿ ಸೌಬತ್ತಿನ ಧ್ವನಿ ಕೇಳಿ
ಊರವರೆಲ್ಲಾ ಚೋದ್ಯವ ಪಟ್ಟು
ನಾರಿಯರುಪ್ಪರಿಗೆಗಳನೆ ಏರಿ
ನೋಡುತ ನಿಂದಿರಲು ೪

ರಂಭೆ ಯೂರ್ವಶಿ ಮೇನಕೆಯರನು
ನಿಂದಿಸುವಂಥ ಸುಂದರಿಯರನು
ಕಂಡು ಮೋಹಿತರಾದರು ಪುರದ
ಮಂದಿಗಳಾಕ್ಷಣದಿ ೫

ನೂರಾರು ಕೈದೀವಟಿಗೆಗಳು ಅ-
ಪಾರದಂದಣಿ ಸಂದಣಿಯಿಂದ
ಸಾಲು ಸಾಲಗೈತಂದರು ಮ-
ದ್ದಾನೆಗಳಂದದಲಿ ೬

**ತ್ರಿಪುರಾಸುರರ ಸದೆದು** : ಬೌದ್ಧಾವತಾರ. ವೈದಿಕ ಮಾರ್ಗದಲ್ಲಿ ಬಹಳ ಶ್ರದ್ಧೆಯಿಂದ ಇದ್ದ ತ್ರಿಪುರಾಸುರರನ್ನು ವಂಚಿಸುವುದಕ್ಕಾಗಿ ವಿಷ್ಣು ಪಾಷಂಡ ವೇಷಿಯಾಗಿ ಅವರಿಗೂ ಪಾಷಂಡಮತವನ್ನು ಉಪದೇಶಿಸುತ್ತಾನೆ. ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯ ಭಂಗ ಮಾಡಲು ಅವರೆದುರಿಗೆ ಬೆತ್ತಲೆಯಾಗಿ ನಿಂತನೆಂಬ ವಿಚಾರವು ಹಾಡುಗಳಲ್ಲಿ ಬರುತ್ತದೆ.

**ಹಯವನೇರಿದ** : ಕಲ್ಕ್ಯಾವತಾರ. ಕಲಿಯುಗದಲ್ಲಿ ಅನಾಚಾರಗಳು ಮಿತಿ ಮೀರಿದಾಗ ದುಷ್ಟರನ್ನು ಶಿಕ್ಷಿಸಲು ಹರಿ ಕಲ್ಕಿಯಾಗಿ ಕುದುರೆಯೇರಿ ಬರುತ್ತಾನೆ.

ತರುಳಗೊಳಿದು ಬರಲು....ನಿಲುಕದಿರಲು.......ಕೂಡಲಿಯ ತೀರದಲಿ(ನು ೩, ೪,೫)

ಇಲ್ಲಿ ಬರುವ ಕತೆಗಳು ಪ್ರಾಯಶ: ಕೂಡಲಿಯ ಕ್ಷೇತ್ರ ಮಹಿಮೆಗೆ ಸಂಬಂಧ ಪಟ್ಟದ್ದು ಇರಬೇಕು.

**(ನು ೫) ಕೂಡಲಿ**: ಶಿವಮೊಗ್ಗ ತಾಲ್ಲೂಕಿನಲ್ಲಿ ಶಿವಮೊಗ್ಗ ನಗರಕ್ಕೆ ೧೬ ಕಿಮೀ ಈಶಾನ್ಯಕ್ಕಿರುವ ಗ್ರಾಮ. ಇಲ್ಲಿ ಬ್ರಹ್ಮೇಶ್ವರ, ನರಸಿಂಹ ಮತ್ತು ರಾಮೇಶ್ವರ ಎಂಬ ಪ್ರಾಚೀನ ದೇವಲಾಯಗಳಿವೆ. ತುಂಗಾ ಮತ್ತು ಭದ್ರಾನದಿಗಳು ಸಂಗಮವಾಗುವುದರಿಂದ ಇದಕ್ಕೆ ಕೂಡಲಿ ಎಂಬ ಹೆಸರು ಬಂದಿದೆ.

## ೧೨

**(ನು೧) ಅರಿಯದೆ ಅಜಮಿಳ** : ನೋಡು ಕೀ ೯ ನು ೫ ರ ಟಿಪ್ಪಣಿ.

**(ನು ೨) ನಕ್ರನ ಬಾಧೆಗೆ ಸಿಕ್ಕಿದ** : ನೋಡು ಕೀ ೭ ರ ಟಿಪ್ಪಣಿ.

**(ನು ೩) ಹಿರಣ್ಯ ಕಶಿಪು** : ನೋಡು ಕೀ ೯ ನು ೨ ರ ಟಿಪ್ಪಣಿ

**(ನು ೪) ಪತಿಗಳೈವರು** : ನೋಡು ಕೀ ೯ ನು ೧ ರ ಟಿಪ್ಪಣಿ

**(ನು ೫) ಧ್ರುವ** : ನೋಡು ಕೀ ೯ ನು ೨ರ ಟಿಪ್ಪಣಿ

**(ನು ೬) ಫಣಿಶಾಯಿ** : ಕಶ್ಯಪ–ಕದ್ರುವಿನ ಮಗನಾದ ಶೇಷ. ಒಂದು ಅಂಶದಿಂದ ಪಾತಾಳದಲ್ಲಿದ್ದು ಇನ್ನೊಂದು ಅಂಶದಿಂದ ವಿಷ್ಣುವಿನ ಹಾಸಿಗೆಯಾದನು.

ದುರ್ಗಾದೇವಿ
ದುರ್ಯೋಧನ
ದ್ರೌಪದಿ
ದ್ವಾರಕಾಪುರ
ದ್ವೈಪಾಯನ ವಿಠ್ಠಲ
ಧವಳಗಂಗಾ
ಧೇನುಕ
ಧನ್ವಂತ್ರಿ ವಿಠ್ಠಲ
ಧರಣಿ ಸುತೆ
ಧ್ರುವ
ಧ್ರುವವರದ ವಿಠ್ಠಲ
ನಂದಕಂದ
ನಂದ ಗೋಪ
ನಂದಿ
ನಂದಿನೀ
ನರಮೃಗರೂಪ
ನರಸಿಂಗ
ನರಸಿಂಹ
ನರಹರಿ
ನರ್ಮದಾ
ನಳಿನನಾಭ
ನಳಿನೀ
ನಾಕೇಶ
ನಾಗಶಯನ
ನಾರದ
ನಾರಗ
ನಾರಾಯಣ
ನಾರಾಯಣ ತೀರ್ಥ
ನಾಲ್ಮೊಗ
ನೀಲಕಂಠ
ನೀಲಾದೇವಿ
ನೇತ್ರಾವತೀ
ಪಂಡರೀನಾಥ
ಪಂಪಾಕ್ಷೇತ್ರ
ಪದ್ಮಾಭಿರಾಮ
ಪದ್ಮನಾಭ
ಪದ್ಮಾಕ್ಷಿ
ಪದ್ಮಾವತಿ
ಪದ್ಮಿನಿ
ಪನ್ನಂಗ ಶಯನ ವಿಠ್ಠಲ
ಪರಮೇಷ್ಠಿ
ಪರಶಿವ
ಪರಶುರಾಮ
ಪರೀಕ್ಷಿತ
ಪವನ ತನಯ
ಪವಮಾನ
ಪಶುಪತಿ
ಪಶ್ಚಿಮರಂಗಧಾಮ
ಪಶ್ಚಿಮವಾಹಿನೀ
ಪಾಂಚಾಲಿ
ಪಾಂಡು
ಪಾಂಡುರಂಗ
ಪಾಂಡು ತೀರ್ಥ
ಪಾಕಶಾಸನ
ಪಾಪನಾಶಿನೀ
ಪಾರಿಜಾತ
ಪಾರ್ಥಸಖ
ಪಾರ್ಥಸಾರಥಿ
ಪಾಶಾಂಕುಶಧರ
ಪುಂಡರೀಕಾಕ್ಷ

ಜಂಬು ನೇರಳೆ ಲಿಂಬೆ ಕಿತ್ತಳೆ ದಾ–
ಳಿಂಬ ದ್ರಾಕ್ಷಿಯು
ಅಂಬುಜಾಕ್ಷಿಗೆ ತೆಂಗಿನ ಫಲ
ಬಾಳೆ ಮಾವಿನ ಫಲಗಳು ೧

ಹೆರದ ಕೊಬ್ಬರಿ ಬಟ್ಟಲೊ–
ಳ್ಹುರಿಗಡಲೆ ತುಂಬುತ
ಅರಿಶಿನ ಬೇರಡಿಕೆ ಅಕ್ಕಿ
ಬೆರಸಿ ಬೇಗನೆ ಹರುಷದಿ ೨

ಜರದ ಪೀತಾಂಬರವು ಲಕ್ಷ್ಮಿಗೆ
ಸರಿಗೆ ಅಂಚಿನ ಕುಪ್ಪುಸವು
ಸಿರಿಯ ರಮಣ ಕಮಲನಾಭ
ವಿಠ್ಠಲನರಸಿಗೀಗಲೆ ೩

ಆರುತಿ ಎತ್ತುತ ಚಾರುಮತಿಯು ತಾನು
ವಾರಿಗೆಯರ ಕೂಡಿ
ಚಾರು ವೈಭವದಿಂದ ಪ

ನೀರೊಳಾಡಿ ಮಂದರಗಿರಿ ಧರಿಸಿದ
ವರಹನಾದ ನಾರಸಿಂಹ ವಾಮನ ರಾಣಿಗೆ ೧

ಕೊಡಲಿ ಪಿಡಿದು ತನ್ನ ಮಡದಿಯನರಸಿದ
ಉಡುವ ಸೀರೆಯ ಕದ್ದ
ತುಡುಗ ಕೃಷ್ಣನ ರಾಣಿಗಾರುತಿ ೨

ಕಪಟದಿಂದಲಿ ತ್ರಿಪುರಾಂಗನೆಯರ ಕೂಡಿ
ಚಪಲ ಚಿತ್ತದಿ ತೇಜಿಯನೇರಿದನರಸಿಗೆ ೩

## ಆರ್ಯ

ಗುರು ಹಿರಿಯರಿಗೊಂದಿಸಿ ಪ್ರಾರ್ಥಿಸುವೆನು
ಕರುಣದಿ ವರಗಳ ಬೇಡುವೆನು
ವರ ಮಹಲಕ್ಷ್ಮಿಯ ಚರಿತ್ರೆಯ ಪಾಡಲು
ಹರುಷವು ಮನಕೀಯಲಿ ಎನುತ ೧

ಒಂದಿನ ಕೈಲಾಸದಿ ಪರಶಿವನು
ಸುಂದರಿ ಪಾರ್ವತಿ ಸಹಿತದಲಿ
ಮಂದಹಾಸದೊಳಿರುತಿಹ ಸಮಯದಿ
ನಂದಿವಾಹನಗೆರಗುತ ಉಮೆಯು ೨

ಇಂದುಶೇಖರಿನಿಗೆ ವಂದಿಸಿ ನುಡಿದಳು
ಮಂದಗಮನೆ ಹರಿ ಮಹಿಮೆಯಲಿ
ಚಂದದ ಚರಿತೆಯ ಅರುಹಬೇಕೆನೆ
ನಂದಿವಾಹನ ನುಡಿದನು ಹೀಗೆ ೩

ಹರಿಭಕ್ತನು ಬಡಬ್ರಾಹ್ಮಣನೋರ್ವನು
ಇರುತಿರೆ ಒಂದು ಪಟ್ಟಣದಲ್ಲಿ
ಪರಮ ಪತಿವ್ರತೆಯು ಆತನ ಪತ್ನಿಯು
ಇರುತಿದ್ದಳು ಸನ್ಮಾರ್ಗದಲಿ ೪

ಅರುಣೋದಯಕೆ ಏಳುತ ಪತಿಗೊಂದಿಸಿ
ಪರಿ ಪರಿ ಸತ್ಕರ್ಮವ ನಡೆಸಿ
ಗುರುಹಿರಿಯರಿಗೊಂದಿಸಿ ತನ್ನ ಮನದಲ್ಲಿ
ಗರುವ ಮತ್ಸರಗಳ ತ್ಯಜಿಸಿ ೫

ಲೋಕವಾರ್ತೆಗೆ ತಾ ಕಿವಿಗೊಡದಲೆ
ಮೂಕಳಂತೆ ವರ್ತಿಸುತಿಹಳು
ಲೋಕವಂದ್ಯನನು ಸ್ಮರಿಪಳು ಮನದಲಿ
ಲೋಕೇಶನ ರಾಣಿಯ ಸ್ತುತಿಸಿ ೬

ಬಂದು ಸಾಷ್ಟಾಂಗವನೆ ಮಾಡಲು
ಇಂದಿರೇಶನು ನಸುನಗುತ ಬಹು
ಮಂದಹಾಸದಿ ಕುಶಲ ಪ್ರಶ್ನೆಗಳನ್ನು
ಮಾಡುತಿರೆ ೬

ಕೇಳು ಶ್ರೀಹರಿ ನಿನ್ನ ಪಾಂಡವರು
ಬಹಳ ಅಹಂಕಾರದಲಿ ಮೆರೆವರು
ಹೇಳಕೇಳುವರಿಲ್ಲವೆನುತ ಕೃ–
ಪಾಳು ನಿನ್ನ ಮರೆತು ೭

ನಿನ್ನ ವೈರಿಯ ತಡೆದು ಮನ್ನಿಸಿ
ನಿನ್ನೊಡನೆ ಕಾದುವ ಪ್ರಯತ್ನದಿ
ನಿನ್ನನೆನಹನು ತಾರದಿರುವರು
ಚನ್ನವೇನೆನುತ ೮

ಇನ್ನು ಇವರನು ಶಿಕ್ಷಿಸದೆ ಇರೆ
ಘನ್ನವಹ ಮದದಿಂದ ಕೆಡುವರು
ಬಿನ್ನವಿಸಿದೆನು ಕಮಲನಾಭ
ವಿಠ್ಠಲನೆ ಸಲಹೆನುತ ೯

## ವಚನ

ಹೀಗೆಂದು ಪೇಳುವ ನಾರದರ ನುಡಿ ಕೇಳಿ
ಸಾಗರಶಯನ ಮಾತಾಡಿದನು ನಸುನಗುತ
ಕೇಳಿ ನಾರದರೆ ಈ ವೇಳೆ ಪೋಗುತ
ಸೂರ್ಯಾಸ್ತಮಾನದೊಳು ಶತ್ರುಸಿರ ಕತ್ತರಿಸಿ
ಬರುವೆನೀ ಕಾರ್ಯ ಎನಗದ್ಭುತವೆ ಎಂದೆನುತ
ಕೇಳಿ ನಾರದರು ಮಾತಾಡಿದರು ಹರಿ ಒಡನೆ
ಹಾಗಲ್ಲವೈ ಶ್ರೀ ಕೃಷ್ಣ ತಿಳಿ ಪೇಳುವೆನು
ಶರಣು ಹೊಕ್ಕವರನ್ನು ಪೊರೆಯದಲೆ ಬಿಟ್ಟರೆ
ಬರಿದೆ ನಮ್ಮಯ ಕುಲಕೆ ಅಪಕೀರ್ತಿ ಎಂದೆನುತ

ಮೊರೆಯ ಹೊಕ್ಕವರನ್ನು ಪೊರೆವೆನೆನ್ನುತ ಪೇಳಿ
ಪೊರೆಯದಿರೆ ಹೇಡಿಯಂದದಿ ಜೀವಿಸಿರಲಾರೆ
ಉರಿಯ ಬೀಳುತ ಜೀವ ತೊರೆಯುವೆನು ಎಂದೆನುತ
ಭಾಷೆಯ ಮಾಡಿರುವನು ಪಾರ್ಥ ಇದ ಕೇಳು ಅಚ್ಚರಿಯು
ಹೋಗಿ ಬರುವೆನು ನಮೋ ನಮ: ಎನ್ನುತ ಪೇಳಿ
ಸಾಗಿದರು ನಾರದರು ದ್ವಾರಕಾಪುರವ ಬಿಟ್ಟು

ರತಿ ಪತಿ ಪಿತ ಪತಿತಪಾವನ ವಿತತ ಮಹಿಮನು
ಹಿತದಿ ಭಕ್ತನ ಪೊರೆಯಲೋಸುಗ ಅತಿಶಯವ ತೋರುವ ೧

ಕರೆಸಿ ತನ್ನ ಸೇವಕರ ತ್ವರದಿ ಸೈನ್ಯ ಸೇರಿಸಿಡಿರಿ
ಭರದಿ ಯುದ್ಧಕೀಗ ಸಮಯ ಒದಗಿತೆಂದನು ೨

ಯಾದವರೆಲ್ಲರ ಕರಸಿ ಬೋಧಿಸುತಲೀ ಪರಿಯ ನುಡಿದ
ಕಾದಿ ಸಮರದೊಳಗೆ ಗೆದ್ದು ಮೋದ ಪಡೆಯುವ ೩

ಕಡಲೊಡೆಯನ ನುಡಿಯ ಕೇಳಿ ಕಡು ತ್ವರದಿ ಸನ್ನದ್ಧರಾಗಿ
ಮೃಡನ ಸಖ ಶ್ರೀ ಕಮಲನಾಭ ವಿಠ್ಠಲಗೊಂದಿಸಿ ೪

## ವಚನ

ಹೀಗೆಂದು ಪೇಳಿದ ಶ್ರೀಹರಿಯ ನುಡಿ ಕೇಳಿ
ಯಾದವರು ಸಂಭ್ರಮದಿ ಸೈನಿಕರೊಡಗೊಂಡು
ಸಾಲುಸಾಲಾಗಿ ಸೈನ್ಯವ ನಿಲಿಸಿ ಕೈಮುಗಿದು
ಏನಪ್ಪಣೆಯೆಂದು ಕೇಳುತಿರೆ ವಿನಯದಲಿ
ಗಾನಲೋಲನು ನೋಡಿ ಮನದಿ ಹರುಷವ ತಾಳಿ
ಭೇರಿ ನಗಾರಿ ತುತ್ತೂರಿ ವಾದ್ಯಗಳೆಲ್ಲ
ಬೋರೆಂದು ಮೊಳಗುತಿರೆ ಸಮರವಾದ್ಯಗಳೆಲ್ಲ
ಮಾಧವನು ಸೈನ್ಯವನು ಒಡಗೂಡಿ ಯುದ್ಧಕೆ
ಸಾಧುಪ್ರಿಯನು ತ್ವರದಿ ತೆರಳುವದು ಹೇಗೆಂದರೆ

ಕಮಲಭವನ ಪಿತ ಕಮಲಾಕ್ಷ ಕೃಷ್ಣನಿಗೆ
ಕಮಲನಾಭ ವಿಠ್ಠಲನಿಗೆ ಕಮಲಪತ್ರಾಕ್ಷನಿಗೆ ೫

ಶ್ರೀ ಸಾಧಾರಣನಾಮ ಸಂವತ್ಸರ ಮಾಘ ಶುದ್ಧಮಧ್ವ ನವಮಿ ಗುರುವಾರ (ಶ್ರೀ ಮಧ್ವನವಮಿ) ಈ ಶುಭದಿನದಲಿ ಶ್ರೀ ಹರಿವಾಯು ಗುರುಗಳ ಅನುಗ್ರಹದಿಂದಲೂ ಹಿರಿಯರ ಆಶೀರ್ವಾದದಿಂದಲೂ ಪ್ರೇರೇಪಿಸಲ್ಪಟ್ಟು ಬರೆಸಿದ ಈ ಗಾಲವ ಚರಿತ್ರೆಯು ಸಂಪೂರ್ಣವಾದದು. ೪-೩-೧೯೭೧

## ೮. ಶ್ರೀ ವರಮಹಾಲಕ್ಷ್ಮಿಯ ಕಥೆ

ವರಗಣಪನೆ ಪ್ರಾರ್ಥಿಪೆನಿನ್ನು
ವರಗಳ ಯಾಚಿಸಿ ಬೇಡುವೆನು ಪ

ಲಂಬೋದರ ರಕ್ತಾಂಬರ ಶೋಭಿತ
ಅಂಬಾತನಯನೆ ಹೇರಂಬನೆ ಗಜಮುಖ ೧

ವಾಗಭಿಮಾನಿಗೆ ವಂದಿಸಿ ಬೇಡುವೆ
ಬೇಗದಿ ಮಾನಸರೂಪರಿಗೆರಗುವೆ ೨

ಭಾರತಿ ಸರಸ್ವತಿ ಮಾರುತಿ ವಾಣೀಪತಿ
ತೋರುತ ಮತಿಗಳ ತೋರಿಸೆಂದೆನುತ ೩

ವರಮಹಲಕ್ಷ್ಮಿಗೆ ಎರಗುತ ಪ್ರಾರ್ಥಿಸಿ
ಕರುಣದಿ ಪಾಲಿಸು ವರಗಳೆಂದೆನುತಲಿ ೪

ಶ್ರೀಶ ಕಮಲನಾಭವಿಠ್ಠಲಗೊಂದಿಪೆ
ಸಾಸಿರ ನಾಮನ ಸ್ತುತಿಸುತ ಪಾಡಲು ೫

ಬಂದರು ಯಾದವರೆಲ್ಲರು ತ್ವರಿತದಿ
ಇಂದಿರೆಯರಸನಿಗೆರಗುತಲಿ
ಚಂದದಲಿ ವಂದಿಸುತ
ಮುಂದೇನಪ್ಪಣೆ ಎಂದೆನಲು ೧

ಇಂದಿರೇಶನು ಬಂದವರಿಗೆ ಹೀ–
ಗೆಂದು ಆಜ್ಞೆಯ ಮಾಡುತಲಿ
ಈ ದಿನವೇ ಮಂದಿಗಳ
ಚಂದದಿ ಸೈನ್ಯವ ಕರೆಸೆನುತ ೨

ಕತ್ತಿ ಕೈಭಟರು ಸುತ್ತಲು ನಿಂತರು
ಚಿತ್ತಜನಯ್ಯನ ಸ್ಮರಣೆಯಲಿ
ಹಸ್ತಿಗಳು ಆಶ್ವಗಳು
ಹತ್ತಿಹ ಭಟರುಗಳು ಬರುತಿರಲು ೩

ರಥ ಗಜ ತುರಗ ಪದಾತಿಗಳೆಲ್ಲವು
ಅತಿಶಯದಿಂದಲಿ ಬರುತಿರಲು
ಪೃಥುವಿಯಲಿ ಅತಿಶಯದಿ
ರಥಿಕರು ಬಂದರು ಹರಿಯೆಡೆಗೆ ೪

ಭೇರಿ ನಗಾರಿ ತುತ್ತೂರಿ ಕೊಂಬುಗಳು
ಕಹಳೆ ಹೆಗ್ಗಹಳೆ ತಿತ್ತಿರಿ ಪಣವ
ತಾಳಗಳೂ ಮೇಳಗಳು
ಸಾಲು ಸಾಲಾಗೈತರಲು ೫

ಡಿಂಡಿಮ ಡಕ್ಕೆ ತಮ್ಮಟೆಗಳು
ಬಾರಿಸುತಲಿ ಢಂ ಢಂ ಶಬ್ದದಲಿ
ಚಂದದಲಿ ಗಗನದಲಿ
ನಿಂದು ಪ್ರತಿಧ್ವನಿ ಕೊಡುತಿರುಲು ೬

ದ್ವಾರಕಾಪಟ್ಟಣದಿ ಭಾಮೆರುಕ್ಮಿಣಿರೊಡನೆ
ಪೇಳುತಿರೆ ಅತಿಶಯವ ಕೇಳಿ ಹರುಷಿಸೆ ಅವರು
ಶ್ರೀ ಕೃಷ್ಣ ಲೀಲಾಮೃತವ ಕಥೆಯ ವಿಸ್ತಾರದಿ
ಹೇಳಿ ಕೇಳುವವರಿಗೆ ಶ್ರೀಹರಿಯು ಒಲಿಯುವನು
ಭಕ್ತಿಯಿಂದಲಿ ಈ ಚರಿತ್ರೆ ಪಠಿಸುವರನು
ಭಕ್ತವತ್ಸಲ ತನ್ನ ಭಕ್ತಸಂಗದೊಳಿಟ್ಟು
ಅತ್ಯಂತ ಹರುಷದಿಂ ಕಾಪಾಡುವನು ಎಂಬ
ಈ ಕಥೆಯು ವಿಸ್ತರದಿ ವಿಘ್ನವಿಲ್ಲದೆ ರಚಿಸಿ
ಶ್ರೀ ಹರಿವಾಯು ಗುರುಗಳ ಪ್ರೇರಣಾನುಸಾರದಲಿ
ಬರೆಸಿದರು ತಪ್ಪುಗಳೆಣಿಸಲಾಗದು ಬುಧರು
ಪರಮ ಪುಣ್ಯದ ಚರಿತ್ರೆಯು ಪೇಳಿ ಕೇಳುವರ
ಮನದೊಳಗೆ ನೆಲಸಿ ಶ್ರೀ ಹರಿ ಅವರ ಸಲಹುವನು
ಕರುಣಾಕರ ಕಮಲನಾಭ ವಿಠ್ಠಲ ನಮ್ಮ-
ನರಘಳಿಗೆ ಬಿಡದಂತೆ ಕರುಣದಿಂ ಕಾಪಾಡುತಿಹನು

## ಮಂಗಳ

ಮಂಗಳಾರತಿ ಮಾಡಿರೆ ಅಂಗನೆಯರೆಲ್ಲ ಪ

ಸರಸಿಜನಾಭಗೆ ದುರಿತ ವಿದೂರನಿಗೆ
ಸರಸಿಜಮುಖಿಯರು ಸರಸದಿ ಪಾಡುತ ೧

ಪರಮಪುರುಷನಿಗೆ ಗರುಡಗಮನನಿಗೆ
ಉರಗಶಯನನಿಗೆ ಕರಿರಾಜ ವರದಗೆ ೨

ಮಾವಕಂಸನ ವೈರಿ ಗೋವರ್ಧನೋದ್ಧಾರಗೆ
ಶ್ರೀವತ್ಸಲಾಂಛನಿಗೆ ಶ್ರೀ ವನಿತೆಯರಸನಿಗೆ ೩

ಮಂದರೋದ್ಧಾರನಿಗೆ ನಂದನ ಕಂದನಿಗೆ
ಸುಂದರಿ ಮಣಿಯರು ಚಂದದಿ ಪಾಡುತ ೪

ಅಶ್ವಾರೋಹಿಗಳತಿ ತ್ವರಿತದಿ ತಮ್ಮ
ಅಶ್ವಗಳನೆ ಏರುತ ಭರದಿ
ಸಿಸ್ತಿನಲಿ ಭಕ್ತಿಯಲಿ
ಚಿತ್ತಜಪಿತಗೊಂದಿಸುತಿರಲು ೭

ನೋಡುತ ಶ್ರೀಹರಿ ಕಡು ಸಂಭ್ರಮದಲಿ
ಕೂಡಿದ ಸೈನ್ಯವ ನಸುನಗುತ
ಗಾಡದಲಿ ಪ್ರೇಮದಲಿ
ತಾನಲಂಕರಿಸಿದ ಮನ ನಲಿದು ೮

ಕೋಟಿ ಸೂರ್ಯ ಪ್ರಕಾಶದಿ ಹೊಳೆವ ಕಿ-
ರೀಟವು ಸಿರದಲಿ ಧರಿಸಿದನು
ನೀಟಾದ ಕರ್ಣಗಳ
ಮಕರ ಕುಂಡಲಗಳ ಧರಿಸಿದನು ೯

ಕಡಗ ಕಂಕಣ ತೋಳಬಾಪುರಿ
ಸಡಗರದಲಿ ಭುಜಕೀರ್ತಿಗಳು
ಬಿಡಿ ಮುತ್ತು ಬಿಗದಿರುವ
ಪದಕಸರಗಳು ಹೊಳೆಯುತಿರೆ ೧೦

ಶಂಖ ಚಕ್ರವು ಗದೆಯು ಪದುಮವು
ಬಿಂಕದಿ ಹಸ್ತಗಳಲಿ ಧರಿಸಿ
ಮಂಕುಗಳಾ ಮೋಹಿಸುವ
ಅಲಂಕಾರವು ತಾ ಧರಿಸಿದನು ೧೧

ಮುತ್ತಿನ ಹಾರವು ಕಸ್ತೂರಿ ತಿಲಕವು
ವಿಸ್ತಾರದಂಟುಡುದಾರಗಳು
ವಕ್ಷದಿ ಶ್ರೀ ವತ್ಸಗಳೂ
ಕೌಸ್ತುಭಹಾರವು ಧರಿಸಿರಲು ೧೨

## ಮಂಗಳ

ಮಂಗಳಾರತಿ ಮಾಡಿರೆ ಅಂಗನೆಯರು
ರಂಗಗೆ ರಿಪುಮದ ಭಂಗ ಶ್ರೀಹರಿಗೆ ಪ

ಪರಮ ಭಕ್ತರನೆಲ್ಲ ಕರುಣದಿ ಸಲಹುವ
ಕರಿರಾಜ ವರದಗೆ ತರುಣಿ ಮಣಿಯರೆಲ್ಲ ೧

ಸಾಸಿರ ನಾಮಗೆ ಭೂಸುರ ಪಾಲಗೆ
ವಾಸುಕಿ ಶಯನಗೆ ಮೀಸಲು ಸತಿಯರು ೨

ಭುವನ ಮೋಹನನಿಗೆ ನವನವ ರೂಪನಿಗೆ
ಕವಿಜನ ಪ್ರಿಯಗೆ ನವರತ್ನ ತಟ್ಟೆಯಲಿ ೩

ಕನಕ ಕುಂಡಲನಿಗೆ ಕನಕಾಂಬರಧರಗೆ
ದಿನಕೋಟಿ ಪ್ರಭೆ ಪೋಲ್ವ ಸನಕಾದಿ ವಂದ್ಯನಿಗೆ ೪

ಕಮಲಾಕ್ಷ ಕೃಷ್ಣಗೆ ಕಮನೀಯ ರೂಪಗೆ
ಕಮಲನಾಭ ವಿಠ್ಠಲಗೆ ಕಮಲ ಮುಖಿಯರೆಲ್ಲ ೫

ಹೀಗೆಂದು ಆರತಿಯ ಬಾಗಿ ಬಳುಕುತ ಮಾಡಿ
ಸಾಗಿದರು ತಮ ತಮ ಪುರಕೆ ಬಂದವರೆಲ್ಲ
ನಾಗಶಯನನು ಪಂಚಪಾಂಡವರ ಸಂತೈಸಿ
ಪೋಗಿ ಬರುವೆನು ದ್ವಾರಕಾಪುರಿಗೆ ಎಂದೆನಲು
ಆಗ ಧರ್ಮಜ ಬಂದು ಶ್ರೀಧರಗೆ ವಂದಿಸುತ
ಪಂಚ ಪಾಂಡವರು ದ್ರೌಪದಿ ಸುಭದ್ರೆಯರೆಲ್ಲ
ಬಂದೆರಗುತಿರಲಾಗ ಇಂದಿರೇಶನು ನೋಡಿ
ಮಂದಹಾಸದಿ ನಗುತ ಮನ್ನಿಸುತ ಸಂತೈಸಿ
ಮುಂದಿನ್ನು ದ್ವಾರಕಿಗೆ ಪೋಗಿ ಬರುವೆನು ಎಂದು
ಬಂದು ಕುಂತಿಗೆ ಪೇಳಿ ಗರುಡನೇರುತ ತ್ವರದಿ

ಆಗ ನುಡಿದನು ಅಪರಾಧಂಗಳ ಕ್ಷಮಿಸೆಂದು ಬೇಡುತಲಿ
ಈ ವೈಭವವ ನೋಡಿ ದೇವತೆಗಳತಿಶಯದಿ
ದೇವ ಮಂದಾರ ಪಾರಿಜಾತದ ಮಳೆ ಕರೆಯೆ
ದೇವದುಂದುಭಿಗಳು ಮೊಳಗಿದವು ಕ್ಷಣದಿ
ದೇವಗಂಧರ್ವರು ಶ್ರೀ ಹರಿಯ ಸಿರಿ ಮುಡಿಗೆ
ಹೂವಿನ ಮಳೆ ಸುರಿಸುತ್ತಿರಲಾಗ ಸಂಭ್ರಮದಿ
ದೇವಪ್ಸರರು ನೃತ್ಯಮಾಡಿ ಶ್ರೀಹರಿಯನು ಹೀಗೆಂದು
ಕೊಂಡಾಡಿ ಪಾಡುವದು ಮತ್ತೇನೆಂದರೆ

ಸುರಿದರು ಪುಷ್ಪಮಳೆ ಸುರಸುಂದರಿಯರೆಲ್ಲ ಪ

ಪುರುಷೋತ್ತಮ ಹರಿ ಕೇಶವ
ಕರುಣಾಕರ ಮುರವೈರಿಯೆ
ತ್ವರಿತದಿ ಭಕ್ತನ ಕಾಯ್ದನೆ
ದುರಿತಗಳ ತರಿ ಎನ್ನುತ ೧

ಮರುಗ ಸುರ-ಹೊನ್ನೆಗಳು
ಸುರಗಿ ಜಾಜಿ ಪಾದರಿಯು
ಸುರಲೋಕದ ಪಾರಿಜಾತ
ಪರಿಪರಿಯ ಪುಷ್ಪಂಗಳು ೨

ಕಮಲನಾಭ ವಿಠ್ಠಲನಿಗೆ
ಕಮಲ ಮುಖಿಯರು ಬೇಗ
ಶ್ರಮಪರಿಹರಿಸುತ ಮಮ ಹೃ-
ತ್ಕಮಲದೊಳು ನಿಲ್ಲೆನುತ ೩

## ವಚನ

ಹೀಗೆಂದು ದೇವದೇವೋತ್ತಮನ ಕೊಂಡಾಡಿ
ಗಾನ ಮಾಡುತ ಹರಿಗೆ ಆರತಿಯ ಮಾಡುವ ಬಗೆ

ಪಟ್ಟೆ ಪೀತಾಂಬರ ನೆರೆಹಿಡಿದುಡಿ ಸೀರೆ
ದಿಕ್ಕುಗಳೆಲ್ಲಾ ಝುಗಝುಗಿಸೆ
ಅರ್ಥಿಯಲಿ ಅತಿ ಸೂಕ್ಷ್ಮದಲಿ
ಮರೆವ ವಿಚಿತ್ರದವಲ್ಲಿಯ ಹೊದಿಯುತಲಿ ೧೩

ಎಳೆ ತಳಿರಂದದಿ ಥಳಥಳಿಸುವ
ಪಾದಕೆ ಪಾದುಕೆಗಳ ಧರಿಸುತಲಿ
ಥಳಥಳಿಪ ರಥದೆಡೆಗೆ
ನಳಿನಾಕ್ಷನು ನಡೆ ತರಲಾಗ ೧೪

ಛತ್ರಿ ಚಾಮರ ವ್ಯಜನ ಪತಾಕೆಯು
ಜತ್ತಿಲಿ ಪಿಡಿಯುತ ಬರುತಿರಲು
ವಿಪ್ರರ ವೇದ ಘೋಷಣೆಯಿಂದ
ಮುತ್ತೈದೆಯರು ಸಹ ನಡೆತರಲು ೧೫

ಕಲಶ ಕನ್ನಡಿ ಎಡಬಲದಲಿ ಬಹು
ಸುಲಲಿತ ಮುತ್ತೈದೆಯರು ಪಿಡಿದು
ಅಡಿಗಡಿಗೆ ವಂದಿಸುತಾ ಬಹು
ಸಡಗರದಿಂದಲಿ ನಡೆತರಲು ೧೬

ತಾಳಮೇಳದವರೆಲ್ಲರು ಪೊರಟರು
ಶ್ರೀಲೋಲನ ರಥ ಮುಂಗಡೆಯಲಿ
ಯಾಚಕರೂ ಗಾಯಕರೂ
ಕೋಟಿ ಸಂಖ್ಯೆಯಲಿ ಬರುತಿರಲು ೧೭

ಜಯ ಹರಿ ಕೃಷ್ಣ ಜಯ ಹರಿ ಕೃಷ್ಣ
ಜಯ ಪರಾಕೆನ್ನುವ ಭಟರು
ಸರಸದಲಿ ಹರಿಯಿರಲು
ದೊರೆಗಳು ಮುಂಗಡೆ ಬರುತಿಹರು ೧೮

ಪೃಥುವಿಯು ಧಿಂದಿಮಿಕೆನ್ನುವ ತೆರದೊಳು
ರಥಿಕರು ಮುಂದೋಡುತ ಬರಲು
ಅತಿಶಯದಿ ಅಶ್ವಸವಾ-
ರರು ಮುಂದೋಡುತ ಬರುತಿರಲು ೧೯

ಅಂಬರದಲಿ ಸುರರೆಲ್ಲ ವಿಮಾನದಿ
ಬಂದು ನೆರೆದರಾ ಕಾಲದಲಿ
ಎಂದಿಗು ಈ ವಿಚಿತ್ರವನು
ಕಂಡವರಲ್ಲ ನಾವೆಂದೆನುತ ೨೦

ಹರಿಪಾರ್ಥರ ಸಮರವು ನೋಡಲು ಬಲು
ಪರಮ ಆಶ್ಚರ್ಯವು ಎನುತ
ಹರುಷದಲಿ ಗಗನದಲಿ
ಸುರಸುಂದರಿಯರು ನೆರೆದಿರಲು ೨೧

ಬಂದರು ಪಾರ್ಥನ ಬಳಸುತ ರಥಿಕರು
ನಿಂದರು ತಮ ತಮ ಕಾರ್ಯದಲಿ
ವಂದಿಸುತ ಭಕ್ತಿಯಲಿ
ನಿಂದಿರಲಾಕ್ಷಣ ನೋಡಿದನು ೨೨

ಬಾರೈ ಫಲ್ಗುಣ ತೋರೈ ಶೌರ್ಯವ
ಮೀರಿದ ಕಾರ್ಯವ ಮಾಡಿರುವೆ
ವೀರನು ನೀನಾದರೆ ಈ
ಕಾರ್ಯದಿ ಶೌರ್ಯವ ತೋರೆನಲು ೨೩

ಧರ್ಮಜ ನುಡಿದನು ಸಮರವು ಸಲ್ಲದು
ವಂದಿಸುತ ಕೇಶವಗೆನುತಿರಲು
ಹಿಂದೆಯೆ ಭೀಮನು ನುಡಿದ
ಸಮರವೆ ನಡಿಯಲಿ ಎಂದೆನುತ ೨೪

ಸುರಮುನಿ ವಂದ್ಯನೆ ದುರಿತ ವಿದೂರನೆ
ಮರೆಯಬೇಕೆನ್ನಪರಾಧಗಳ ೪

ಕಮಲಾಕ್ಷನೆ ರಕ್ಷಿಸು ಗಂಧರ್ವನ
ಸಮರಹಿತನೆ ಪ್ರಾರ್ಥಿಪೆ ನಿನ್ನ
ಕಮಲನಾಭ ವಿಠ್ಠಲ ದಯಮಾಡಿ
ಶ್ರಮ ಬಿಡಿಸುತ ನಿನ್ನ ಸೇವಕರ ೫

## ವಚನ

ಮುರವೈರಿ ಹರಿಕೃಷ್ಣ ಕೇಶವ ದಾಮೋದರನೆ
ಮಾಧವ ಜನಾರ್ದನನೆ ಮಧುಸೂದನನೆ ದೇವ
ವೇದವೇದ್ಯನೆ ಮದನ ಮೊಹನಾಕಾರನೆ
ಶ್ರೀಧರನೆ ಸಿಂಧು ಶಯನನೆ ಶ್ರೀಮುಕುಂದನೆ
ದೇವಕೀ ನಂದನನೆ ಧೇನುಕಾಸುರ ಹರನೆ
ಗೋವರ್ಧನೋದ್ಧಾರಿ ಗೋಪಕುವರನೆ ಸ್ವಾಮಿ
ನಿತ್ಯತೃಪ್ತನೆ ನಿಗಮವೇದ ವೇದ್ಯನೆ ದೇವ
ರುಕ್ಮಿಣಿ ರಮಣನೆ ಶ್ರೀಲತಾಂಗಿಯ ರಮಣ
ನೀನೊಲಿದರೀಗೆನ್ನ ಗಂಧರ್ವನನು ಉಳುಹು
ಎಂದೆನಲು ಶ್ರೀಕೃಷ್ಣ ಮಂದಹಾಸದಿ ನಗುತ
ಹೊಂದಿಸಿಡು ರುಂಡ ಮುಂಡಗಳ ಪಾರ್ಥನೆ ಎನಲು
ಹರಿಯು ನುಡಿದಂದದಲಿ ನಡಿಸಿದನು ಫಲ್ಗುಣನು
ಮುರವೈರಿ ಕರುಣಾಕಟಾಕ್ಷದಿಂದೀಕ್ಷಿಸಲು
ಚಿತ್ರರಥ ಮೈ ಮುರಿದು ಎದ್ದು ಕುಳಿತಿರಲಾಗ
ಪಾಂಡವರು ಉಳಿದ ಮಂದಿಗಳೆಲ್ಲ ನೋಡುತ್ತ
ಹರುಷದಿಂದಲಿ ಮೈ ಮರೆತು ದೇವನ ಸ್ತುತಿಸೆ
ಸುರಪತನಯನು ಹರಿಯ ಪಾದಗಳ ಬಿಗಿದಪ್ಪಿ
ಕಂಗಳುದಕದಿ ಹರಿಯ ಪಾದಂಗಳ ತೊಳೆಯುತ್ತ
ತೊದಲು ನುಡಿಯಿಂದ ಹರಿಯ ಸ್ತೋತ್ರ ಮಾಡುತಲಿರಲು
ನೋಡಿ ಶ್ರೀಹರಿ ಪಾರ್ಥನನೆಬ್ಬಿಸುತ ಸಂತೈಸೆ

ದೇವಪ್ಸರ ಸ್ತ್ರೀಯರು ಗಾನದಿ ನೃತ್ಯದಿ
ದೇವನ ಪೊಗುಳುತಿರೆ
ದೇವಲೋಕದ ಪಾರಿಜಾತ ಕುಸುಮ ಮಳೆ
ದೇವ ಕಮಲನಾಭವಿಠ್ಠಲಗೆ ಸುರಿಸಲು ಬಂದ ೫

## ಕಂದ

ತಡಿ ತಡಿ ತಡಿ ತಡಿ ಫಲ್ಗುಣಾ
ದುಡುಕುವದೇತಕ್ಕೆ ನಾನಿರುತಿರಲು
ಬಿಡು ಬಿಡು ಅಗ್ನಿ ಪ್ರವೇಶವಾ
ಸಡಗರವೇನಿದು ಸರಿಯಲ್ಲವು ಪಾರ್ಥ

## ಆರ್ಯ

ಏನಿದು ಸಾಹಸ ಫಲ್ಗುಣಾ ಬಿಡು ಬಿಡು
ಏನು ನಿನ್ನ ಮನದಿಷ್ಟಗಳು
ಮೌನವ ಬಿಡುತಲಿ ಪೇಳೆನ್ನೊಡನೆ
ಸಾನುರಾಗದಲಿ ನಡೆಸುವೆನು ೧

ಹರಿಧ್ಯಾನದಿ ಪರವಶನಾಗಿಹ
ವರಪಾರ್ಥನು ಕಂಗಳ ತೆರೆದು
ಹರಿಯನು ಕಾಣುತ ಪರಮ ಸಂಭ್ರಮದಿ
ಸಿರಬಾಗುತ ವಂದನೆ ಮಾಡಿ ೨

ಕಂಗಳುದಕದಿ ಪಾದಂಗಳ ತೊಳೆಯುತ
ಕಂಗಳು ದಣಿಯೆ ದೇವನ ನೋಡಿ
ಶೃಂಗಾರ ರೂಪನ ಚರಿತೆಯ ಪೊಗಳುತ
ಮಂಗಳ ಮಹಿಮನ ಕೊಂಡಾಡಿ ೩

ಹರಿ ಶ್ರೀ ಕೃಷ್ಣನೆ ಅಚ್ಚುತ ಮಾಧವ
ಶರಣಾಗತ ರಕ್ಷಕದೇವ

ಕಮಲದಳಾಕ್ಷನು ಕಡುಗಲಿ ಭೀಮನ
ನುಡಿಯನು ಕೇಳುತ ತಕ್ಷಣದಿ
ಶರಗಳನು ಹೂಡಿದ ಶ್ರೀ–
ಕಮಲನಾಭ ವಿಠ್ಠಲ ಒಲಿದು ೨೫

## ವಚನ

ಹೀಗೆ ಧರ್ಮಜನು ಯುದ್ಧವು ಬೇಡೆಂದೆನಲು
ಮರುತಾತ್ಮಜನು ಯುದ್ಧವು ನಡೆಯಲೆಂದೆನಲು
ಕೇಳಿ ನಸುನಕ್ಕು ಶ್ರೀಹರಿಯು ಮಾತಾಡಿದನು
ಈಗ ಯುದ್ಧವು ಬಿಟ್ಟುಬಿಡು ಎನೆ ವೈರಿಯನು
ಕಾಪಾಡುವೆನು ನಿನ್ನ ಎನಲು ಫಲ್ಗುಣ ನುಡಿದ
ಶರಣ ಹೊಕ್ಕವರನ್ನು ಪೊರೆಯದಿರೆ ಅಪಕೀರ್ತಿ
ತಡೆಯದಲೆ ಬಂದೊದಗುವದು ಕೇಳು ಶ್ರೀಕೃಷ್ಣ
ಅದರಿಂದ ನಾನೀಗ ಯುದ್ಧ ಮಾಡಲೆಬೇಕು
ಜಯವು ಅಪಜಯವು ನಿನ್ನನು ಕೂಡಿಹುದೊ ಸ್ವಾಮಿ
ನಿನ್ನೊಡನೆ ಯುದ್ಧವನು ಮಾಡಲು ನೀನೆ ಪ್ರೇರಕನೊ
ಹೀಗಿರುವ ಕಾಲದಲಿ ವೈರಿಯನು ಬಿಡಲಾರೆ
ಯುದ್ಧವೇ ನಡೆಯಲೆಂದನಲು ಶ್ರೀ ಹರಿ ನುಡಿದ
ಹುಡುಗ ಬುದ್ಧಿಯು ಬೇಡ ಬಿಡು ಎನ್ನ ವೈರಿಯನು
ಹೀಗೆನಲು ಶ್ರೀ ಹರಿಯು ಫಲ್ಗುಣನು ಕೇಳದಲೆ
ಬೆನ್ನಿಲಿಹ ಬತ್ತಳಿಕೆಯೊಳು ವೈರಿಯನು ಇರಿಸಿ
ನಿಂತ ಹರಿ ಪಾರ್ಥರಿಬ್ಬರು ಯುದ್ಧ ಮಾಡುತ ಹರುಷದಿ
ಹರಿ ಪಾರ್ಥರು ನಿಂತರು ಹರುಷದಲಿ
ಸುರರಂಬರದಲಿ ನೋಡುತಲಿರಲು
ಸುರಿದರು ಬಾಣಗಳನು ಸರಸದಲಿ
ಹರಿಚರಣಗಳಿಗೆ ವಂದಿಸುವಂದದಿ
ಪರಮ ಭಕುತಿಯಲಿ ಪ್ರಥಮ ಬಾಣವ ಬಿಡೆ
ನೋಡಿದ ಶ್ರೀಹರಿ ಪಾರ್ಥನ ಬಾಣವ
ಹೂಡಿದ ಬಾಣವ ಆಶೀರ್ವದಿಸುತ

ಗಾಡಕೆ ಸಿರಸಿನ ಮೇಲ್ಗಡೆ ಬಿಡುತಿರೆ
ಈ ತೆರದಲಿ ಬಾಣದ ಮಳೆಗರೆಯಲು
ನೀತಿಯಿಂದ ಕತ್ತರಿಸೆ ಮಧ್ಯದಲಿ
ಆಗ ಪಾರ್ಥ ಯೋಚಿಸಿ ಮನದೊಳಗೆ
ಬೇಗದಿ ಶುದ್ಧಾಚಮನವ ಮಾಡಿ
ಅಸ್ತ್ರದೇವತೆಗಳ ಸ್ಮರಿಸಿದ ತಾನು
ಭಕ್ತಿಲಿ ಹರಿಯನು ವಂದಿಸಿ ಮನದಿ
ಬಿಟ್ಟನು ಬಾಣವ ನಿಷ್ಫಲವಾಗಲು
ಅಸ್ತಮಾನ ಸಮಯವಾದುದು ನೋಡಿ
ಚಿತ್ರರಥನ ಸಿರ ಕತ್ತರಿಸುತಲಿ
ಮತ್ತೆ ತನ್ನ ಸೈನ್ಯವ ಹಿಂದಿರುಗಿಸಿ
ಯಾದವರೆಲ್ಲರ ಒಡಗೂಡುತಲಿ
ದ್ವಾರಕಾಪುರಕೆ ಹೊರಡುತಲಿರಲು
ನೋಡುತ ನಾರದರೋಡತ ಬರುತಲಿ
ಗಾಡನೆ ನುಡಿದರು ಪಾರ್ಥನ ನೋಡಿ
ಗಾಡಿಕಾರ ಶ್ರೀಕೃಷ್ಣನು ತೆರಳಿದ
ಕಾರಣವೇನೆನುತಲಿ ಕೇಳಲು
ರೂಢಿಗೊಡೆಯ ಶ್ರೀ ಕಮಲನಾಭ ವಿ–
ಠ್ಠಲನ ಸ್ಮರಿಸಿ ವಂದಿಸಿ ಮನದೊಳಗೆ

ಚಿತ್ರರಥನ ಶಿರ ಕತ್ತರಿಸಿರಲು
ರಕ್ತಧಾರೆಯಂ ನೋಡುತ ತ್ವರದಿ
ಒತ್ತಿ ನುಡಿದರು ನಾರದರೀಪರಿ
ವ್ಯರ್ಥವಾಯಿತು ನಿನ್ನ ವಚನಗಳು ೧

ಭ್ರಷ್ಟನಾದಿ ನೀನೆನ್ನುತಲಿರಲು
ಆಶ್ಚರ್ಯವ ಹೊಂದಿದ ಪಾರ್ಥ
ಮತ್ತೆ ರುಂಡ ಮುಂಡಗಳನೆ ನೋಡುತ
ಚಿತ್ರ ಪ್ರತಿಮೆಯಂತಿರೆ ಪಾರ್ಥ ೨

ಪಿಡಿದವರು ದಡ ದಡ ಬರುತಿರೆ
ಸಡಗರದಲಿ ಬಿರದ್ಹೊಗಳುವ ಭಟರುಗಳು
ತ್ವರಿತದಿ ಓಡುತ ಬರುತಿರಲು
ಕಡಲಶಯನ ಹರಿ ಕಡು ತ್ವರಿತದಿ ಬಂದ
ತಡಮಾಡದೆ ಧೃಡ ಭಕುತನಿದ್ದೆಡೆಗೆ ೨

ನೀಲವರ್ಣನು ಕೋಮಲಕಾಯನು
ಮೇಘಶಾಮಲನು ಪ್ರೇಮದಿ ಭಜಿಸಿದ
ಕಾಮಿನಿ ದ್ರೌಪದಿಗಕ್ಷಯ ನೀಡಿದನು
ಕಾಮನ ಪಿತ ತನ್ನಾರಾಧಕರನು
ಕ್ಷೇಮದಿ ಪೊರೆಯುವನು
ಕಾಮಧೇನು ಬಂದಂತೆ ಭಕ್ತನ
ಸಾನುರಾಗದಿ ರಕ್ಷಿಸಲೋಸುಗ ಬಂದ ೩

ವರದಾಯಕ ಹರಿ ಪರಿ ಪರಿ ಭಕುತರನು
ಕರ ಪಿಡಿಯುತ ಉದ್ಧರಿಸಲು ನೆಲಸಿಹನು
ಕರಿರಾಜನ ಮೊರೆ ತ್ವರಿತದಿ ಲಾಲಿಸಿ
ರಕ್ಷಿಸಿ ಪೊರೆದಿಹನು
ಕರುಣಾಕರ ಹರಿ ಶರಣರಿಗಭಯವ
ವರಹಸ್ತವ ತೋರುತ ಮೆರೆಯುವನು
ಪರಮಭಕ್ತನ ಪೊರೆಯುವ ಭರದೊಳು
ಕರುಣಾಕರ ಹರಿ ತ್ವರಿತದಿ ಬರಬರುತ
ಸುರರೊಡೆಯನು ಸುಂದರ ಶಾಮಲನು
ವರಲಕ್ಷ್ಮಿಯ ಒಡನಾಡುತ ಹರುಷದಿ ಬಂದ ೪

ದೇವಲೋಕದಿ ದೇವದುಂದುಭಿಗಳು
ಮೇರೆ ಇಲ್ಲದೆ ಮೊಳಗೆ
ದೇವನಾರಿಯರೆಲ್ಲ ಹೂವಿನ ಮಳೆ ಕರೆಯೆ
ದೇವಗಂಧರ್ವರು ಗಾನವ ಮಾಡುತಿರೆ

ಸುರಪನ ಸುತನಣ್ಣನು ಪೇಳಿದನು
ಸರಸದಿ ಅಗ್ನಿಪ್ರವೇಶಿಸೆನೆ
ತರಿಸುವೆ ಅಗ್ನಿಪ್ರವೇಶಕೆ ಸಾಧನ
ವರ ಕಮಲನಾಭ ವಿಠ್ಠಲ ಒಲಿವ ೩

## ವಚನ

ಹೀಗೆನುತ ಅಗ್ನಿ ಪ್ರಜ್ವಲಿಸುವಂದದಿ ಮಾಡಿ
ಆಗ ಭೀಮನು ನುಡಿದ ಅಂಜದಿರು ಫಲ್ಗುಣನೆ
ಬೇಗದಿಂದಲಿ ಅಗ್ನಿ ಪ್ರವೇಶಿಸಿ ತಕ್ಷಣದಿ
ನಾಗಶಯನನು ಪ್ರೀತನಾಗಲೆಂದೆನುತ
ಯೋಗಿವಂದ್ಯನ ಮನದಿ ಧ್ಯಾನಿಸುತ ಭಕ್ತಿಯಲಿ
ಸಾಗರಜಾಪತಿ ಪ್ರೀತನಾಗಲೆಂದೆನುತ ಸ್ಮರಿಸಿ
ಬೇಗ ಸ್ನಾನವ ಮಾಡು ಶುಭ್ರ ವಸ್ತ್ರವ ಧರಿಸು
ಈಗ ವಂದಿಸುತ ಹಿರಿಯರನುಮತಿಯ ಪಡೆ ಎನಲು
ಕೇಳಿ ಫಲ್ಗುಣ ಅಣ್ಣ ಪೇಳಿದಂದದಿ ನಡಸಿ
ದ್ವಾರಕಾನಾಥನನು ಭಕ್ತಿಯಿಂದಲಿ ಸ್ಮರಿಸಿ
ಬೇಗ ಅಗ್ನಿಗೆ ಪ್ರದಕ್ಷಿಣೆ ಮಾಡಿ ಕೈಮುಗಿದು
ಕಂಗಳನು ಮುಚ್ಚಿ ಶ್ರೀ ಕಮಲನಾಭ ವಿಠ್ಠಲನೆ
ರಕ್ಷಿಸು ರಕ್ಷಿಸೆಂದೆನುತ ಸ್ತೋತ್ರ ಮಾಡುತಲಿದ್ದನು

## ಆರ್‍ಯ

ನೋಡುತ ನಾರದರಲ್ಲಿಯೆ ನಿಂತರು
ಪಾಡುತ ಹರಿ ಕೀರ್ತನೆಗಳನು
ಕೂಡಿದ ಜನರೆಲ್ಲರು ಹಾಹಾ ಎನೆ
ಗಾಡದಿ ಬಂದರು ಹರಿ ಬಳಿಗೆ ೧

ಕೃಷ್ಣ ಕೃಷ್ಣ ಕಾಪಾಡು ಪಾರ್ಥನ
ಕಷ್ಟವು ನೋಡಲು ಅಸದಳವು
ನಷ್ಟಪಡಿಸುವರೆ ನಿನ್ನಯ ಬಿರುದನು
ಭಕ್ತವತ್ಸಲನಲ್ಲವೆ ದೇವ ೨

ನಡಿ ನಡಿ ಕೃಷ್ಣ ನಿನ್ನಡಿಗಳ ಧ್ಯಾನಿಸಿ
ಸಡಗರದಿಂದಗ್ನಿ ಪ್ರವೇಶಿಸುವ
ಬಿಡಿಸಿ ರಕ್ಷಿಸು ಕಮಲನಾಭ ನಿನ್ನ
ಅಡಿಗಳ ಸೇವಕನೆಂದೆನಲು ೩

## ವಚನ

ನಾರದರ ನುಡಿ ಕೇಳಿ ನಾರಾಯಣನು ತನ್ನ
ಸೇನೆಯಲ್ಲವು ಕಳುಹಿ ದ್ವಾರಕಾಪಟ್ಟಣಕೆ
ವೈನತೇಯರ ಸ್ಮರಿಸೆ ಬಂದನಾಕ್ಷಣದಲ್ಲಿ
ಬೇಗ ಗರುಡನ ಏರಿ ದ್ವಾರಕಾಪತಿ ತಾನು
ಕಡುತ್ವರದಿ ಬರುತಿರಲು ಸುರರೆಲ್ಲ ಪೊಗಳುತಿರೆ
ದೇವಲೋಕದ ಪಾರಿಜಾತ ಕುಸುಮವ ತುಂಬಿ
ದೇವನಾರಿಯರು ಹೂವಿನ ಮಳೆಯ ಹರುಷದಲಿ
ದೇವ ದೇವೋತ್ತಮನ ಸಿರದಲಿ ಸುರಿಸುತಿರೆ
ದೇವಗಂಧರ್ವರು ಗಾನದಿಂ ಪೊಗಳುತಿರೆ
ಸಾಗಿ ಬಂದನು ಹರಿಯು ಪಾರ್ಥನ ನೋಳ್ವ ತವಕದಿಂದ

ಬಂದಾ ಆನಂದ ಗೋವಿಂದ ಮುಕುಂದನು ಪ

ಬಂದ ಬಂದ ಸುರವಂದಿತ ದೇವನು
ಮಂದ ನಗೆಯ ಮುಖದಿಂದ ಶೋಭಿಸುತಲಿ ಅ.ಪ

ಕೆದರಿದ ಕೇಶವು ಚದುರಿದ ನಾಮವು
ಹೃದಯದಿ ಹಾರವು ಶೋಭಿಸುತ ಮುತ್ತಿನ ಹಾರವು
ಪದಕಗಳೆಲ್ಲವು ವಿಧವಿಧ ಹಾರಗಳೆಲ್ಲವು ಶೋಭಿಸುತ
ಜರದ ವಲ್ಲಿಯು ಜಾರುತಿರಲು ತ್ವರಿತದಿ ಬರಬರುತ
ಕರದ ಕಂಕಣ ಘಲುಘಲುರೆನ್ನುತಿರೆ
ತರಳರ ಪೊರೆಯಲು ಬಂದ ತೆರೆದವೊಲ್ ೧

ಎಡಬಲದಲಿ ಚಾಮರಗಳನೆ ಪಿಡಿದವರು
ಹಿಂದೋಡುತ ಬರೆ ಮುದದಲಿ ಶ್ವೇತಛತ್ರಿಯ

ಗತಿ ಶ್ರೀಪತಿಯೆ ರಕ್ಷಕನೆನುತಲಿ
ಸ್ತುತಿಸುತ ಭಕ್ತಿಯಲಿ ೧೧

ಇಬ್ಬರು ಹೊರಟರು ಯಮುನಾ ನದಿ ಬಳಿ
ಹಬ್ಬಿರುವ ವೃಕ್ಷವನೆ ಕಂಡು
ಕೊಬ್ಬಿಳಿದ ಗಂಧರ್ವನ ನೋಡಿ
ಉಬ್ಬಿಲೆ ನುಡಿದನು ೧೨

ಚಿತ್ರರಥ ಈ ವೃಕ್ಷವನೇರಿ
ಸುತ್ತ್ಯಾರಾದರು ಬರುವರೊ ನೋಡಿ
ಮತ್ತ್ಯಾರಾದರು ಅರಿಯದ ಹಾಗೆ
ಹತ್ತಿರದಲಿ ಕೂಡೆಂದ ೧೩

ನಾರಿಯರೆಲ್ಲ ನದಿಯ ಸ್ನಾನಕೆ
ದೂರದಿ ಬರುತಿಹರೆನ್ನುತ ಪೇಳಲು
ನಾರದರೀ ಪರಿ ಪೇಳಿದರಾಗ
ಮೌನದಿ ಕೂಡೆಂದು ೧೪

ಕರಚಪ್ಪಾಳೆಯ ನೀಡುವೆನು ನಾನು
ಮರದಿಂದಿಳಿದು ಬರುತಲಿ ಸ್ತ್ರೀಯರೊ-
ಳ್ಹಿರಿಯಳ ಪಾದವ ಪಿಡಿಯುತ ಬೇಡೂ
ಕರಣಿಪುದೆಂದೆನುತಾ ೧೫

ಕರುಣದಿ ನಿನಗೆ ಅಭಯವ ಕೊಡುವಳು
ತ್ವರಿತದಿ ಕರೆದೊಯ್ವಳು ತನ್ನ ಮನೆಗೆ
ದುರಿತವ ತಪ್ಪಿಸಿ ಕಾಪಾಡುವಳು
ಸರಿಮಾಳ್ಪೊಳು ಕಾರ್ಯ ೧೬

ಕರುಣಾಕರನೆ ರಕ್ಷಿಸು ಎನ್ನುತ
ಮರದಡಿ ಕುಳಿತು ನಾರದರೀಪರಿ

ಸಂಭ್ರಮದಿಂದವರ
ಭಂಗ ಹರಿಪಳಿಗೆ ೩

ಭಕ್ತಿ ಭಾವಗಳಿಂದ
ಪುಷ್ಪಗಂಧಗಳಿಂದ
ಭಕ್ತ ವತ್ಸಲನರಸಿ
ರಕ್ಷಿಸು ರಕ್ಷಿಸೆಂದು ೪

ಕನಕಾಭರಣಗಳಿಂದ
ಹರಿರಾಣಿಗಲಂಕರಿಸಿ
ಸನಕಾದಿ ವಂದ್ಯನ
ಸತಿ ಮಹಲಕ್ಷ್ಮಿಗೆ ೫

ಅರಿಶಿನ ಕುಂಕುಮ
ಅರಸಿ ಮಹಲಕ್ಷ್ಮಿಗೆ
ವರಪುಷ್ಪ ತಾಂಬೂಲ-
ಗಳನರ್ಪಿಸುತ ಬೇಗ ೬

ಕಮಲನಾಭ ವಿಠ್ಠಲ-
ನ ರಾಣಿ ಲಕ್ಷ್ಮಿಗೆ
ಕಮಲ ಸಂಭವಳಿಗೆ
ಉಡಿಯ ತುಂಬುತ ಬೇಗ ೭

ಉಡಿಯ ತುಂಬುವೆ ಕಡಲೊಡೆಯನ
ಮಡದಿಗ್ಗರುಷದಿ ಪ

ಬಿಡಿಯ ಮುತ್ತುಗಳ ಬಿಗದ ತಟ್ಟೆಯ
ಪಿಡಿಯುತೀಗಲೆ ಅ.ಪ

ವರದ ಶ್ರೀ ಕಮಲನಾಭ ವಿಠ್ಠಲನ
ಸ್ಮರಿಸುತ ಕ್ಷಣಕ್ಷಣಕೆ ೧೭

## ಆರ‍್ಯ

ಬಂದರು ನಾರಿಯರೆಲ್ಲರು ಭರದೊಳು
ನಿಂದರು ನದಿಯಲಿ ಸ್ನಾನವು ಮಾಡೆ
ಮುಂದೆ ಪುರೋಹಿತರಿಲ್ಲವು ಹ್ಯಾಂ–
ಗೆಂದು ಹಲಬುತಿರೆ ನಾರಿಯರು ೧

ಸ್ನಾನವು ಮಾಡಲು ಸಂಕಲ್ಪವು ಪೇಳುವ–
ರಿನ್ಯಾರಿಹರೆನುತ ಚಡಪಡಿಸೆ
ಮೌನದಿ ಕುಳಿತಿಹ ನಾರದರಡಿಗೆ
ಸಾನುರಾಗದಲಿ ನಮಿಸಿದರು ೨

ಸಂಕಲ್ಪವು ಪೇಳಲು ಬೇಕೆನ್ನಲು
ಕಂಸಾರಿಯ ಪಾದ ಸ್ಮರಿಸುತಲಿ
ಹಂಸವಾಹನ ಪಿತ ಕಮಲನಾಭ
ವಿಠ್ಠಲನನು ಸ್ಮರಿಸುತ ಪೇಳಿದನು ೩

## ವಚನ

ಕೃಷ್ಣ ಕೃಷ್ಣ ಹರಿ ಕೃಷ್ಣ ಕೃಷ್ಣ ಎನುತ
ಕೃಷ್ಣನ ತಂಗಿ ಸುಭದ್ರೆಯ ಮುಖ ನೋಡಿ
ಸ್ಪಷ್ಟವಾಗಿ ಪೇಳ್ವೆ ಸಂಕಲ್ಪವೆಂದೆನುತ
ತಟ್ಟನೆ ನದಿಯೊಳು ಮುಳುಗೇಳುತ ನೀವು
ಜತ್ತಾಗಿ ಕೈ ಮುಗಿದು ಭಕ್ತಿಯಿಂದಲಿ ಕೇಳಿ
ಸತ್ಯವಾದ ಸಂಕಲ್ಪ ಪೇಳುವೆನು ನಾನೆಂದೆನಲು

ಮುಳುಗಿ ಕೈ ಮುಗಿದು ನಿಂತರು ಬೇಗ ಬಹು
ವಿನಯದಿ ಬೇಡಿಕೊಂಡರು ಆಗ ೧

ಮುದದಿಂದಲಿ ಆ ಮುನಿಯ ಪಾದಕೆ
ಎರಗಿ ಕೇಳಿದರು ೫

ಗತಿಯೇನಿನ್ನು ಪೇಳಿರಿ ಮುನಿಗಳೆ
ಹಿತ ಪೇಳುವರೊಬ್ಬರನು ಕಾಣೆ
ಸತಿಯರು ಪೇಳಲು ಪತಿ ಬಂದೆರಗಿದ
ಯತಿಗಳ ಪಾದದಲಿ ೬

ಬಂದು ಮುನಿಯ ಪಾದವ ಪಿಡಿದು
ವಂದಿಸಿ ನಮಿಸುತ ಭಯ ಭಕ್ತಿಯಲಿ
ಬಂದ ಭಯಕೆ ಕಾರಣಗಳನು
ಚಂದದಿ ಕೇಳಿದರು ೭

ಚಿತ್ರರಥ ನೀ ಸತ್ತೆಯೋ ಎನುತ
ವ್ಯರ್ಥವಾಯಿತು ನಿನ್ನ ಗಾನವು
ಮತ್ತೇನಿದಕೆ ಯೋಚಿಸುತಿರುವಿ
ಸತ್ಯದಿ ನುಡಿಯೆಂದ ೮

ನೀವಲ್ಲದೆ ರಕ್ಷಕರಿನ್ಯಾರು
ಸಾವಧಾನದಿ ಪೇಳಿರಿ ಗುರುಗಳೆ
ಯಾವ ಪರಿಯಲ್ಲಾದರು ರಕ್ಷಿಸ
ಬೇಕೆಂದೆನುತಿರಲು ೯

ದಡದಡನೆ ಕಣ್ಣೀರನು ಸುರಿಸುತ
ಗಡಗಡ ನಡಗುತ ಭಯಪಡುತಿರಲು
ಬಿಡು ಚಿಂತೆಗಳ ರಕ್ಷಿಪ ಶ್ರೀ ಹರಿ ಎ–
ನ್ನೊಡನೆ ಬಾರೆನಲು ೧೦

ಸತಿಯರನೆಲ್ಲಾ ಕಳುಹುತ ಪುರಕೆ
ಅತಿಭಕ್ತಿಲಿ ನಿಂದಿರಲದ ನೋಡಿ

## ಆರ್ಯ

ಬಂದರಾಗ ಬಹುಚಂದದ ಸತಿಯರು ಆ-
ನಂದದಿಂದ ಮಾತಾಡುತಲಿ
ತಂದ ಜಲಗಳನು ಚಲ್ಲುತ ತವಕದಿ
ರಂಗವಲ್ಲಿಗಳ ಹಾಕುತಿರೆ ೧

ಇಂದಿಗೆ ಕಂಡೆನು ಇವರ್‍ಯಾರೆನುತಲಿ
ಮುಂದಕೆ ಬಂದಳು ಬೇಗದಲಿ
ಕಂದರ್ಪನ ಸತಿಯರಂದದಿ ಪೊಳೆಯುವ
ಸುಂದರಿಯರ ಕಾಣುತಲಾಗ ೨

ಚಂದದಿ ಅವರನು ಕೇಳುವೆನೆನುತಲಿ
ಸುಂದರಿಯರ ಬಳಿಯಲಿ ಬಂದು
ಮಂದಹಾಸ ನಗೆಯಿಂದ ಸರಸ್ವತಿಯು
ಚಂದಿರ ಮುಖಿಯರ ಕೇಳಿದಳು ೩

ಯಾರಮ್ಮ ಪೇಳಿರಿ ನೀವು ಯಾರಮ್ಮ ಪ

ನಾರಿಯರ ಮುಖವು ಮುಂಗಾರು ಮಿಂಚುಗಳಂತೆ
ತೋರ್ಪುದು ಥಳಥಳ ಹೊಳೆವ ಸುಂದರಿಯರೆ ಅ.ಪ

ರಂಭೆ ಊರ್ವಸಿಯಂತೆ ತೋರುವುದು ಬಹು
ಸಂಭ್ರಮ ಮನಕಾಗುತಿಹುದು ಕೇಳಿ
ಕಂಬು ಕಂದನರಸಿಯರಂತೆ ಕಾಣುವ
ಅಂಬುಜಾಕ್ಷಿಯರೆ ಮನದ್ಹಂಬಲ ಪೇಳಿರಿ ೧

ರತಿ ಶ್ಯಾಮಲೆಯರೆಂದು ತಿಳಿದೆ ನಿಮ್ಮ
ಅತಿ ಚಲ್ವಿಕೆಗೆ ಮನ ಮರೆದೆ ಕೇಳಿ
ಶಚಿ ಪಾರ್ವತಿಯರೆಂದು ಮತಿ ಭ್ರಮಿಸುತಲಿದೆ
ಹಿತದಿ ಪೇಳಿರಿ ನಿಮ್ಮ ಅತಿಶಯದ ವಾರ್ತೆಯ ೨

ಪಕ್ಷಿವಾಹನ ಪ್ರದ್ಯುಮ್ನನಿಗರ್ಪಿಸಿ
ಲಕ್ಷ ಪದಗಳ ಕ್ಷಿಪ್ರದಲಿ

ನಾರದರು

ಜಯ ಜಯ ಜಯವೆನ್ನುತ ಘ್ ಯೋಚನೆ ಮಾಡಿ
ಜಯಾಪತಿ ಸಂಕರ್ಷಣನ ರ್ಗುಗಳು
ಮಹಿಮೆಯ ಪೊಗಳುತ ಪದ್ ಮನಸಿಗೆ ಬರಲು
ಅನಿಮಿಷೇಶನಿಗೆ ಅರ್ಪಿಸುತ ಕೆಂದು

ನನು ಕಾಣಲು
ಶೇಷ ಶಯನ ಸರ್ವೇಶನ ಸ್ತು
ಸಾಸಿರ ನಾಮಗಳಿಂ ಭಜಿಸಿ
ವಾಸುದೇವನಿಗೆ ಅರ್ಪಿಸಿ ಲಕ್ಷ
ಭಾಸುರಾಂಗನನು ಪೂಜಿಸುತ

೧

ನಾರಾಯಣನನು ನಮಿಸುತ
ಬಾರಿಬಾರಿಗೂ ಪ್ರಾರ್ಥಿಸುತ
ಶ್ರೀ ರಮಣನಿಗರ್ಪಿಸಿ ಲಕ್ಷಕೆ ಪ
ನ್ಯೂನತೆಯಾಗಿರಲದ ಕಂಡು

೨

ಬೇಗದಿ ಪುತ್ರನ ನೋಡುತ ಹ
ಕೇಳ್ಳೈ ಕಂದ ಎನ್ನಯ ವಚನ ದಿ
ನಾರದವಂದ್ಯನ ಗುಣಗಳ ಪ ತಲಿ
ಪೂರೈಸಿ ಪಂಚ ಲಕ್ಷಗಳ

೩

ಆ ನುಡಿ ಕೇಳುತಲಾಕುವರನ
ನೋಡುವೆ ಸಾಧ್ಯವೆ ಎನಗೆನ
ಪಾದಕೆ ನಮಿಸುತ ನಿಂದಿರಲ ಗೆ
ನೋಡುತ ಪೇಳಿದರೀ ನುಡಿ

೪

ಇಂದಿಗೆ ಸಾಧ್ಯವಿಲ್ಲದಿದ್ದರೂ
ನ್ನೊಂದು ಜನ್ಮದಲ್ಲಿದ್ದು ನಡಿ

ಸರಸಿಜೋದ್ಭವನ ರಾಣಿಯನು ಪೋಲು–
ತಿರುವಂಥ ಮುಖದ ಭಾವವನು ನೋಡಿ
ಕರ ಜೋಡಿಸುತ ಬೇಡುತಿಹೆನು ಕರುಣವ ಮಾಡಿ
ಕಮಲನಾಭ ವಿಠ್ಠಲನ ಕರುಣದಿ ಪೇಳಿರಿ ೩

## ವಚನ

ಹೀಗೆ ನುಡಿಯುವ ಸರಸ್ವತಿಯ ನುಡಿಗಳ ಕೇಳಿ
ಬಾಗಿ ಸಿರವನು ವಂದನೆಯ ಮಾಡಿ ಭಕ್ತಿಯಲಿ
ಜೋಡಿಸುತ ಕರಗಳನು ಹೀಗೆ ಸ್ತೋತ್ರವ ಮಾಡಿ
ಕೊಂಡಾಡಿದರು ಹರುಷದಿಂದ

ಕೇಳಮ್ಮ ಎನ್ನ ಮಾತು ಸಾಧ್ವಿಯೇ ನಿನ್ನ
ಪಾದ ಸೇವಕರೆಲ್ಲ ನೀನರಿಯೆ ಪ

ಇಲ್ಲಿಗೇತಕೆ ಬಂದಿರಿ ನಿಮ್ಮ ಹರ್ಷ
ಸೊಲ್ಲು ಕೇಳಲು ಬಂದಿರುವೆವಮ್ಮಾ ೧

ನಿಮ್ಮ ಭೇಟಿಗೆ ನಿತ್ಯ ಬರುವೆವು ಕೇಳಿ
ನಿಮ್ಮ ಭೇಟಿಯು ನಮಗೆ ದುರ್ಲಭವು ೨

ಭೇಟಿಗೆನುತ ಬಂದು ನೀವೆಲ್ಲ ಕೇಳಿ
ಊಳಿಗ ಮಾಡುವುದಿದು ಸಲ್ಲ ೩

ನಮ್ಮ ಪಾಪವು ಕಳೆಯಲೋಸುಗ ಕೇಳಿ
ನಿಮ್ಮ ಸೇವೆಯು ಮಾಡಬೇಕೀಗ ೪

ಏನಿದು ಸೋಜಿಗ ಪೇಳಿರಿ ನಿಮ್ಮ
ಬಾಧಿಪ ಪಾಪವ ತೋರಿರಿ ೫

ಅತಿಶಯವಾಗಿಹ ಪಾಪವು ನಿಮ್ಮಂಥ
ಪತಿವ್ರತ ಸೇವದಿ ಪೋಪವು ೬

ಕಡಗಕಂಕಣ ಹೊಳೆಯುತ ನಡುವಿನೊಡ್ಯಾಣ
ಸಡಗರದಿಂದ ಮೆರೆಯುತ
ಬಿಡಿ ಮುತ್ತು ಬಿಗದಿಹ ಪದಕಗಳೊಪ್ಪುತ
ಬಡ ನಡುವಿನ ಬಾಲೆ ಪೊಡವಿಗೊಡೆಯನ ಕೂಡಿ ೩
ಕ್ಷೀರಸಾಗರ ಕನ್ನಿಕೆ ವಾರಿಜೋದ್ಭವನ
ಮಾರನಯ್ಯನ ಪ್ರಿಯಳೆ
ಸಾರಸಾಕ್ಷಿಯೆ ನಿನ್ನ ಬಾರಿಬಾರಿಗೆ ಸ್ತುತಿಸಿ
ಚಾರುಗಾಯನದಿಂದ ಬಾರೆಂದು ಕರೆವರು ೪

ನಿಗಮವೇದ್ಯಳೆ ನಿನ್ನನು ಬಗೆಬಗೆಯಿಂದ
ಪೊಗಳಿ ಪಾಡುತಲಿಪ್ಪರೆ
ಖಗವಾಹನನ ರಾಣಿ ಮಿಗೆ ಹರುಷದಿಂದಲಿ
ನಗುತ ನೀ ಬಾರೆ ಕಮಲನಾಭವಿಠ್ಠಲನ ರಾಣಿ ೫

ಬಂದಳಮ್ಮ ಲಕ್ಷ್ಮಿದೇವಿ
ಇಂದು ನಮ್ಮ ಮನೆಯಲಿ ಪ

ಇಂದಿರೇಶನೊಡನೆ ಕೂಡಿ
ಚಂದದಿಂದ ನಲಿಯುತ ಅ.ಪ

ಕಾಲಗೆಜ್ಜೆಯುರುಳಿಯು ಪೈಜನಿ
ಮೇಲು ಸ್ವರಗಳಿಂದಲಿ
ಕಾಳಿ ಮರ್ದನ ಕೃಷ್ಣನ ಸತಿಯು
ಕಾಲಗೆಜ್ಜೆ ಕುಣಿಸುತ ೧

ಉಟ್ಟ ಪೀತಾಂಬರವು ರತ್ನದ
ಪಟ್ಟೆ ನಡುವಿನೊಳ್ವೊಳೆಯುತ
ಗಟ್ಟಿ ಕಂಕಣ ವಂಕಿ ನಾಗಮುರಿಗಿ
ಸರಗಳ್ವೊಳೆಯುತ ೨

ಸರಿಗೆ ಸರವು ಕೊರಳ ಹಾರ
ನೆರಿಗೆ ಮೇಲೆ ವಲಿಯುತ
ಕೊರಳ ಉಂಗುರಡ್ಡಿಕೆಯು ಮುತ್ತಿನ
ಸರಗಳಿಂದ ಹೊಳೆಯುತ ೩

ಮುದ್ದು ಮುಖಕೆ ಒಪ್ಪುವಂಥ
ತಿದ್ದಿದ ಬುಲಾಕು ಮುಖರ
ಪದ್ಮನೇತ್ರೆ ಕರ್ಣಗಳಿಗೆ
ವಜ್ರದೋಲೆ ಬುಗುಡಿಯು ೪

ಮುಡಿದ ಮಲ್ಲಿಗೆ ಉದುರುತಿರಲು
ಮಡದಿಯರಿಗೆ ಕೊಡುತಲಿ
ಕಡಲಶಯನ ಕಮಲನಾಭ
ವಿಠ್ಠಲನೊಡನೆ ನಗುತಲಿ ೫

ಪೂಜೆಯ ಮಾಡಿದಳು
ರಾಜೀವ ನೇತ್ರೆಯ ಪ

ಮಂಗಳಾಂಗಿಯ ಪಾಂಡು–
ರಂಗನರ್ಧಾಂಗಿಯ
ಕಂಗಳಿಂದಲಿ ನೋಡಿ
ಶೃಂಗಾರ ರೂಪವ ೧

ಪದ್ಮದಳಾಕ್ಷಿಯ
ಪದ್ಮಪಾಣಿಯ ಪಾಡಿ
ಪದ್ಮ ಸಂಭವಳಿಗೆ
ಪದ್ಮ ಪುಷ್ಪಗಳಿಂದ ೨

ಅಂಬುಜಾಕ್ಷಿಯ ಪಾದ
ನಂಬಿ ಭಜಿಸುವರ

ಸಾಲಾಗಿ ನಿಂತರು ಸತಿಯರು ಮಧ್ಯ
ನಾರಿ ಸುಭದ್ರೆಯು ನಿಂತಿರಲು ೨

ನೋಡಿ ಸುಭದ್ರೆಯ ಮುನಿಗಳು ಹೀಗೆ
ಗಾಡದಿ ಮಂತ್ರವ ಪೇಳಿದರು ೩

ಶರಣಾಗತರ ಸಂರಕ್ಷಣೆ ಮಾಳ್ಪೆನೆಂದು
ಭರದಿ ಪೇಳ್ವ ಈ ಮಂತ್ರವನು ೪

ಏನಿದು ಮುನಿಗಳೆ ಈ ಮಂತ್ರ ಏಕೆ
ಸ್ನಾನ ಮಾಡುವ ಸಂಕಲ್ಪವು ಬೇಕು ೫

ಹೀಗಿರುವುದು ಹರಿ ಸಂಕಲ್ಪ ಬೇಗ
ಹೋಗಿ ಬರುವೆನವ್ವ ಪೇಳೆನಲು ೬

ಹಾಗೇ ಆಗಲಿ ಎಂದು ನುಡಿದಳು ಬೇಗ
ಆಗ ತಾಂಬೂಲ ದಕ್ಷಿಣೆ ಕೊಡಲು ೭

ಆಗಲಿಲ್ಲವ್ವ ನಿನ್ನಯ ಕಾರ್ಯ ಈಗ
ಹೋಗಿ ಬರುವೆನೆನ್ನಲು ಬೇಡ ೮

ಹೀಗೆಂದು ಸನ್ನೆ ಮಾಡಲು ಬೇಗ ಮರದಿಂದ
ನಾಗಶಯನನ ಸ್ಮರಿಸುತ ಬಂದ ೯

ಪಾದಗಳನೆ ಪಿಡಿದು ಬೇಡಿದ ಸುಭದ್ರೆಯ
ಪಾದ ಕಣ್ಣೀರಿನಿಂದಲೆ ತೊಳೆದ ೧೦

ರಕ್ಷಣೆ ಮಾಳ್ಪೆನೆಂದಭಯವ ಕೊಟ್ಟು
ರಕ್ಷಿಸಬೇಕು ಅನಾಥನ್ನ ೧೧

ಹೊದ್ದಿದ ಚಳತುಂಬುಗಳು
ಪದ್ಮಾಕ್ಷಿಯೆ ಕಿರುನಗೆ ನಗುತೀಗಲೆ ೫

ಪರಮಭಕ್ತರನೆಲ್ಲ ಕರೆದು ವರವನೀವ
ವರ ಅಭಯ ಹಸ್ತದ ಬೆರಳಿಗುಂಗುರವಿಟ್ಟು
ಸಿರದಿ ಕಿರೀಟವು ಹೊಳೆಯೆ
ಹೆರಳು ಬಂಗಾರ ರಾಕುಟಿಗೊಂಡ್ಯ ಹೊಳೆಯುತ ೬

ಕಮಲಸುಗಂಧಿಣಿ ಕಮಲದಳಾಕ್ಷಿಯೆ
ಕಮಲಜೋದ್ಭವನ ಪಿತನರಸಿಯೆ ನೀ
ಕಮಲನಾಭ ವಿಠ್ಠಲ ಪ್ರೀಯಳೆ ಹೃ–
ತ್ಕಮಲದಿ ಹರಿಪಾದ ಸ್ಮರಣೆಯ ಕೊಡುತಲಿ ೭

ಬಾರಮ್ಮ ಹಸೆಗೆ ಭಾಗ್ಯದ ಲಕ್ಷ್ಮಿ
ಬೇಡಿಕೊಂಬೆನು ದೇವಿಯೆ ಪ

ಸಾಗರಶಯನನ ರಾಣಿ ಬೇಗನೆ ಬಾರಮ್ಮ
ನಾಗಶಯನನ ರಾಣಿ ಬಾಗಿವಂದಿಸುವೆವು ಅ.ಪ

ಮಿಸುಣಿ ಮಾಣಿಕ್ಯಮಂಟಪ ಬಿಸುಜಾಕ್ಷಿಯರು
ಹಸನಾಗಿ ಶೃಂಗರಿಸುತ್ತ
ಕುಸುಮ ಗಂಧಿಯೆ ಬಂದು ಹಸನಾಗಿ ಕೂಡಮ್ಮ
ಶಶಿವದನೆಯೆ ಬಾರೆ ಹೊಸರತ್ನ ಪೀಠಕೆ ೧

ಘಲು ಘಲು ಗೆಜ್ಜೆನಾದದಿ ಅಡಿಗಳನಿಡುತ
ಚಲುವ ಶ್ರೀಹರಿಯ ಕೂಡುತ
ಘಳಿಲನೆ ಬಾರಮ್ಮ ಲಲನೆಯರ್ಕರೆವರು
ಚಲುವ ಶ್ರೀ ರಂಗನ ಮಡದಿ ಮಹಲಕ್ಷ್ಮಿಯೆ ೨

ಹರಿದ್ರ ಕುಂಕುಮ ಗಂಧಾಕ್ಷತೆಗಳಿಂದ ವರ ಮಹಾಲಕ್ಷ್ಮಿಯ ಪೂಜೆಗನುವಾಗಲು ಪುರದ ನಾರಿಯರು ಬಂದು ನೆರೆದರಾಗ ಪರಮ ಸಂಭ್ರಮದಿಂದ ಚಾರುಮತಿಯು ವರಮಹಾಲಕ್ಷ್ಮಿಯನು ಕರೆದಳಾಗ.

ಬಾರಮ್ಮ ಭಾರ್ಗವಿಯೆ ಭಕ್ತವತ್ಸಲೆ ಹರಿಪ್ರಿಯಳೆ ಪ

ಗೆಜ್ಜೆಯಪಾದ ಧ್ವನಿಗಳ ಮಾಡುತ
ಹೆಜ್ಜೆಯ ಮೇಲೆ ಹೆಜ್ಜೆಯ ನಿಡುತ
ಸಜ್ಜನರೆಸಗುವ ಸೇವೆ ಕೈಗೊಳ್ಳುತ
ಅರ್ಜುನ ಸಖನ ಪಟ್ಟದರಾಣಿ ಹರುಷದಲಿ ೧

ಪಟ್ಟೆ ಪೀತಾಂಬರವನುಟ್ಟು ವಜ್ರದ ಪಟ್ಟಿ
ಕಠ್ಠಾಣಿ ಸರಿಗೆ ಏಕಾವಳಿ ಹೊಳೆಯುತ
ಶ್ರೇಷ್ಠ ಮುತ್ತಿನ ಹಾರಗಳು
ಕೆತ್ತಿದ ಉಂಗುರಡ್ಡಿಕಿ ಥಳಥಳ ಹೊಳೆಯುತ್ತ ೨

ವಂಕಿತೋಳಿಗೆ ತಕ್ಕ ಕಂಕಣ ಬಳೆಗಳು
ಬಿಂಕದಿ ಕೊಡುವ ವರಗಳ ಹಸ್ತಂಗಳು
ವೆಂಕಟರಮಣನ ಸತಿಯೆ
ಪಂಕಜಾಕ್ಷನ ಒಡಗೂಡುತ ನಲಿಯುತ ೩

ಕೋಟಿ ಸೂರ್ಯರ ಕಾಂತಿ ತೋರುವ ನಗೆ ಮುಖ
ಲಲಾಟದಿ ಕೇಸರಿ ಕುಂಕುಮ ಹೊಳೆಯುತ
ಸಾಟಿಯಾರು ಮೂರ್ಜಗದಿ
ಕೋಟಿ ಮನ್ಮಥರ ಸೋಲಿಪ ದೇವನರಸಿಯೆ ೪

ಮುದ್ದು ಮುಖಕೆ ತಕ್ಕ ಮುಖುರ ಬುಲಾಕನಿಟ್ಟು
ತಿದ್ದಿದೋಲೆ ಚಳತುಂಬು ಬಾವಲಿಗಳು

ರಕ್ಷಿಸುವೆನು ಪೇಳು ಮನದಿಷ್ಟ ನಿನಗೆ
ಕಷ್ಟವದ್ಯಾವದು ನುಡಿಬೇಗ ೧೨
ಅಂದ ಮಾತನು ಕೇಳಿ ನುಡಿದನು ಶ್ರೀ
ತಂದೆ ಕಮಲನಾಭ ವಿಠ್ಠಲನ ಸ್ಮರಿಸಿದನು ೧೩

## ವಚನ

ವೈರಿ ಬೆನ್ನಟ್ಟಿ ಬರುತಿರುವನವ್ವ ಕೇಳು
ಭಾನು ಅಸ್ತಕೆ ಎನ್ನ ಸಿರವ ತರಿವೆನು ಎಂದು
ಕೇಳಿ ಗಾಬರಿಗೊಂಡು ನಿನ್ನ ಮೊರೆ ಬಿದ್ದಿಹೆನು
ಆಡಿದ ಮಾತು ತಪ್ಪುವಳಲ್ಲವೆಂದೆನುತ
ಮಾಡಿದೆ ಮನ ನಿಶ್ಚಯಿಸಿ ಬೇಡ ಬಂದಿರುವೆನು
ನೋಡು ನಿನ್ನ ಪತಿ ಪಾದದಾಣೆ ಮಾಡುತ ಪೇಳು
ಮಾಡಿ ಧೈರ್ಯವು ಮನಕೆ ಮಾಡಿಸಿ ಕಾರ್ಯವನು
ಶರಣು ಹೊಕ್ಕವರನ್ನು ರಕ್ಷಿಪುದು ನಿಮ್ಮ ಕಾರ್ಯ
ಬಂದಿರಲು ಪೂರ್ಣ ನಂಬಿಕೆಯಿಂದ ಬಂದಿರುವೆ
ನೀಡು ಭಾಷೆಯನೆಂದು ಕೇಳುತಿರೆ ಗಂಧರ್ವ
ನೋಡಿ ಧೈರ್ಯವ ಮಾಡಿ ನುಡಿದಳೀ ಪರಿ ತಾನು
ಕೇಳು ಫಲ್ಗುಣನ ಪಾದದಾಣೆಗು ನಿನ್ನನು
ರಕ್ಷಿಸುವ ಭಾರ ನನಗಿರಲೆಂದು ನುಡಿಯುತಿರೆ
ತಟ್ಟನೇ ನಾರದರು ನುಡಿದರಾ ಸುಭದ್ರೆಯೊಡನೆ

ಯಾರು ವೈರಿಯು ಎಂದು ನಾರಿ ನೀ ತಿಳಿದಿರುವಿ
ದ್ವಾರಕಾಪುರದ ಅರಸನಾಳ್ವ ೧

ಉಗ್ರಶಯನರಾಯ ಆಗ್ರಹ ಮಾಡಲಾರ
ನಿಗ್ರಹಿಸುವುದೆಂತು ವೈರಿಯನು ೨

ದ್ವಾರಕಾ ವಾಸನೆಂದಾತನಲ್ಲವೆ ತಾಯಿ
ಬೇರೆ ಅರಸನಿರುವ ತಿಳಿದು ನೋಡು ೩

ಬೇರೆ ಅರರನ್ಯಾರು ವಸುದೇವನಿರುವನು
ಬಾರನು ಆತ ವೈರಿ ರಕ್ಷಣೆಗೆ ೪

ಹಾಗಲ್ಲ ಕೇಳು ತಾಯಿ ಭಾಗವತರ ಪ್ರಿಯ
ಸಾಗರದೊಳು ಒಗತನ ಆತಗೆ ೫

ಬಲಭದ್ರನಾದರೆ ಸುಲಭದಿಂ ಕದನಕ್ಕೆ
ಬರಲಾರನೆಂದು ನಂಬಿ ಇರುವೆನೀಗ ೬

ಭಕ್ತವತ್ಸಲನೆಂಬ ಬಿರುದು ಪೊತ್ತಿಹನವ್ವ
ಮುಕ್ತರಿಗಾಶ್ರಯ ಕೊಡುವನವ್ವ ೭

ಹತ್ತಾರು ಸಾವಿರ ಮಿತ್ರೆಯರರಸನ
ಪಟ್ಟಣಕಧಿಕಾರಿ ಪುಣ್ಯಾತ್ಮನು ೮

ಒಗಟಿನಂತಿದೆ ನಿಮ್ಮ ಹಗರಣ ಮಾತು
ನಗುವರು ನಿಮ್ಮ ಮಾತನು ನೆನೆದು ನೆನೆದು ೯

ಚಕ್ರಧರನು ಪಟ್ಟದರಸೆಂದು ತಿಳಿಯದೆ
ಕಕ್ಕುಬಿಕ್ಕಾಗಿ ನುಡಿಯುವೆ ಏತಕೆ ೧೦

ಚಕ್ರಧರನೆ ಶ್ರೀಕೃಷ್ಣನೆನ್ನುತ ತಿಳಿದು
ಎಚ್ಚರಿಲ್ಲದೆ ನೆಲಕೆ ಬಿದ್ದಳಾಗ ೧೧

ನೋಡಿ ಗಾಬರಿಗೊಂಡು ನಾರಿಯರೆಚ್ಚರಿಸೆ
ಬಾಡಿದ ಮುಖವನೆ ನೋಡಿದರು ೧೨

ಕೇಳವ್ವ ಸುಭದ್ರಿ ಬಹಳ ಬಳಲಬೇಡ
ಹೇಳು ನಿನ್ನರಸಗೆ ಪಾಲಿಸಿವನ ೧೩

ನಾರಿಯರು ಶ್ರೀಹರಿಯ ಧ್ಯಾನಿಸಿ
ಸಾರ ನುಡಿಗಳ ನುಡಿದರು ೯

ಸತ್ಯ ಮೂರುತಿ ಸತಿಯು ಬಂದಳು
ಸಾರ್ಥಕವಾಯಿತು ಜನುಮವು
ಪ್ರೀತಿಯಿಂದಲಿ ಪೂಜಿಸೀಕೆಯ
ನೀತಿಗಳ ತಿಳಿ ಹೇಳಲು ೧೦

ಶ್ರಾವಣ ಮಾಸದಲಿ ಪೌರ್ಣಮಿ
ಭಾರ್ಗವ ವಾಸರದಲಿ
ಚಾರುಮತಿ ನೀ ಪೂಜಿಸೆನ್ನುತ
ನಾರೇರೆಲ್ಲರು ನುಡಿದರು ೧೧

ಒಡನೆ ಮುತ್ತೈದೆಯರಿಗೆಲ್ಲ
ಬಿಡದೆ ಬಾಗಿನ ಕೊಡುತಲಿ
ಕಡಲೊಡೆಯ ಕಮಲನಾಭ ವಿಠ್ಠಲನ
ಬಿಡದೆ ಧ್ಯಾನಿಸಿ ನಮಿಸುತ ೧೨

## ಗದ್ಯ

ಈ ರೀತಿ ಚಾರುಮತಿ ದಾರಿ ನೋಡುತಲಿರಲು ಶ್ರಾವಣ ಮಾಸ ಬರುತಿರಲು ಆಗ ಬಹಳ ಸಂಭ್ರಮದಿಂದ ಶ್ರೀ ದೇವಿ ಪೂಜೆಗೆ ಬೇಗ ಬೇಗನೆ ಕಾರ್ಯಗಳನು ಮಾಡಿ ಮನೆಯ ಸಾರಿಸಿ ಸುಣ್ಣ ಕಾರಣೆಯು ಸಾರಣೆಯು ಬಹಳ ಪರಿ ಚಿತ್ರಗಳ ಬರೆದು ನಲಿದು ತಳಿರು ತೋರಣ ಕಟ್ಟಿ ವಿಧ ವಿಧದ ಫಲಗಳನು ತರಿಸಿ ಬಹು ವಿಧದ ಪುಷ್ಪಗಳಿಂದಲಂಕರಿಸಿ ಮನೆಯ ಮಧ್ಯದಿ ತೋರ ಮಂಟಪವನಿರಿಸುತ ಕದಳಿ ಕಂಬವು ತೋರಣವನೆ ಕಟ್ಟಿ ಮಂಟಪದ ಮಧ್ಯದಲಿ ತಂಡುಲವ ಹಾಸುತ್ತ ಕಲಶದಲಿ ಪಂಚಪಲ್ಲವಗಳ್ಹಾಕಿ ಎರೆದು ಪೀತಾಂಬರವನುಡುತ ಚಾರುಮತಿಯು ವರವಿಪ್ರರನು ಕರಸಿ ಹರುಷದಿಂದ ಪರಿಪರಿಯ ಪುಷ್ಪಗಳು ಧೂಪ ದೀಪಗಳಿಂದ

ಅಣ್ಣನೊಡನೆ ಕಲಹವನ್ನು ಮಾಡುವುದೆಂತು
ಬಿನ್ನಾಣ ಮಾತನಾಡುವದೇತಕೆ ೧೪

ಕೃಷ್ಣ ಕೃಷ್ಣ ಕೃಷ್ಣ ಕಮಲನಾಭ ವಿಠ್ಠಲ
ಕೃಷ್ಣ ರಕ್ಷಿಸು ರಕ್ಷಿಸು ರಕ್ಷಿಸೆನ್ನುತಲಿ ೧೫

## ವಚನ

ಹೀಗೆ ಮೊರೆಯಿಡುತಿರುವ ನಾರಿಭದ್ರೆಯ ನೋಡಿ
ತಾಳವ್ವ ಧೈರ್ಯವನು ಹೆದರದಿರು ಮನದೊಳಗೆ
ನೀನೀಗ ಅರಮನೆಗೆ ಪೋಗಿ ಮೌನವ ಧರಿಸಿ
ಯಾರು ಬಂದರು ಮಾತನಾಡದಲೆ ಸುಮ್ಮನಿರು
ಆಗ ಫಲ್ಗುಣ ಬಂದು ಕೇಳುವನು ಕಾರಣವ
ಭಾಷೆ ಕೊಟ್ಟರೆ ಪೇಳ್ವೆನೆಂದ ನಿನ್ನ ನುಡಿ ಕೇಳಿ
ಭಾಷೆ ಕೊಡುವನು ಆಗ ತೋರು ಗಂಧರ್ವನನು
ಆಗಲೀ ಕಾರ್ಯ ಸರಿಯಾಗುವದು ಎಂದೆನಲು
ಬೇಗ ಗಂಧರ್ವನನು ಕರಕೊಂಡು ಬರೆ ಮನೆಗೆ
ಗಂಧರ್ವನನು ಒಂದು ಗುಪಿತ ಗೃಹದಲ್ಲಿರಿಸಿ
ತಾನು ಧರಿಸಿದ ವಸ್ತ್ರ ಆಭರಣಗಳನೆಲ್ಲ
ಬಿಸಾಡಿ ಮನಬಂದ ಕಡೆಗೆ ಒಂದೊಂದನು
ಹಾಸು ಮಂಚದಿ ಮುಸುಗ ಹಾಕಿ ಮಲಗಿರಲಾಗ
ಪಾರ್ಥ ಹುಡುಕುತ ಬಂದು ಕಂಡನಾ ಭದ್ರೆಯನು
ಯಾಕೆ ಮಲಗಿರುವಿ ಎಂದೆಬ್ಬಿಸಿ ಮಾತಾಡಿಸಲು
ಭಾಷೆ ಕೊಟ್ಟರೆ ಪೇಳ್ವೆನೆನುತ ನುಡಿಯಲು ಕೇಳಿ
ಏನು ಬಂತಿದು ಎಂದು ಯೋಚಿಸುತ ಮನದಲ್ಲಿ
ಕೊಡುವೆ ಭಾಷೆಯನು ನೀ ಕೇಳು ತಡ ಮಾಡದಲೆ
ಎಂದೆನುತ ಸತಿಗೆ ಧೈರ್ಯವನು ಪೇಳಲು ಎದ್ದು
ಪಾದಕ್ಕೆರಗುತಲಾಗ ಗಂಧರ್ವನನು ತೋರಿ
ಆ ದಿನದ ಅಸ್ತಮಾನದೊಳಿವನ ಸಿರವನು ಉಳಿಸಿ
ಕಾಪಾಡಬೇಕೆಂದು ಪೇಳುತಿರೆ ಸುಭದ್ರ

ಸತ್ಯಶೀಲೆಯು ಮನದಿ ಹರುಷಿಸೆ
ಸುತ್ತಮುತ್ತಲು ನೋಡುತ ೩

ಮತ್ತದಾರನು ಕಾಣದಿರಲು
ಸ್ವಪ್ನವೆನುತಲಿ ತಿಳಿಯುತ
ಮತ್ತೆಗಂಡಗೆ ಪೇಳಲಾಗದು ಪುರು
ಷೋತ್ತಮನ ಸತಿ ಮಹಿಮೆಯು ೪

ಮೆತ್ತನೆದ್ದಳು ಪತಿಗೆ ವಂದಿಸಿ
ಚಿತ್ತ ಸಂಭ್ರಮದಿಂದಲಿ
ಮತ್ತೆ ಮಜ್ಜನ ಗೈದು ಮಡಿಗಳ-
ನುಟ್ಟು ಹರಿಯನು ನೆನೆಯುತ ೫

ನಿತ್ಯ ಕರ್ಮವು ಮುಗಿದ ಕ್ಷಣದಲಿ
ಮತ್ತೆ ತುಳಸಿಯ ಪೂಜಿಸಿ
ಸತ್ಯವಂತೆಯು ವೃದ್ಧ
ಮುತ್ತೈದೆಯರ ಕರದಳು ಹರುಷದಿ ೬

ಬಂದ ಮುತ್ತೈದೆಯರಿಗೆಲ್ಲ
ಚಂದ ಪೀಠದಿ ಕೂಡಿಸಿ
ಅಂದಿನ ಸ್ವಪ್ನವನು ಪೇಳಲು
ಚಂದದಿ ವಂದಿಸಿದಳು ೭

ಮೂರು ಝಾಮವು ಮುಗಿದನಂತರ
ನಾರಿಮಣಿ ತಾ ಬಂದಳು
ಚಾರು ಪೀಠದಿ ಕುಳ್ಳಿರಿಸಿ ಪೂಜಿಸಿ
ಆರುತೆತ್ತುವ ಸಮಯಕೆ ೮

ಬೇಗನೆಚ್ಚರಗೊಂಡೆನಿದರರ್ಥವ
ಬೇಗ ಪೇಳಬೇಕೆನುತಿರೆ

ರಕ್ಕಸಾಂತಕನಿವನ ವೈರಿ ಎನ್ನುತ ಪೇಳೆ
ಪಾರ್ಥ ಕೇಳುತ ತನ್ನ ಪತ್ನಿಗೆಂದನು ಹೀಗೆ
ಕೇಳು ಸುಭದ್ರ ಕೊಟ್ಟ ಮಾತು ತಪ್ಪಿದರೀಗ
ಮಾಡುವೆನು ಅಗ್ನಿಪ್ರವೇಶವೆನ್ನುತ ತಿಳಿ
ಹೀಗೆಂದು ಶಪಥವನು ಮಾಡಿ ಪಾರ್ಥನು ನುಡಿದು
ಆಗ ಮುಂದಿನ ಕಾರ್ಯ ಹೇಗೆನುತ ಯೋಚಿಸುತಿದ್ದನು

ಬಂದ ಗಂಧರ್ವನನು ಕಳುಹುತ
ಚಂದದಿಂದಲಿ ನಾರದರು ತ್ವರ-
ದಿಂದ ದ್ವಾರಕಾಪುರವ ಪೊಕ್ಕರು
ಅಂದು ಶೀಘ್ರದಲಿ ೧

ಸಿಂಧು ಶಯನನೊಳ್ ತವಕದಲಿ
ಮಂದರೋದ್ಧರನನ್ನು ಪೊಗಳುತ
ಬಂದು ನಿಂತರು ಹರಿಯ ಮೂರ್ತಿಯ
ಕಂಡು ವಂದಿಸಲು ೨

ಶೇಷಶಯನದಿ ಹರಿಯು ಮಲಗಿರೆ
ಶ್ರೀ ಸತಿ ಭೂಸತಿಯರ್ಹರುಷದಿ
ಶ್ರೀಶನಂಘ್ರಿಗಳೊತ್ತುತಿರುವ
ವೈಭವವ ನೋಡಿದರು ೩

ದೇವದೇವನೆ ನಿನ್ನ ಮಹಿಮೆಯ
ದೇವಿ ಅರಿಯದೆ ತಪ ಚರಿಪಳೆನೆ
ಜೀವ ಮೊದಲಾದವರರಿವರೆ
ಪಾಮರರಿಗೊಶವೆ ೪

ಪುಂಡರೀಕದಳಾಯತಾಕ್ಷನೆ
ಗಂಡುಗಲಿ ಪಾರ್ಥನಿಗೆ ಮಿತ್ರನೆ
ಪಾಂಡವರ ನೆರೆ ಬಿಡದೆ ಪೊರೆಯುವನೆ
ವಂದಿಸುವೆನೆನುತ ೫

ಪರಮ ಭಕ್ತಿಯೊಳಗಿರುತಿರಲೊಂದಿನ
ವರಮಹಲಕ್ಷ್ಮಿಯು ಕರುಣದಲಿ
ಸಿರಿವರ ಕಮಲನಾಭ ವಿಠ್ಠಲ ಸಹ
ಕರುಣದಿ ಪಾಲಿಸೆವರಗಳನು ೭

## ಕಂದ

ಇರುತಿರಲೊಂದಿನ ಈ ಪರಿ
ಪರಮ ಪತಿವ್ರತೆಗೆ ಶುಭಶಕನಗಳಾಗೆ
ಸರಸಿಜಾಕ್ಷ ಹರಿಗೊಂದಿಸಿ
ಸರ್ವವು ಹರಿ ಪ್ರೀತಿಯಾಗಲೆಂದೆನುತ ೧

ಸ್ವಪ್ನ ಕಂಡಳು ಚಾರುಮತಿಯ
ಅಪ್ರಮೇಯನ ದಯದಲಿ ಪ

ಸರ್ಪಶಯನನು ಸ್ವಪ್ರಕಾಶನು
ಸತ್ಯಮೂರುತಿ ಒಲಿಯಲು ಅ.ಪ

ಮೂರು ಝಾಮವು ಮುಗಿದ ಕ್ಷಣದೊಳು
ಬಾಲೆ ಸ್ವಪ್ನವ ಕಂಡಳು
ಲೋಲೆ ಕರದಲಿ ಕಮಲತಿರುವುತ
ಬಾಗಿಲೊಳಗೆ ಬರುತಿರೆ ೧

ಚಾರುಮತಿ ತಟ್ಟನೆ ಕರಪಿಡಿದು
ತೋರ ಪೀಠದಿ ಕೂಡಿಸಿ
ಸಾರಸಾಕ್ಷಿಗೆ ಗಂಧ ಪುಷ್ಪದಿ
ನೀರೆ ಪೂಜೆಯ ಮಾಡಲು ೨

ಮುತ್ತಿನಾರತಿ ಎತ್ತೋಕಾಲಕೆ
ಮತ್ತೆ ಎಚ್ಚರವಾಯಿತು

ಜಂಬು ನೇರಳೆ ಲಿಂಬೆ ಕಿತ್ತಳೆ ದಾ–
ಳಿಂಬ ದ್ರಾಕ್ಷಿಯು
ಅಂಬುಜಾಕ್ಷಿಗೆ ತೆಂಗಿನ ಫಲ
ಬಾಳೆ ಮಾವಿನ ಫಲಗಳು ೧

ಹೆರದ ಕೊಬ್ಬರಿ ಬಟ್ಟಲೊ–
ಳ್ಹುರಿಗಡಲೆ ತುಂಬುತ
ಅರಿಶಿನ ಬೇರಡಿಕೆ ಅಕ್ಕಿ
ಬೆರಸಿ ಬೇಗನೆ ಹರುಷದಿ ೨

ಜರದ ಪೀತಾಂಬರವು ಲಕ್ಷ್ಮಿಗೆ
ಸರಿಗೆ ಅಂಚಿನ ಕುಪ್ಪುಸವು
ಸಿರಿಯ ರಮಣ ಕಮಲನಾಭ
ವಿಠ್ಠಲನರಸಿಗೀಗಲೆ ೩

ಆರುತಿ ಎತ್ತುತ ಚಾರುಮತಿಯು ತಾನು
ವಾರಿಗೆಯರ ಕೂಡಿ
ಚಾರು ವೈಭವದಿಂದ ಪ

ನೀರೊಳಾಡಿ ಮಂದರಗಿರಿ ಧರಿಸಿದ
ವರಹನಾದ ನಾರಸಿಂಹ ವಾಮನ ರಾಣಿಗೆ ೧

ಕೊಡಲಿ ಪಿಡಿದು ತನ್ನ ಮಡದಿಯನರಸಿದ
ಉಡುವ ಸೀರೆಯ ಕದ್ದ
ತುಡುಗ ಕೃಷ್ಣನ ರಾಣಿಗಾರುತಿ ೨

ಕಪಟದಿಂದಲಿ ತ್ರಿಪುರಾಂಗನೆಯರ ಕೂಡಿ
ಚಪಲ ಚಿತ್ತದಿ ತೇಜಿಯನೇರಿದನರಸಿಗೆ ೩

ಸಂಭ್ರಮದಿಂದವರ
ಭಂಗ ಹರಿಪಳಿಗೆ ೩

ಭಕ್ತಿ ಭಾವಗಳಿಂದ
ಪುಷ್ಪಗಂಧಗಳಿಂದ
ಭಕ್ತ ವತ್ಸಲನರಸಿ
ರಕ್ಷಿಸು ರಕ್ಷಿಸೆಂದು ೪

ಕನಕಾಭರಣಗಳಿಂದ
ಹರಿರಾಣಿಗಲಂಕರಿಸಿ
ಸನಕಾದಿ ವಂದ್ಯನ
ಸತಿ ಮಹಲಕ್ಷ್ಮಿಗೆ ೫

ಅರಿಶಿನ ಕುಂಕುಮ
ಅರಸಿ ಮಹಲಕ್ಷ್ಮಿಗೆ
ವರಪುಷ್ಪ ತಾಂಬೂಲ-
ಗಳನರ್ಪಿಸುತ ಬೇಗ ೬

ಕಮಲನಾಭ ವಿಠ್ಠಲ-
ನ ರಾಣಿ ಲಕ್ಷ್ಮಿಗೆ
ಕಮಲ ಸಂಭವಳಿಗೆ
ಉಡಿಯ ತುಂಬುತ ಬೇಗ ೭

ಉಡಿಯ ತುಂಬುವೆ ಕಡಲೊಡೆಯನ
ಮಡದಿಗ್ವರುಷದಿ ಪ

ಬಿಡಿಯ ಮುತ್ತುಗಳ ಬಿಗದ ತಟ್ಟೆಯ
ಪಿಡಿಯುತೀಗಲೆ ಅ.ಪ

ಕಡಗಕಂಕಣ ಹೊಳೆಯುತ ನಡುವಿನೊಡ್ಯಾಣ
ಸಡಗರದಿಂದ ಮೆರೆಯುತ
ಬಿಡಿ ಮುತ್ತು ಬಿಗದಿಹ ಪದಕಗಳೊಪ್ಪುತ
ಬಡ ನಡುವಿನ ಬಾಲೆ ಪೊಡವಿಗೊಡೆಯನ ಕೂಡಿ ೩
ಕ್ಷೀರಸಾಗರ ಕನ್ನಿಕೆ ವಾರಿಜೋದ್ಭವನ
ಮಾರನಯ್ಯನ ಪ್ರಿಯಳೆ
ಸಾರಸಾಕ್ಷಿಯೆ ನಿನ್ನ ಬಾರಿಬಾರಿಗೆ ಸ್ತುತಿಸಿ
ಚಾರುಗಾಯನದಿಂದ ಬಾರೆಂದು ಕರೆವರು ೪

ನಿಗಮವೇದ್ಯಳೆ ನಿನ್ನನು ಬಗೆಬಗೆಯಿಂದ
ಪೊಗಳಿ ಪಾಡುತಲಿಪ್ಪರೆ
ಖಗವಾಹನನ ರಾಣಿ ಮಿಗೆ ಹರುಷದಿಂದಲಿ
ನಗುತ ನೀ ಬಾರೆ ಕಮಲನಾಭವಿಠ್ಠಲನ ರಾಣಿ ೫

ಬಂದಳಮ್ಮ ಲಕ್ಷ್ಮಿದೇವಿ
ಇಂದು ನಮ್ಮ ಮನೆಯಲಿ ಪ

ಇಂದಿರೇಶನೊಡನೆ ಕೂಡಿ
ಚಂದದಿಂದ ನಲಿಯುತ ಅ.ಪ

ಕಾಲಗೆಜ್ಜೆಯುರುಳಿಯು ಪೈಜನಿ
ಮೇಲು ಸ್ವರಗಳಿಂದಲಿ
ಕಾಳಿ ಮರ್ದನ ಕೃಷ್ಣನ ಸತಿಯು
ಕಾಲಗೆಜ್ಜೆ ಕುಣಿಸುತ ೧

ಉಟ್ಟ ಪೀತಾಂಬರವು ರತ್ನದ
ಪಟ್ಟೆ ನಡುವಿನೊಳ್ವೊಳೆಯುತ
ಗಟ್ಟಿ ಕಂಕಣ ವಂಕಿ ನಾಗಮುರಿಗಿ
ಸರಗಳ್ವೊಳೆಯುತ ೨

ಸರಿಗೆ ಸರವು ಕೊರಳ ಹಾರ
ನೆರಿಗೆ ಮೇಲೆ ವಲಿಯುತ
ಕೊರಳ ಉಂಗುರಡ್ಡಿಕೆಯು ಮುತ್ತಿನ
ಸರಗಳಿಂದ ಹೊಳೆಯುತ ೩

ಮುದ್ದು ಮುಖಕೆ ಒಪ್ಪುವಂಥ
ತಿದ್ದಿದ ಬುಲಾಕು ಮುಖರ
ಪದ್ಮನೇತ್ರೆ ಕರ್ಣಗಳಿಗೆ
ವಜ್ರದೋಲೆ ಬುಗುಡಿಯು ೪

ಮುಡಿದ ಮಲ್ಲಿಗೆ ಉದುರುತಿರಲು
ಮಡದಿಯರಿಗೆ ಕೊಡುತಲಿ
ಕಡಲಶಯನ ಕಮಲನಾಭ
ವಿಠ್ಠಲನೊಡನೆ ನಗುತಲಿ ೫

ಪೂಜೆಯ ಮಾಡಿದಳು
ರಾಜೀವ ನೇತ್ರೆಯ ಪ

ಮಂಗಳಾಂಗಿಯ ಪಾಂಡು–
ರಂಗನರ್ಧಾಂಗಿಯ
ಕಂಗಳಿಂದಲಿ ನೋಡಿ
ಶೃಂಗಾರ ರೂಪವ ೧

ಪದ್ಮದಳಾಕ್ಷಿಯ
ಪದ್ಮಪಾಣಿಯ ಪಾಡಿ
ಪದ್ಮ ಸಂಭವಳಿಗೆ
ಪದ್ಮ ಪುಷ್ಪಗಳಿಂದ ೨

ಅಂಬುಜಾಕ್ಷಿಯ ಪಾದ
ನಂಬಿ ಭಜಿಸುವರ

ಹೊದ್ದಿದ ಚಳತುಂಬುಗಳು
ಪದ್ಮಾಕ್ಷಿಯೆ ಕಿರುನಗೆ ನಗುತೀಗಲೆ ೫

ಪರಮಭಕ್ತರನೆಲ್ಲ ಕರೆದು ವರವನೀವ
ವರ ಅಭಯ ಹಸ್ತದ ಬೆರಳಿಗುಂಗುರವಿಟ್ಟು
ಸಿರದಿ ಕಿರೀಟವು ಹೊಳೆಯೆ
ಹೆರಳು ಬಂಗಾರ ರಾಕುಟಿಗೊಂಡ್ಯ ಹೊಳೆಯುತ ೬

ಕಮಲಸುಗಂಧಿಣಿ ಕಮಲದಳಾಕ್ಷಿಯೆ
ಕಮಲಜೋದ್ಭವನ ಪಿತನರಸಿಯೆ ನೀ
ಕಮಲನಾಭ ವಿಠ್ಠಲ ಪ್ರೀಯಳೆ ಹೃ-
ತ್ಕಮಲದಿ ಹರಿಪಾದ ಸ್ಮರಣೆಯ ಕೊಡುತಲಿ ೭

ಬಾರಮ್ಮ ಹಸೆಗೆ ಭಾಗ್ಯದ ಲಕ್ಷ್ಮಿ
ಬೇಡಿಕೊಂಬೆನು ದೇವಿಯೆ ಪ

ಸಾಗರಶಯನನ ರಾಣಿ ಬೇಗನೆ ಬಾರಮ್ಮ
ನಾಗಶಯನನ ರಾಣಿ ಬಾಗಿವಂದಿಸುವೆವು ಅ.ಪ

ಮಿಸುಣಿ ಮಾಣಿಕ್ಯಮಂಟಪ ಬಿಸುಜಾಕ್ಷಿಯರು
ಹಸನಾಗಿ ಶೃಂಗರಿಸುತ್ತ
ಕುಸುಮ ಗಂಧಿಯೆ ಬಂದು ಹಸನಾಗಿ ಕೂಡಮ್ಮ
ಶಶಿವದನೆಯೆ ಬಾರೆ ಹೊಸರತ್ನ ಪೀಠಕೆ ೧

ಘಲು ಘಲು ಗೆಜ್ಜೆನಾದದಿ ಅಡಿಗಳನಿಡುತ
ಚಲುವ ಶ್ರೀಹರಿಯ ಕೂಡುತ
ಘಳಿಲನೆ ಬಾರಮ್ಮ ಲಲನೆಯರ್ಕರೆವರು
ಚಲುವ ಶ್ರೀ ರಂಗನ ಮಡದಿ ಮಹಲಕ್ಷ್ಮಿಯೆ ೨



ಸಾಲಾಗಿ ನಿಂತರು ಸತಿಯರು ಮಧ್ಯ
ನಾರಿ ಸುಭದ್ರೆಯು ನಿಂತಿರಲು ೨

ನೋಡಿ ಸುಭದ್ರೆಯ ಮುನಿಗಳು ಹೀಗೆ
ಗಾಡದಿ ಮಂತ್ರವ ಪೇಳಿದರು ೩

ಶರಣಾಗತರ ಸಂರಕ್ಷಣೆ ಮಾಳ್ಪೆನೆಂದು
ಭರದಿ ಪೇಳ್ವ ಈ ಮಂತ್ರವನು ೪

ಏನಿದು ಮುನಿಗಳೆ ಈ ಮಂತ್ರ ಏಕೆ
ಸ್ನಾನ ಮಾಡುವ ಸಂಕಲ್ಪವು ಬೇಕು ೫

ಹೀಗಿರುವುದು ಹರಿ ಸಂಕಲ್ಪ ಬೇಗ
ಹೋಗಿ ಬರುವೆನವ್ವ ಪೇಳೆನಲು ೬

ಹಾಗೇ ಆಗಲಿ ಎಂದು ನುಡಿದಳು ಬೇಗ
ಆಗ ತಾಂಬೂಲ ದಕ್ಷಿಣೆ ಕೊಡಲು ೭

ಆಗಲಿಲ್ಲವ್ವ ನಿನ್ನಯ ಕಾರ್ಯ ಈಗ
ಹೋಗಿ ಬರುವೆನೆನ್ನಲು ಬೇಡ ೮

ಹೀಗೆಂದು ಸನ್ನೆ ಮಾಡಲು ಬೇಗ ಮರದಿಂದ
ನಾಗಶಯನನ ಸ್ಮರಿಸುತ ಬಂದ ೯

ಪಾದಗಳನೆ ಪಿಡಿದು ಬೇಡಿದ ಸುಭದ್ರೆಯ
ಪಾದ ಕಣ್ಣೀರಿನಿಂದಲೆ ತೊಳೆದ ೧೦

ರಕ್ಷಣೆ ಮಾಳ್ಪೆನೆಂದಭಯವ ಕೊಟ್ಟು
ರಕ್ಷಿಸಬೇಕು ಅನಾಥನ್ನ ೧೧

ರಕ್ಷಿಸುವೆನು ಪೇಳು ಮನದಿಷ್ಟ ನಿನಗೆ
ಕಷ್ಟವದ್ಯಾವದು ನುಡಿಬೇಗ ೧೨
ಅಂದ ಮಾತನು ಕೇಳಿ ನುಡಿದನು ಶ್ರೀ
ತಂದೆ ಕಮಲನಾಭ ವಿಠ್ಠಲನ ಸ್ಮರಿಸಿದನು ೧೩

**ವಚನ**

ವೈರಿ ಬೆನ್ನಟ್ಟಿ ಬರುತಿರುವನವ್ವ ಕೇಳು
ಭಾನು ಅಸ್ತಕೆ ಎನ್ನ ಸಿರವ ತರಿವೆನು ಎಂದು
ಕೇಳಿ ಗಾಬರಿಗೊಂಡು ನಿನ್ನ ಮೊರೆ ಬಿದ್ದಿಹೆನು
ಆಡಿದ ಮಾತು ತಪ್ಪುವಳಲ್ಲವೆಂದೆನುತ
ಮಾಡಿದೆ ಮನ ನಿಶ್ಚಯಿಸಿ ಬೇಡ ಬಂದಿರುವೆನು
ನೋಡು ನಿನ್ನ ಪತಿ ಪಾದದಾಣೆ ಮಾಡುತ ಪೇಳು
ಮಾಡಿ ಧೈರ್ಯವು ಮನಕೆ ಮಾಡಿಸಿ ಕಾರ್ಯವನು
ಶರಣು ಹೊಕ್ಕವರನ್ನು ರಕ್ಷಿಪುದು ನಿಮ್ಮ ಕಾರ್ಯ
ಬಂದಿರಲು ಪೂರ್ಣ ನಂಬಿಕೆಯಿಂದ ಬಂದಿರುವೆ
ನೀಡು ಭಾಷೆಯನೆಂದು ಕೇಳುತಿರೆ ಗಂಧರ್ವ
ನೋಡಿ ಧೈರ್ಯವ ಮಾಡಿ ನುಡಿದಳೀ ಪರಿ ತಾನು
ಕೇಳು ಫಲ್ಗುಣನ ಪಾದದಾಣೆಗು ನಿನ್ನನು
ರಕ್ಷಿಸುವ ಭಾರ ನನಗಿರಲೆಂದು ನುಡಿಯುತಿರೆ
ತಟ್ಟನೇ ನಾರದರು ನುಡಿದರಾ ಸುಭದ್ರೆಯೊಡನೆ

ಯಾರು ವೈರಿಯು ಎಂದು ನಾರಿ ನೀ ತಿಳಿದಿರುವಿ
ದ್ವಾರಕಾಪುರದ ಅರಸನಾಳ್ವ ೧

ಉಗ್ರಶಯನರಾಯ ಆಗ್ರಹ ಮಾಡಲಾರ
ನಿಗ್ರಹಿಸುವುದೆಂತು ವೈರಿಯನು ೨

ದ್ವಾರಕಾ ವಾಸನೆಂದಾತನಲ್ಲವೆ ತಾಯಿ
ಬೇರೆ ಅರಸನಿರುವ ತಿಳಿದು ನೋಡು ೩



ಹರಿದ್ರ ಕುಂಕುಮ ಗಂಧಾಕ್ಷತೆಗಳಿಂದ ವರ ಮಹಾಲಕ್ಷ್ಮಿಯ ಪೂಜೆಗನುವಾಗಲು ಪುರದ ನಾರಿಯರು ಬಂದು ನೆರೆದರಾಗ ಪರಮ ಸಂಭ್ರಮದಿಂದ ಚಾರುಮತಿಯು ವರಮಹಾಲಕ್ಷ್ಮಿಯನು ಕರೆದಳಾಗ.

ಬಾರಮ್ಮ ಭಾರ್ಗವಿಯೆ ಭಕ್ತವತ್ಸಲೆ ಹರಿಪ್ರಿಯಳೆ ಪ

ಗೆಜ್ಜೆಯಪಾದ ಧ್ವನಿಗಳ ಮಾಡುತ
ಹೆಜ್ಜೆಯ ಮೇಲೆ ಹೆಜ್ಜೆಯ ನಿಡುತ
ಸಜ್ಜನರೆಸಗುವ ಸೇವೆ ಕೈಗೊಳ್ಳುತ
ಅರ್ಜುನ ಸಖನ ಪಟ್ಟದರಾಣಿ ಹರುಷದಲಿ ೧

ಪಟ್ಟೆ ಪೀತಾಂಬರವನುಟ್ಟು ವಜ್ರದ ಪಟ್ಟಿ
ಕಠ್ಠಾಣಿ ಸರಿಗೆ ಏಕಾವಳಿ ಹೊಳೆಯುತ
ಶ್ರೇಷ್ಠ ಮುತ್ತಿನ ಹಾರಗಳು
ಕೆತ್ತಿದ ಉಂಗುರಡ್ಡಿಕಿ ಥಳಥಳ ಹೊಳೆಯುತ್ತ ೨

ವಂಕಿತೋಳಿಗೆ ತಕ್ಕ ಕಂಕಣ ಬಳೆಗಳು
ಬಿಂಕದಿ ಕೊಡುವ ವರಗಳ ಹಸ್ತಂಗಳು
ವೆಂಕಟರಮಣನ ಸತಿಯೆ
ಪಂಕಜಾಕ್ಷನ ಒಡಗೂಡುತ ನಲಿಯುತ ೩

ಕೋಟಿ ಸೂರ್ಯರ ಕಾಂತಿ ತೋರುವ ನಗೆ ಮುಖ
ಲಲಾಟದಿ ಕೇಸರಿ ಕುಂಕುಮ ಹೊಳೆಯುತ
ಸಾಟಿಯಾರು ಮೂರ್ಜಗದಿ
ಕೋಟಿ ಮನ್ಮಥರ ಸೋಲಿಪ ದೇವನರಸಿಯೆ ೪

ಮುದ್ದು ಮುಖಕೆ ತಕ್ಕ ಮುಖುರ ಬುಲಾಕನಿಟ್ಟು
ತಿದ್ದಿದೋಲೆ ಚಳತುಂಬು ಬಾವಲಿಗಳು

ನಾರಿಯರು ಶ್ರೀಹರಿಯ ಧ್ಯಾನಿಸಿ
ಸಾರ ನುಡಿಗಳ ನುಡಿದರು ೯

ಸತ್ಯ ಮೂರುತಿ ಸತಿಯು ಬಂದಳು
ಸಾರ್ಥಕವಾಯಿತು ಜನುಮವು
ಪ್ರೀತಿಯಿಂದಲಿ ಪೂಜಿಸೀಕೆಯ
ನೀತಿಗಳ ತಿಳಿ ಹೇಳಲು ೧೦

ಶ್ರಾವಣ ಮಾಸದಲಿ ಪೌರ್ಣಮಿ
ಭಾರ್ಗವ ವಾಸರದಲಿ
ಚಾರುಮತಿ ನೀ ಪೂಜಿಸೆನ್ನುತ
ನಾರೇರೆಲ್ಲರು ನುಡಿದರು ೧೧

ಒಡನೆ ಮುತ್ತೈದೆಯರಿಗೆಲ್ಲ
ಬಿಡದೆ ಬಾಗಿನ ಕೊಡುತಲಿ
ಕಡಲೊಡೆಯ ಕಮಲನಾಭ ವಿಠ್ಠಲನ
ಬಿಡದೆ ಧ್ಯಾನಿಸಿ ನಮಿಸುತ ೧೨

## ಗದ್ಯ

ಈ ರೀತಿ ಚಾರುಮತಿ ದಾರಿ ನೋಡುತಲಿರಲು ಶ್ರಾವಣ ಮಾಸ ಬರುತಿರಲು ಆಗ ಬಹಳ ಸಂಭ್ರಮದಿಂದ ಶ್ರೀ ದೇವಿ ಪೂಜೆಗೆ ಬೇಗ ಬೇಗನೆ ಕಾರ್ಯಗಳನು ಮಾಡಿ ಮನೆಯ ಸಾರಿಸಿ ಸುಣ್ಣ ಕಾರಣೆಯು ಸಾರಣೆಯು ಬಹಳ ಪರಿ ಚಿತ್ರಗಳ ಬರೆದು ನಲಿದು ತಳಿರು ತೋರಣ ಕಟ್ಟಿ ವಿಧ ವಿಧದ ಫಲಗಳನು ತರಿಸಿ ಬಹು ವಿಧದ ಪುಷ್ಪಗಳಿಂದಲಂಕರಿಸಿ ಮನೆಯ ಮಧ್ಯದಿ ತೋರ ಮಂಟಪವನಿರಿಸುತ ಕದಳಿ ಕಂಬವು ತೋರಣವನೆ ಕಟ್ಟಿ ಮಂಟಪದ ಮಧ್ಯದಲಿ ತಂಡುಲವ ಹಾಸುತ್ತ ಕಲಶದಲಿ ಪಂಚಪಲ್ಲವಗಳ್ಹಾಕಿ ಎರೆದು ಪೀತಾಂಬರವನುಡುತ ಚಾರುಮತಿಯು ವರವಿಪ್ರರನು ಕರಸಿ ಹರುಷದಿಂದ ಪರಿಪರಿಯ ಪುಷ್ಪಗಳು ಧೂಪ ದೀಪಗಳಿಂದ



ಬೇರೆ ಅರರನ್ಯಾರು ವಸುದೇವನಿರುವನು
ಬಾರನು ಆತ ವೈರಿ ರಕ್ಷಣೆಗೆ ೪

ಹಾಗಲ್ಲ ಕೇಳು ತಾಯಿ ಭಾಗವತರ ಪ್ರಿಯ
ಸಾಗರದೊಳು ಒಗತನ ಆತಗೆ ೫

ಬಲಭದ್ರನಾದರೆ ಸುಲಭದಿಂ ಕದನಕ್ಕೆ
ಬರಲಾರನೆಂದು ನಂಬಿ ಇರುವೆನೀಗ ೬

ಭಕ್ತವತ್ಸಲನೆಂಬ ಬಿರುದು ಪೊತ್ತಿಹನವ್ವ
ಮುಕ್ತರಿಗಾಶ್ರಯ ಕೊಡುವನವ್ವ ೭

ಹತ್ತಾರು ಸಾವಿರ ಮಿತ್ರೆಯರರಸನ
ಪಟ್ಟಣಕಧಿಕಾರಿ ಪುಣ್ಯಾತ್ಮನು ೮

ಒಗಟಿನಂತಿದೆ ನಿಮ್ಮ ಹಗರಣ ಮಾತು
ನಗುವರು ನಿಮ್ಮ ಮಾತನು ನೆನೆದು ನೆನೆದು ೯

ಚಕ್ರಧರನು ಪಟ್ಟದರಸೆಂದು ತಿಳಿಯದೆ
ಕಕ್ಕುಬಿಕ್ಕಾಗಿ ನುಡಿಯುವೆ ಏತಕೆ ೧೦

ಚಕ್ರಧರನೆ ಶ್ರೀಕೃಷ್ಣನೆನ್ನುತ ತಿಳಿದು
ಎಚ್ಚರಿಲ್ಲದೆ ನೆಲಕೆ ಬಿದ್ದಳಾಗ ೧೧

ನೋಡಿ ಗಾಬರಿಗೊಂಡು ನಾರಿಯರೆಚ್ಚರಿಸೆ
ಬಾಡಿದ ಮುಖವನೆ ನೋಡಿದರು ೧೨

ಕೇಳವ್ವ ಸುಭದ್ರಿ ಬಹಳ ಬಳಲಬೇಡ
ಹೇಳು ನಿನ್ನರಸಗೆ ಪಾಲಿಸಿವನ ೧೩

ಅಣ್ಣನೊಡನೆ ಕಲಹವನ್ನು ಮಾಡುವುದೆಂತು
ಬಿನ್ನಾಣ ಮಾತನಾಡುವದೇತಕೆ ೧೪

ಕೃಷ್ಣ ಕೃಷ್ಣ ಕೃಷ್ಣ ಕಮಲನಾಭ ವಿಠ್ಠಲ
ಕೃಷ್ಣ ರಕ್ಷಿಸು ರಕ್ಷಿಸು ರಕ್ಷಿಸೆನ್ನುತಲಿ ೧೫

**ವಚನ**

ಹೀಗೆ ಮೊರೆಯಿಡುತಿರುವ ನಾರಿಭದ್ರೆಯ ನೋಡಿ
ತಾಳವ್ವ ಧೈರ್ಯವನು ಹೆದರದಿರು ಮನದೊಳಗೆ
ನೀನೀಗ ಅರಮನೆಗೆ ಪೋಗಿ ಮೌನವ ಧರಿಸಿ
ಯಾರು ಬಂದರು ಮಾತನಾಡದಲೆ ಸುಮ್ಮನಿರು
ಆಗ ಫಲ್ಗುಣ ಬಂದು ಕೇಳುವನು ಕಾರಣವ
ಭಾಷೆ ಕೊಟ್ಟರೆ ಪೇಳ್ವೆನೆಂದ ನಿನ್ನ ನುಡಿ ಕೇಳಿ
ಭಾಷೆ ಕೊಡುವನು ಆಗ ತೋರು ಗಂಧರ್ವನನು
ಆಗಲೀ ಕಾರ್ಯ ಸರಿಯಾಗುವದು ಎಂದೆನಲು
ಬೇಗ ಗಂಧರ್ವನನು ಕರಕೊಂಡು ಬರೆ ಮನೆಗೆ
ಗಂಧರ್ವನನು ಒಂದು ಗುಪಿತ ಗೃಹದಲ್ಲಿರಿಸಿ
ತಾನು ಧರಿಸಿದ ವಸ್ತ್ರ ಆಭರಣಗಳನೆಲ್ಲ
ಬಿಸಾಡಿ ಮನಬಂದ ಕಡೆಗೆ ಒಂದೊಂದನು
ಹಾಸು ಮಂಚದಿ ಮುಸುಗ ಹಾಕಿ ಮಲಗಿರಲಾಗ
ಪಾರ್ಥ ಹುಡುಕುತ ಬಂದು ಕಂಡನಾ ಭದ್ರೆಯನು
ಯಾಕೆ ಮಲಗಿರುವಿ ಎಂದೆಬ್ಬಿಸಿ ಮಾತಾಡಿಸಲು
ಭಾಷೆ ಕೊಟ್ಟರೆ ಪೇಳ್ವೆನೆನುತ ನುಡಿಯಲು ಕೇಳಿ
ಏನು ಬಂತಿದು ಎಂದು ಯೋಚಿಸುತ ಮನದಲ್ಲಿ
ಕೊಡುವೆ ಭಾಷೆಯನು ನೀ ಕೇಳು ತಡ ಮಾಡದಲೆ
ಎಂದೆನುತ ಸತಿಗೆ ಧೈರ್ಯವನು ಪೇಳಲು ಎದ್ದು
ಪಾದಕ್ಕೆರಗುತಲಾಗ ಗಂಧರ್ವನನು ತೋರಿ
ಆ ದಿನದ ಅಸ್ತಮಾನದೊಳಿವನ ಸಿರವನು ಉಳಿಸಿ
ಕಾಪಾಡಬೇಕೆಂದು ಪೇಳುತಿರೆ ಸುಭದ್ರ



ಸತ್ಯಶೀಲೆಯು ಮನದಿ ಹರುಷಿಸೆ
ಸುತ್ತಮುತ್ತಲು ನೋಡುತ ೩

ಮತ್ತದಾರನು ಕಾಣದಿರಲು
ಸ್ವಪ್ನವೆನುತಲಿ ತಿಳಿಯುತ
ಮತ್ತೆಗಂಡಗೆ ಪೇಳಲಾಗದು ಪುರು
ಷೋತ್ತಮನ ಸತಿ ಮಹಿಮೆಯು ೪

ಮೆತ್ತನೆದ್ದಳು ಪತಿಗೆ ವಂದಿಸಿ
ಚಿತ್ತ ಸಂಭ್ರಮದಿಂದಲಿ
ಮತ್ತೆ ಮಜ್ಜನ ಗೈದು ಮಡಿಗಳ–
ನುಟ್ಟು ಹರಿಯನು ನೆನೆಯುತ ೫

ನಿತ್ಯ ಕರ್ಮವು ಮುಗಿದ ಕ್ಷಣದಲಿ
ಮತ್ತೆ ತುಳಸಿಯ ಪೂಜಿಸಿ
ಸತ್ಯವಂತೆಯು ವೃದ್ಧ
ಮುತ್ತೈದೆಯರ ಕರದಳು ಹರುಷದಿ ೬

ಬಂದ ಮುತ್ತೈದೆಯರಿಗೆಲ್ಲ
ಚಂದ ಪೀಠದಿ ಕೂಡಿಸಿ
ಅಂದಿನ ಸ್ವಪ್ನವನು ಪೇಳಲು
ಚಂದದಿ ವಂದಿಸಿದಳು ೭

ಮೂರು ಝಾಮವು ಮುಗಿದನಂತರ
ನಾರಿಮಣಿ ತಾ ಬಂದಳು
ಚಾರು ಪೀಠದಿ ಕುಳ್ಳಿರಿಸಿ ಪೂಜಿಸಿ
ಆರುತೆತ್ತುವ ಸಮಯಕೆ ೮

ಬೇಗನೆಚ್ಚರಗೊಂಡೆನಿದರರ್ಥವ
ಬೇಗ ಪೇಳಬೇಕೆನುತಿರೆ

ಪರಮ ಭಕ್ತಿಯೊಳಗಿರುತಿರಲೊಂದಿನ
ವರಮಹಲಕ್ಷ್ಮಿಯು ಕರುಣದಲಿ
ಸಿರಿವರ ಕಮಲನಾಭ ವಿಠ್ಠಲ ಸಹ
ಕರುಣದಿ ಪಾಲಿಸೆವರಗಳನು ೭

### ಕಂದ

ಇರುತಿರಲೊಂದಿನ ಈ ಪರಿ
ಪರಮ ಪತಿವ್ರತೆಗೆ ಶುಭಶಕನಗಳಾಗೆ
ಸರಸಿಜಾಕ್ಷ ಹರಿಗೊಂದಿಸಿ
ಸರ್ವವು ಹರಿ ಪ್ರೀತಿಯಾಗಲೆಂದೆನುತ ೧

ಸ್ವಪ್ನ ಕಂಡಳು ಚಾರುಮತಿಯ
ಅಪ್ರಮೇಯನ ದಯದಲಿ ಪ

ಸರ್ಪಶಯನನು ಸ್ವಪ್ರಕಾಶನು
ಸತ್ಯಮೂರುತಿ ಒಲಿಯಲು ಅ.ಪ

ಮೂರು ಝಾಮವು ಮುಗಿದ ಕ್ಷಣದೊಳು
ಬಾಲೆ ಸ್ವಪ್ನವ ಕಂಡಳು
ಲೋಲೆ ಕರದಲಿ ಕಮಲತಿರುವುತ
ಬಾಗಿಲೊಳಗೆ ಬರುತಿರೆ ೧

ಚಾರುಮತಿ ತಟ್ಟನೆ ಕರಪಿಡಿದು
ತೋರ ಪೀಠದಿ ಕೂಡಿಸಿ
ಸಾರಸಾಕ್ಷಿಗೆ ಗಂಧ ಪುಷ್ಪದಿ
ನೀರೆ ಪೂಜೆಯ ಮಾಡಲು ೨

ಮುತ್ತಿನಾರತಿ ಎತ್ತೋಕಾಲಕೆ
ಮತ್ತೆ ಎಚ್ಚರವಾಯಿತು



ರಕ್ಕಸಾಂತಕನಿವನ ವೈರಿ ಎನ್ನುತ ಪೇಳೆ
ಪಾರ್ಥ ಕೇಳುತ ತನ್ನ ಪತ್ನಿಗೆಂದನು ಹೀಗೆ
ಕೇಳು ಸುಭದ್ರ ಕೊಟ್ಟ ಮಾತು ತಪ್ಪಿದರೀಗ
ಮಾಡುವೆನು ಅಗ್ನಿಪ್ರವೇಶವೆನ್ನುತ ತಿಳಿ
ಹೀಗೆಂದು ಶಪಥವನು ಮಾಡಿ ಪಾರ್ಥನು ನುಡಿದು
ಆಗ ಮುಂದಿನ ಕಾರ್ಯ ಹೇಗೆನುತ ಯೋಚಿಸುತಿದ್ದನು

ಬಂದ ಗಂಧರ್ವನನು ಕಳುಹುತ
ಚಂದದಿಂದಲಿ ನಾರದರು ತ್ವರ–
ದಿಂದ ದ್ವಾರಕಾಪುರವ ಪೊಕ್ಕರು
ಅಂದು ಶೀಘ್ರದಲಿ ೧

ಸಿಂಧು ಶಯನನೊಳ್ ತವಕದಲಿ
ಮಂದರೋದ್ಧರನನ್ನು ಪೊಗಳುತ
ಬಂದು ನಿಂತರು ಹರಿಯ ಮೂರ್ತಿಯ
ಕಂಡು ವಂದಿಸಲು ೨

ಶೇಷಶಯನದಿ ಹರಿಯು ಮಲಗಿರೆ
ಶ್ರೀ ಸತಿ ಭೂಸತಿಯರ್ಧರುಷದಿ
ಶ್ರೀಶನಂಘ್ರಿಗಳೊತ್ತುತಿರುವ
ವೈಭವವ ನೋಡಿದರು ೩

ದೇವದೇವನೆ ನಿನ್ನ ಮಹಿಮೆಯ
ದೇವಿ ಅರಿಯದೆ ತಪ ಚರಿಪಳೆನೆ
ಜೀವ ಮೊದಲಾದವರರಿವರೆ
ಪಾಮರರಿಗೊಶವೆ ೪

ಪುಂಡರೀಕದಳಾಯತಾಕ್ಷನೆ
ಗಂಡುಗಲಿ ಪಾರ್ಥನಿಗೆ ಮಿತ್ರನೆ
ಪಾಂಡವರ ನೆರೆ ಬಿಡದೆ ಪೊರೆಯುವನೆ
ವಂದಿಸುವೆನೆನುತ ೫

ಬಂದು ಸಾಷ್ಟಾಂಗವನೆ ಮಾಡಲು
ಇಂದಿರೇಶನು ನಸುನಗುತ ಬಹು
ಮಂದಹಾಸದಿ ಕುಶಲ ಪ್ರಶ್ನೆಗಳನ್ನು
ಮಾಡುತಿರೆ ೬

ಕೇಳು ಶ್ರೀಹರಿ ನಿನ್ನ ಪಾಂಡವರು
ಬಹಳ ಅಹಂಕಾರದಲಿ ಮೆರೆವರು
ಹೇಳಕೇಳುವರಿಲ್ಲವೆನುತ ಕೃ-
ಪಾಳು ನಿನ್ನ ಮರೆತು ೭

ನಿನ್ನ ವೈರಿಯ ತಡೆದು ಮನ್ನಿಸಿ
ನಿನ್ನೊಡನೆ ಕಾದುವ ಪ್ರಯತ್ನದಿ
ನಿನ್ನನೆನಹನು ತಾರದಿರುವರು
ಚನ್ನವೇನೆನುತ ೮

ಇನ್ನು ಇವರನು ಶಿಕ್ಷಿಸದೆ ಇರೆ
ಘನ್ನವಹ ಮದದಿಂದ ಕೆಡುವರು
ಬಿನ್ನವಿಸಿದೆನು ಕಮಲನಾಭ
ವಿಠ್ಠಲನೆ ಸಲಹೆನುತ ೯

## ವಚನ

ಹೀಗೆಂದು ಪೇಳುವ ನಾರದರ ನುಡಿ ಕೇಳಿ
ಸಾಗರಶಯನ ಮಾತಾಡಿದನು ನಸುನಗುತ
ಕೇಳಿ ನಾರದರೆ ಈ ವೇಳೆ ಪೋಗುತ
ಸೂರ್ಯಾಸ್ತಮಾನದೊಳು ಶತ್ರುಸಿರ ಕತ್ತರಿಸಿ
ಬರುವೆನೀ ಕಾರ್ಯ ಎನಗದ್ಭುತವೆ ಎಂದೆನುತ
ಕೇಳಿ ನಾರದರು ಮಾತಾಡಿದರು ಹರಿ ಒಡನೆ
ಹಾಗಲ್ಲವೈ ಶ್ರೀ ಕೃಷ್ಣ ತಿಳಿ ಪೇಳುವೆನು
ಶರಣು ಹೊಕ್ಕವರನ್ನು ಪೊರೆಯದಲೆ ಬಿಟ್ಟರೆ
ಬರಿದೆ ನಮ್ಮಯ ಕುಲಕೆ ಅಪಕೀರ್ತಿ ಎಂದೆನುತ



## ಆರ್ಯ

ಗುರು ಹಿರಿಯರಿಗೊಂದಿಸಿ ಪ್ರಾರ್ಥಿಸುವೆನು
ಕರುಣದಿ ವರಗಳ ಬೇಡುವೆನು
ವರ ಮಹಲಕ್ಷ್ಮಿಯ ಚರಿತ್ರೆಯ ಪಾಡಲು
ಹರುಷವು ಮನಕೀಯಲಿ ಎನುತ ೧

ಒಂದಿನ ಕೈಲಾಸದಿ ಪರಶಿವನು
ಸುಂದರಿ ಪಾರ್ವತಿ ಸಹಿತದಲಿ
ಮಂದಹಾಸದೊಳಿರುತಿಹ ಸಮಯದಿ
ನಂದಿವಾಹನಗೆರಗುತ ಉಮೆಯು ೨

ಇಂದುಶೇಖರಿನಿಗೆ ವಂದಿಸಿ ನುಡಿದಳು
ಮಂದಗಮನೆ ಹರಿ ಮಹಿಮೆಯಲಿ
ಚಂದದ ಚರಿತೆಯ ಅರುಹಬೇಕೆನೆ
ನಂದಿವಾಹನ ನುಡಿದನು ಹೀಗೆ ೩

ಹರಿಭಕ್ತನು ಬಡಬ್ರಾಹ್ಮಣನೋರ್ವನು
ಇರುತಿರೆ ಒಂದು ಪಟ್ಟಣದಲ್ಲಿ
ಪರಮ ಪತಿವ್ರತೆಯು ಆತನ ಪತ್ನಿಯು
ಇರುತಿದ್ದಳು ಸನ್ಮಾರ್ಗದಲಿ ೪

ಅರುಣೋದಯಕೆ ಏಳುತ ಪತಿಗೊಂದಿಸಿ
ಪರಿ ಪರಿ ಸತ್ಕರ್ಮವ ನಡೆಸಿ
ಗುರುಹಿರಿಯರಿಗೊಂದಿಸಿ ತನ್ನ ಮನದಲ್ಲಿ
ಗರುವ ಮತ್ಸರಗಳ ತ್ಯಜಿಸಿ ೫

ಲೋಕವಾರ್ತೆಗೆ ತಾ ಕಿವಿಗೊಡದಲೆ
ಮೂಕಳಂತೆ ವರ್ತಿಸುತಿಹಳು
ಲೋಕವಂದ್ಯನನು ಸ್ಮರಿಪಳು ಮನದಲಿ
ಲೋಕೇಶನ ರಾಣಿಯ ಸ್ತುತಿಸಿ ೬

ಕಮಲಭವನ ಪಿತ ಕಮಲಾಕ್ಷ ಕೃಷ್ಣನಿಗೆ
ಕಮಲನಾಭ ವಿಠ್ಠಲನಿಗೆ ಕಮಲಪತ್ರಾಕ್ಷನಿಗೆ ೫

ಶ್ರೀ ಸಾಧಾರಣನಾಮ ಸಂವತ್ಸರ ಮಾಘ ಶುದ್ಧಮಧ್ವ ನವಮಿ ಗುರುವಾರ (ಶ್ರೀ ಮಧ್ವನವಮಿ) ಈ ಶುಭದಿನದಲಿ ಶ್ರೀ ಹರಿವಾಯು ಗುರುಗಳ ಅನುಗ್ರಹದಿಂದಲೂ ಹಿರಿಯರ ಆಶೀರ್ವಾದದಿಂದಲೂ ಪ್ರೇರೇಪಿಸಲ್ಪಟ್ಟು ಬರೆಸಿದ ಈ ಗಾಲವ ಚರಿತ್ರೆಯು ಸಂಪೂರ್ಣವಾದದು. ೪-೩-೧೯೭೧

## ೮. ಶ್ರೀ ವರಮಹಾಲಕ್ಷ್ಮಿಯ ಕಥೆ

ವರಗಣಪನೆ ಪ್ರಾರ್ಥಿಪೆನಿನ್ನು
ವರಗಳ ಯಾಚಿಸಿ ಬೇಡುವೆನು ಪ

ಲಂಬೋದರ ರಕ್ತಾಂಬರ ಶೋಭಿತ
ಅಂಬಾತನಯನೆ ಹೇರಂಬನೆ ಗಜಮುಖ ೧

ವಾಗಭಿಮಾನಿಗೆ ವಂದಿಸಿ ಬೇಡುವೆ
ಬೇಗದಿ ಮಾನಸರೂಪರಿಗೆರಗುವೆ ೨

ಭಾರತಿ ಸರಸ್ವತಿ ಮಾರುತಿ ವಾಣೀಪತಿ
ತೋರುತ ಮತಿಗಳ ತೋರಿಸೆಂದೆನುತ ೩

ವರಮಹಲಕ್ಷ್ಮಿಗೆ ಎರಗುತ ಪ್ರಾರ್ಥಿಸಿ
ಕರುಣದಿ ಪಾಲಿಸು ವರಗಳೆಂದೆನುತಲಿ ೪

ಶ್ರೀಶ ಕಮಲನಾಭವಿಠ್ಠಲಗೊಂದಿಪೆ
ಸಾಸಿರ ನಾಮನ ಸ್ತುತಿಸುತ ಪಾಡಲು ೫



ಮೊರೆಯ ಹೊಕ್ಕವರನ್ನು ಪೊರೆವೆನೆನ್ನುತ ಪೇಳಿ
ಪೊರೆಯದಿರೆ ಹೇಡಿಯಂದದಿ ಜೀವಿಸಿರಲಾರೆ
ಉರಿಯ ಬೀಳುತ ಜೀವ ತೊರೆಯುವೆನು ಎಂದೆನುತ
ಭಾಷೆಯ ಮಾಡಿರುವನು ಪಾರ್ಥ ಇದ ಕೇಳು ಅಚ್ಚರಿಯು
ಹೋಗಿ ಬರುವೆನು ನಮೋ ನಮ: ಎನ್ನುತ ಪೇಳಿ
ಸಾಗಿದರು ನಾರದರು ದ್ವಾರಕಾಪುರವ ಬಿಟ್ಟು

ರತಿ ಪತಿ ಪಿತ ಪತಿತಪಾವನ ವಿತತ ಮಹಿಮನು
ಹಿತದಿ ಭಕ್ತನ ಪೊರೆಯಲೋಸುಗ ಅತಿಶಯವ ತೋರುವ ೧

ಕರೆಸಿ ತನ್ನ ಸೇವಕರ ತ್ವರದಿ ಸೈನ್ಯ ಸೇರಿಸಿಡಿರಿ
ಭರದಿ ಯುದ್ಧಕೀಗ ಸಮಯ ಒದಗಿತೆಂದನು ೨

ಯಾದವರೆಲ್ಲರ ಕರಸಿ ಬೋಧಿಸುತಲೀ ಪರಿಯ ನುಡಿದ
ಕಾದಿ ಸಮರದೊಳಗೆ ಗೆದ್ದು ಮೋದ ಪಡೆಯುವ ೩

ಕಡಲೊಡೆಯನ ನುಡಿಯ ಕೇಳಿ ಕಡು ತ್ವರದಿ ಸನ್ನದ್ಧರಾಗಿ
ಮೃಡನ ಸಖ ಶ್ರೀ ಕಮಲನಾಭ ವಿಠ್ಠಲಗೊಂದಿಸಿ ೪

### ವಚನ

ಹೀಗೆಂದು ಪೇಳಿದ ಶ್ರೀಹರಿಯ ನುಡಿ ಕೇಳಿ
ಯಾದವರು ಸಂಭ್ರಮದಿ ಸೈನಿಕರೊಡಗೊಂಡು
ಸಾಲುಸಾಲಾಗಿ ಸೈನ್ಯವ ನಿಲಿಸಿ ಕೈಮುಗಿದು
ಏನಪ್ಪಣೆಯೆಂದು ಕೇಳುತಿರೆ ವಿನಯದಲಿ
ಗಾನಲೋಲನು ನೋಡಿ ಮನದಿ ಹರುಷವ ತಾಳಿ
ಭೇರಿ ನಗಾರಿ ತುತ್ತೂರಿ ವಾದ್ಯಗಳೆಲ್ಲ
ಬೋರೆಂದು ಮೊಳಗುತಿರೆ ಸಮರವಾದ್ಯಗಳೆಲ್ಲ
ಮಾಧವನು ಸೈನ್ಯವನು ಒಡಗೂಡಿ ಯುದ್ಧಕೆ
ಸಾಧುಪ್ರಿಯನು ತ್ವರದಿ ತೆರಳುವದು ಹೇಗೆಂದರೆ

ಬಂದರು ಯಾದವರೆಲ್ಲರು ತ್ವರಿತದಿ
ಇಂದಿರೆಯರಸನಿಗೆರಗುತಲಿ
ಚಂದದಲಿ ವಂದಿಸುತ
ಮುಂದೇನಪ್ಪಣೆ ಎಂದೆನಲು ೧

ಇಂದಿರೇಶನು ಬಂದವರಿಗೆ ಹೀ–
ಗೆಂದು ಆಜ್ಞೆಯ ಮಾಡುತಲಿ
ಈ ದಿನವೇ ಮಂದಿಗಳ
ಚಂದದಿ ಸೈನ್ಯವ ಕರೆಸೆನುತ ೨

ಕತ್ತಿ ಕೈಭಟರು ಸುತ್ತಲು ನಿಂತರು
ಚಿತ್ತಜನಯ್ಯನ ಸ್ಮರಣೆಯಲಿ
ಹಸ್ತಿಗಳು ಅಶ್ವಗಳು
ಹತ್ತಿಹ ಭಟರುಗಳು ಬರುತಿರಲು ೩

ರಥ ಗಜ ತುರಗ ಪದಾತಿಗಳೆಲ್ಲವು
ಅತಿಶಯದಿಂದಲಿ ಬರುತಿರಲು
ಪೃಥುವಿಯಲಿ ಅತಿಶಯದಿ
ರಥಿಕರು ಬಂದರು ಹರಿಯೆಡೆಗೆ ೪

ಭೇರಿ ನಗಾರಿ ತುತ್ತೂರಿ ಕೊಂಬುಗಳು
ಕಹಳೆ ಹೆಗ್ಗಹಳೆ ತಿತ್ತಿರಿ ಪಣವ
ತಾಳಗಳೂ ಮೇಳಗಳು
ಸಾಲು ಸಾಲಾಗೈತರಲು ೫

ಡಿಂಡಿಮ ಡಕ್ಕೆ ತಮ್ಮಟೆಗಳು
ಬಾರಿಸುತಲಿ ಢಂ ಢಂ ಶಬ್ದದಲಿ
ಚಂದದಲಿ ಗಗನದಲಿ
ನಿಂದು ಪ್ರತಿಧ್ವನಿ ಕೊಡುತಿರುಲು ೬



ದ್ವಾರಕಾಪಟ್ಟಣದಿ ಭಾಮೆರುಕ್ಮಿಣಿರೊಡನೆ
ಪೇಳುತಿರೆ ಅತಿಶಯವ ಕೇಳಿ ಹರುಷಿಸೆ ಅವರು
ಶ್ರೀ ಕೃಷ್ಣ ಲೀಲಾಮೃತವ ಕಥೆಯ ವಿಸ್ತಾರದಿ
ಹೇಳಿ ಕೇಳುವವರಿಗೆ ಶ್ರೀಹರಿಯು ಒಲಿಯುವನು
ಭಕ್ತಿಯಿಂದಲಿ ಈ ಚರಿತ್ರೆ ಪಠಿಸುವರನು
ಭಕ್ತವತ್ಸಲ ತನ್ನ ಭಕ್ತಸಂಗದೊಳಿಟ್ಟು
ಅತ್ಯಂತ ಹರುಷದಿಂ ಕಾಪಾಡುವನು ಎಂಬ
ಈ ಕಥೆಯು ವಿಸ್ತರದಿ ವಿಘ್ನವಿಲ್ಲದೆ ರಚಿಸಿ
ಶ್ರೀ ಹರಿವಾಯು ಗುರುಗಳ ಪ್ರೇರಣಾನುಸಾರದಲಿ
ಬರೆಸಿದರು ತಪ್ಪುಗಳೆಣಿಸಲಾಗದು ಬುಧರು
ಪರಮ ಪುಣ್ಯದ ಚರಿತ್ರೆಯು ಪೇಳಿ ಕೇಳುವರ
ಮನದೊಳಗೆ ನೆಲಸಿ ಶ್ರೀ ಹರಿ ಅವರ ಸಲಹುವನು
ಕರುಣಾಕರ ಕಮಲನಾಭ ವಿಠ್ಠಲ ನಮ್ಮ–
ನರಘಳಿಗೆ ಬಿಡದಂತೆ ಕರುಣದಿಂ ಕಾಪಾಡುತಿಹನು

## ಮಂಗಳ

ಮಂಗಳಾರತಿ ಮಾಡಿರೆ ಅಂಗನೆಯರೆಲ್ಲ ಪ

ಸರಸಿಜನಾಭಗೆ ದುರಿತ ವಿದೂರನಿಗೆ
ಸರಸಿಜಮುಖಿಯರು ಸರಸದಿ ಪಾಡುತ ೧

ಪರಮಪುರುಷನಿಗೆ ಗರುಡಗಮನನಿಗೆ
ಉರಗಶಯನನಿಗೆ ಕರಿರಾಜ ವರದಗೆ ೨

ಮಾವಕಂಸನ ವೈರಿ ಗೋವರ್ಧನೋದ್ಧಾರಗೆ
ಶ್ರೀವತ್ಸಲಾಂಛನಿಗೆ ಶ್ರೀ ವನಿತೆಯರಸನಿಗೆ ೩

ಮಂದರೋದ್ಧಾರನಿಗೆ ನಂದನ ಕಂದನಿಗೆ
ಸುಂದರಿ ಮಣಿಯರು ಚಂದದಿ ಪಾಡುತ ೪

## ಮಂಗಳ

ಮಂಗಳಾರತಿ ಮಾಡಿರೆ ಅಂಗನೆಯರು
ರಂಗಗೆ ರಿಪುಮದ ಭಂಗ ಶ್ರೀಹರಿಗೆ ಪ

ಪರಮ ಭಕ್ತರನೆಲ್ಲ ಕರುಣದಿ ಸಲಹುವ
ಕರಿರಾಜ ವರದಗೆ ತರುಣಿ ಮಣಿಯರೆಲ್ಲ ೧

ಸಾಸಿರ ನಾಮಗೆ ಭೂಸುರ ಪಾಲಗೆ
ವಾಸುಕಿ ಶಯನಗೆ ಮೀಸಲು ಸತಿಯರು ೨

ಭುವನ ಮೋಹನನಿಗೆ ನವನವ ರೂಪನಿಗೆ
ಕವಿಜನ ಪ್ರಿಯಗೆ ನವರತ್ನ ತಟ್ಟೆಯಲಿ ೩

ಕನಕ ಕುಂಡಲನಿಗೆ ಕನಕಾಂಬರಧರಗೆ
ದಿನಕೋಟಿ ಪ್ರಭೆ ಪೋಲ್ವ ಸನಕಾದಿ ವಂದ್ಯನಿಗೆ ೪

ಕಮಲಾಕ್ಷ ಕೃಷ್ಣಗೆ ಕಮನೀಯ ರೂಪಗೆ
ಕಮಲನಾಭ ವಿಠ್ಠಲಗೆ ಕಮಲ ಮುಖಿಯರೆಲ್ಲ ೫

ಹೀಗೆಂದು ಆರತಿಯ ಬಾಗಿ ಬಳುಕುತ ಮಾಡಿ
ಸಾಗಿದರು ತಮ ತಮ ಪುರಕೆ ಬಂದವರೆಲ್ಲ
ನಾಗಶಯನನು ಪಂಚಪಾಂಡವರ ಸಂತೈಸಿ
ಪೋಗಿ ಬರುವೆನು ದ್ವಾರಕಾಪುರಿಗೆ ಎಂದೆನಲು
ಆಗ ಧರ್ಮಜ ಬಂದು ಶ್ರೀಧರಗೆ ವಂದಿಸುತ
ಪಂಚ ಪಾಂಡವರು ದ್ರೌಪದಿ ಸುಭದ್ರೆಯರೆಲ್ಲ
ಬಂದೆರಗುತಿರಲಾಗ ಇಂದಿರೇಶನು ನೋಡಿ
ಮಂದಹಾಸದಿ ನಗುತ ಮನ್ನಿಸುತ ಸಂತೈಸಿ
ಮುಂದಿನ್ನು ದ್ವಾರಕಿಗೆ ಪೋಗಿ ಬರುವೆನು ಎಂದು
ಬಂದು ಕುಂತಿಗೆ ಪೇಳಿ ಗರುಡನೇರುತ ತ್ವರದಿ



ಅಶ್ವಾರೋಹಿಗಳತಿ ತ್ವರಿತದಿ ತಮ್ಮ
ಅಶ್ವಗಳನೆ ಏರುತ ಭರದಿ
ಸಿಸ್ತಿನಲಿ ಭಕ್ತಿಯಲಿ
ಚಿತ್ತಜಪಿತಗೊಂದಿಸುತಿರಲು ೭

ನೋಡುತ ಶ್ರೀಹರಿ ಕಡು ಸಂಭ್ರಮದಲಿ
ಕೂಡಿದ ಸೈನ್ಯವ ನಸುನಗುತ
ಗಾಡದಲಿ ಪ್ರೇಮದಲಿ
ತಾನಲಂಕರಿಸಿದ ಮನ ನಲಿದು ೮

ಕೋಟಿ ಸೂರ್ಯ ಪ್ರಕಾಶದಿ ಹೊಳೆವ ಕಿ-
ರೀಟವು ಸಿರದಲಿ ಧರಿಸಿದನು
ನೀಟಾದ ಕರ್ಣಗಳ
ಮಕರ ಕುಂಡಲಗಳ ಧರಿಸಿದನು ೯

ಕಡಗ ಕಂಕಣ ತೋಳಬಾಪುರಿ
ಸಡಗರದಲಿ ಭುಜಕೀರ್ತಿಗಳು
ಬಿಡಿ ಮುತ್ತು ಬಿಗದಿರುವ
ಪದಕಸರಗಳು ಹೊಳೆಯುತಿರೆ ೧೦

ಶಂಖ ಚಕ್ರವು ಗದೆಯು ಪದುಮವು
ಬಿಂಕದಿ ಹಸ್ತಗಳಲಿ ಧರಿಸಿ
ಮಂಕುಗಳಾ ಮೋಹಿಸುವ
ಅಲಂಕಾರವು ತಾ ಧರಿಸಿದನು ೧೧

ಮುತ್ತಿನ ಹಾರವು ಕಸ್ತೂರಿ ತಿಲಕವು
ವಿಸ್ತಾರದಂಟುಡುದಾರಗಳು
ವಕ್ಷದಿ ಶ್ರೀ ವತ್ಸಗಳೂ
ಕೌಸ್ತುಭಹಾರವು ಧರಿಸಿರಲು ೧೨

ಪಟ್ಟೆ ಪೀತಾಂಬರ ನೆರೆಹಿಡಿದುಡಿ ಸೀರೆ
ದಿಕ್ಕುಗಳೆಲ್ಲಾ ಝುಗಝುಗಿಸೆ
ಅರ್ಥಿಯಲಿ ಅತಿ ಸೂಕ್ಷ್ಮದಲಿ
ಮರೆವ ವಿಚಿತ್ರದವಲ್ಲಿಯ ಹೊದಿಯುತಲಿ ೧೩

ಎಳೆ ತಳಿರಂದದಿ ಥಳಥಳಿಸುವ
ಪಾದಕೆ ಪಾದುಕೆಗಳ ಧರಿಸುತಲಿ
ಥಳಥಳಿಪ ರಥದೆಡೆಗೆ
ನಳಿನಾಕ್ಷನು ನಡೆ ತರಲಾಗ ೧೪

ಛತ್ರಿ ಚಾಮರ ವ್ಯಜನ ಪತಾಕೆಯು
ಜತ್ತಿಲಿ ಪಿಡಿಯುತ ಬರುತಿರಲು
ವಿಪ್ರರ ವೇದ ಘೋಷಣೆಯಿಂದ
ಮುತ್ತೈದೆಯರು ಸಹ ನಡೆತರಲು ೧೫

ಕಲಶ ಕನ್ನಡಿ ಎಡಬಲದಲಿ ಬಹು
ಸುಲಲಿತ ಮುತ್ತೈದೆಯರು ಪಿಡಿದು
ಅಡಿಗಡಿಗೆ ವಂದಿಸುತಾ ಬಹು
ಸಡಗರದಿಂದಲಿ ನಡೆತರಲು ೧೬

ತಾಳಮೇಳದವರೆಲ್ಲರು ಪೊರಟರು
ಶ್ರೀಲೋಲನ ರಥ ಮುಂಗಡೆಯಲಿ
ಯಾಚಕರೂ ಗಾಯಕರೂ
ಕೋಟಿ ಸಂಖ್ಯೆಯಲಿ ಬರುತಿರಲು ೧೭

ಜಯ ಹರಿ ಕೃಷ್ಣ ಜಯ ಹರಿ ಕೃಷ್ಣ
ಜಯ ಪರಾಕೆನ್ನುವ ಭಟರು
ಸರಸದಲಿ ಹರಿಯಿರಲು
ದೊರೆಗಳು ಮುಂಗಡೆ ಬರುತಿಹರು ೧೮



ಆಗ ನುಡಿದನು ಅಪರಾಧಂಗಳ ಕ್ಷಮಿಸೆಂದು ಬೇಡುತಲಿ
ಈ ವೈಭವವ ನೋಡಿ ದೇವತೆಗಳತಿಶಯದಿ
ದೇವ ಮಂದಾರ ಪಾರಿಜಾತದ ಮಳೆ ಕರೆಯೆ
ದೇವದುಂದುಭಿಗಳು ಮೊಳಗಿದವು ಕ್ಷಣದಿ
ದೇವಗಂಧರ್ವರು ಶ್ರೀ ಹರಿಯ ಸಿರಿ ಮುಡಿಗೆ
ಹೂವಿನ ಮಳೆ ಸುರಿಸುತ್ತಿರಲಾಗ ಸಂಭ್ರಮದಿ
ದೇವಪ್ಸರರು ನೃತ್ಯಮಾಡಿ ಶ್ರೀಹರಿಯನು ಹೀಗೆಂದು
ಕೊಂಡಾಡಿ ಪಾಡುವದು ಮತ್ತೇನೆಂದರೆ

ಸುರಿದರು ಪುಷ್ಪಮಳೆ ಸುರಸುಂದರಿಯರೆಲ್ಲ ಪ

ಪುರುಷೋತ್ತಮ ಹರಿ ಕೇಶವ
ಕರುಣಾಕರ ಮುರವೈರಿಯೆ
ತ್ವರಿತದಿ ಭಕ್ತನ ಕಾಯ್ದನೆ
ದುರಿತಗಳ ತರಿ ಎನ್ನುತ ೧

ಮರುಗ ಸುರ-ಹೊನ್ನೆಗಳು
ಸುರಗಿ ಜಾಜಿ ಪಾದರಿಯು
ಸುರಲೋಕದ ಪಾರಿಜಾತ
ಪರಿಪರಿಯ ಪುಷ್ಪಂಗಳು ೨

ಕಮಲನಾಭ ವಿಠ್ಠಲನಿಗೆ
ಕಮಲ ಮುಖಿಯರು ಬೇಗ
ಶ್ರಮಪರಿಹರಿಸುತ ಮಮ ಹೃ-
ತ್ಕಮಲದೊಳು ನಿಲ್ಲೆನುತ ೩

**ವಚನ**

ಹೀಗೆಂದು ದೇವದೇವೋತ್ತಮನ ಕೊಂಡಾಡಿ
ಗಾನ ಮಾಡುತ ಹರಿಗೆ ಆರತಿಯ ಮಾಡುವ ಬಗೆ

ಸುರಮುನಿ ವಂದ್ಯನೆ ದುರಿತ ವಿದೂರನೆ
ಮರೆಯಬೇಕೆನ್ನಪರಾಧಗಳ ೪

ಕಮಲಾಕ್ಷನೆ ರಕ್ಷಿಸು ಗಂಧರ್ವನ
ಸಮರಹಿತನೆ ಪ್ರಾರ್ಥಿಪೆ ನಿನ್ನ
ಕಮಲನಾಭ ವಿಠ್ಠಲ ದಯಮಾಡಿ
ಶ್ರಮ ಬಿಡಿಸುತ ನಿನ್ನ ಸೇವಕರ ೫

## ವಚನ

ಮುರವೈರಿ ಹರಿಕೃಷ್ಣ ಕೇಶವ ದಾಮೋದರನೆ
ಮಾಧವ ಜನಾರ್ದನನೆ ಮಧುಸೂದನನೆ ದೇವ
ವೇದವೇದ್ಯನೆ ಮದನ ಮೊಹನಾಕಾರನೆ
ಶ್ರೀಧರನೆ ಸಿಂಧು ಶಯನನೆ ಶ್ರೀಮುಕುಂದನೆ
ದೇವಕೀ ನಂದನನೆ ಧೇನುಕಾಸುರ ಹರನೆ
ಗೋವರ್ಧನೋದ್ಧಾರಿ ಗೋಪಕುವರನೆ ಸ್ವಾಮಿ
ನಿತ್ಯತೃಪ್ತನೆ ನಿಗಮವೇದ ವೇದ್ಯನೆ ದೇವ
ರುಕ್ಮಿಣಿ ರಮಣನೆ ಶ್ರೀಲತಾಂಗಿಯ ರಮಣ
ನೀನೊಲಿದರೀಗೆನ್ನ ಗಂಧರ್ವನನು ಉಳುಹು
ಎಂದೆನಲು ಶ್ರೀಕೃಷ್ಣ ಮಂದಹಾಸದಿ ನಗುತ
ಹೊಂದಿಸಿಡು ರುಂಡ ಮುಂಡಗಳ ಪಾರ್ಥನೆ ಎನಲು
ಹರಿಯು ನುಡಿದಂದದಲಿ ನಡಿಸಿದನು ಫಲ್ಗುಣನು
ಮುರವೈರಿ ಕರುಣಾಕಟಾಕ್ಷದಿಂದೀಕ್ಷಿಸಲು
ಚಿತ್ರರಥ ಮೈ ಮುರಿದು ಎದ್ದು ಕುಳಿತಿರಲಾಗ
ಪಾಂಡವರು ಉಳಿದ ಮಂದಿಗಳೆಲ್ಲ ನೋಡುತ್ತ
ಹರುಷದಿಂದಲಿ ಮೈ ಮರೆತು ದೇವನ ಸ್ತುತಿಸೆ
ಸುರಪತನಯನು ಹರಿಯ ಪಾದಗಳ ಬಿಗಿದಪ್ಪಿ
ಕಂಗಳುದಕದಿ ಹರಿಯ ಪಾದಂಗಳ ತೊಳೆಯುತ್ತ
ತೊದಲು ನುಡಿಯಿಂದ ಹರಿಯ ಸ್ತೋತ್ರ ಮಾಡುತಲಿರಲು
ನೋಡಿ ಶ್ರೀಹರಿ ಪಾರ್ಥನನೆಬ್ಬಿಸುತ ಸಂತೈಸೆ



ಪೃಥುವಿಯು ಧಿಂದಿಮಿಕೆನ್ನುವ ತೆರದೊಳು
ರಥಿಕರು ಮುಂದೋಡುತ ಬರಲು
ಅತಿಶಯದಿ ಅಶ್ವಸವಾ–
ರರು ಮುಂದೋಡುತ ಬರುತಿರಲು ೧೯

ಅಂಬರದಲಿ ಸುರರೆಲ್ಲ ವಿಮಾನದಿ
ಬಂದು ನೆರೆದರಾ ಕಾಲದಲಿ
ಎಂದಿಗು ಈ ವಿಚಿತ್ರವನು
ಕಂಡವರಲ್ಲ ನಾವೆಂದೆನುತ ೨೦

ಹರಿಪಾರ್ಥರ ಸಮರವು ನೋಡಲು ಬಲು
ಪರಮ ಆಶ್ಚರ್ಯವು ಎನುತ
ಹರುಷದಲಿ ಗಗನದಲಿ
ಸುರಸುಂದರಿಯರು ನೆರೆದಿರಲು ೨೧

ಬಂದರು ಪಾರ್ಥನ ಬಳಸುತ ರಥಿಕರು
ನಿಂದರು ತಮ ತಮ ಕಾರ್ಯದಲಿ
ವಂದಿಸುತ ಭಕ್ತಿಯಲಿ
ನಿಂದಿರಲಾಕ್ಷಣ ನೋಡಿದನು ೨೨

ಬಾರೈ ಫಲ್ಗುಣ ತೋರೈ ಶೌರ್ಯವ
ಮೀರಿದ ಕಾರ್ಯವ ಮಾಡಿರುವೆ
ವೀರನು ನೀನಾದರೆ ಈ
ಕಾರ್ಯದಿ ಶೌರ್ಯವ ತೋರೆನಲು ೨೩

ಧರ್ಮಜ ನುಡಿದನು ಸಮರವು ಸಲ್ಲದು
ವಂದಿಸುತ ಕೇಶವಗೆನುತಿರಲು
ಹಿಂದೆಯೆ ಭೀಮನು ನುಡಿದ
ಸಮರವೆ ನಡಿಯಲಿ ಎಂದೆನುತ ೨೪

ಕಮಲದಳಾಕ್ಷನು ಕಡುಗಲಿ ಭೀಮನ
ನುಡಿಯನು ಕೇಳುತ ತಕ್ಷಣದಿ
ಶರಗಳನು ಹೂಡಿದ ಶ್ರೀ–
ಕಮಲನಾಭ ವಿಠ್ಠಲ ಒಲಿದು ೨೫

## ವಚನ

ಹೀಗೆ ಧರ್ಮಜನು ಯುದ್ಧವು ಬೇಡೆಂದೆನಲು
ಮರುತಾತ್ಮಜನು ಯುದ್ಧವು ನಡೆಯಲೆಂದೆನಲು
ಕೇಳಿ ನಸುನಕ್ಕು ಶ್ರೀಹರಿಯು ಮಾತಾಡಿದನು
ಈಗ ಯುದ್ಧವು ಬಿಟ್ಟುಬಿಡು ಎನೆ ವೈರಿಯನು
ಕಾಪಾಡುವೆನು ನಿನ್ನ ಎನಲು ಫಲ್ಗುಣ ನುಡಿದ
ಶರಣ ಹೊಕ್ಕವರನ್ನು ಪೊರೆಯದಿರೆ ಅಪಕೀರ್ತಿ
ತಡೆಯದಲೆ ಬಂದೊದಗುವದು ಕೇಳು ಶ್ರೀಕೃಷ್ಣ
ಅದರಿಂದ ನಾನೀಗ ಯುದ್ಧ ಮಾಡಲಬೇಕು
ಜಯವು ಅಪಜಯವು ನಿನ್ನನು ಕೂಡಿಹುದೊ ಸ್ವಾಮಿ
ನಿನ್ನೊಡನೆ ಯುದ್ಧವನು ಮಾಡಲು ನೀನೆ ಪ್ರೇರಕನೊ
ಹೀಗಿರುವ ಕಾಲದಲಿ ವೈರಿಯನು ಬಿಡಲಾರೆ
ಯುದ್ಧವೇ ನಡೆಯಲೆಂದನಲು ಶ್ರೀ ಹರಿ ನುಡಿದ
ಹುಡುಗ ಬುದ್ಧಿಯು ಬೇಡ ಬಿಡು ಎನ್ನ ವೈರಿಯನು
ಹೀಗೆನಲು ಶ್ರೀ ಹರಿಯು ಫಲ್ಗುಣನು ಕೇಳದಲೆ
ಬೆನ್ನಲಿಹ ಬತ್ತಳಿಕೆಯೊಳು ವೈರಿಯನು ಇರಿಸಿ
ನಿಂತ ಹರಿ ಪಾರ್ಥರಿಬ್ಬರು ಯುದ್ಧ ಮಾಡುತ ಹರುಷದಿ
ಹರಿ ಪಾರ್ಥರು ನಿಂತರು ಹರುಷದಲಿ
ಸುರರಂಬರದಲಿ ನೋಡುತಲಿರಲು
ಸುರಿದರು ಬಾಣಗಳನು ಸರಸದಲಿ
ಹರಿಚರಣಗಳಿಗೆ ವಂದಿಸುವಂದದಿ
ಪರಮ ಭಕುತಿಯಲಿ ಪ್ರಥಮ ಬಾಣವ ಬಿಡೆ
ನೋಡಿದ ಶ್ರೀಹರಿ ಪಾರ್ಥನ ಬಾಣವ
ಹೂಡಿದ ಬಾಣವ ಆಶೀರ್ವದಿಸುತ



ದೇವಪ್ಸರ ಸ್ತ್ರೀಯರು ಗಾನದಿ ನೃತ್ಯದಿ
ದೇವನ ಪೊಗುಳುತಿರೆ
ದೇವಲೋಕದ ಪಾರಿಜಾತ ಕುಸುಮ ಮಳೆ
ದೇವ ಕಮಲನಾಭವಿಠ್ಠಲಗೆ ಸುರಿಸಲು ಬಂದ ೫

## ಕಂದ

ತಡಿ ತಡಿ ತಡಿ ತಡಿ ಫಲ್ಗುಣಾ
ದುಡುಕುವದೇತಕ್ಕೆ ನಾನಿರುತಿರಲು
ಬಿಡು ಬಿಡು ಅಗ್ನಿ ಪ್ರವೇಶವಾ
ಸಡಗರವೇನಿದು ಸರಿಯಲ್ಲವು ಪಾರ್ಥ

## ಆರ್ಯ

ಏನಿದು ಸಾಹಸ ಫಲ್ಗುಣಾ ಬಿಡು ಬಿಡು
ಏನು ನಿನ್ನ ಮನದಿಷ್ಟಗಳು
ಮೌನವ ಬಿಡುತಲಿ ಪೇಳೆನ್ನೊಡನೆ
ಸಾನುರಾಗದಲಿ ನಡೆಸುವೆನು ೧

ಹರಿಧ್ಯಾನದಿ ಪರವಶನಾಗಿಹ
ವರಪಾರ್ಥನು ಕಂಗಳ ತೆರೆದು
ಹರಿಯನು ಕಾಣುತ ಪರಮ ಸಂಭ್ರಮದಿ
ಸಿರಬಾಗುತ ವಂದನೆ ಮಾಡಿ ೨

ಕಂಗಳುದಕದಿ ಪಾದಂಗಳ ತೊಳೆಯುತ
ಕಂಗಳು ದಣಿಯೆ ದೇವನ ನೋಡಿ
ಶೃಂಗಾರ ರೂಪನ ಚರಿತೆಯ ಪೊಗಳುತ
ಮಂಗಳ ಮಹಿಮನ ಕೊಂಡಾಡಿ ೩

ಹರಿ ಶ್ರೀ ಕೃಷ್ಣನೆ ಅಚ್ಯುತ ಮಾಧವ
ಶರಣಾಗತ ರಕ್ಷಕದೇವ

ಪಿಡಿದವರು ದಡ ದಡ ಬರುತಿರೆ
ಸಡಗರದಲಿ ಬಿರದ್ಹೊಗಳುವ ಭಟರುಗಳು
ತ್ವರಿತದಿ ಓಡುತ ಬರುತಿರಲು
ಕಡಲಶಯನ ಹರಿ ಕಡು ತ್ವರಿತದಿ ಬಂದ
ತಡಮಾಡದೆ ಧೃಡ ಭಕುತನಿದ್ದೆಡೆಗೆ ೨

ನೀಲವರ್ಣನು ಕೋಮಲಕಾಯನು
ಮೇಘಶಾಮಲನು ಪ್ರೇಮದಿ ಭಜಿಸಿದ
ಕಾಮಿನಿ ದ್ರೌಪದಿಗಕ್ಷಯ ನೀಡಿದನು
ಕಾಮನ ಪಿತ ತನ್ನಾರಾಧಕರನು
ಕ್ಷೇಮದಿ ಪೊರೆಯುವನು
ಕಾಮಧೇನು ಬಂದಂತೆ ಭಕ್ತನ
ಸಾನುರಾಗದಿ ರಕ್ಷಿಸಲೋಸುಗ ಬಂದ ೩

ವರದಾಯಕ ಹರಿ ಪರಿ ಪರಿ ಭಕುತರನು
ಕರ ಪಿಡಿಯುತ ಉದ್ಧರಿಸಲು ನೆಲಸಿಹನು
ಕರಿರಾಜನ ಮೊರೆ ತ್ವರಿತದಿ ಲಾಲಿಸಿ
ರಕ್ಷಿಸಿ ಪೊರೆದಿಹನು
ಕರುಣಾಕರ ಹರಿ ಶರಣರಿಗಭಯವ
ವರಹಸ್ತವ ತೋರುತ ಮೆರೆಯುವನು
ಪರಮಭಕ್ತನ ಪೊರೆಯುವ ಭರದೊಳು
ಕರುಣಾಕರ ಹರಿ ತ್ವರಿತದಿ ಬರಬರುತ
ಸುರರೊಡೆಯನು ಸುಂದರ ಶಾಮಲನು
ವರಲಕ್ಷ್ಮಿಯ ಒಡನಾಡುತ ಹರುಷದಿ ಬಂದ ೪

ದೇವಲೋಕದಿ ದೇವದುಂದುಭಿಗಳು
ಮೇರೆ ಇಲ್ಲದೆ ಮೊಳಗೆ
ದೇವನಾರಿಯರೆಲ್ಲ ಹೂವಿನ ಮಳೆ ಕರೆಯೆ
ದೇವಗಂಧರ್ವರು ಗಾನವ ಮಾಡುತಿರೆ



ಗಾಡಕೆ ಸಿರಸಿನ ಮೇಲ್ಗಡೆ ಬಿಡುತಿರೆ
ಈ ತೆರದಲಿ ಬಾಣದ ಮಳೆಗರೆಯಲು
ನೀತಿಯಿಂದ ಕತ್ತರಿಸೆ ಮಧ್ಯದಲಿ
ಆಗ ಪಾರ್ಥ ಯೋಚಿಸಿ ಮನದೊಳಗೆ
ಬೇಗದಿ ಶುದ್ಧಾಚಮನವ ಮಾಡಿ
ಅಸ್ತ್ರದೇವತೆಗಳ ಸ್ಮರಿಸಿದ ತಾನು
ಭಕ್ತಿಲಿ ಹರಿಯನು ವಂದಿಸಿ ಮನದಿ
ಬಿಟ್ಟನು ಬಾಣವ ನಿಷ್ಫಲವಾಗಲು
ಅಸ್ತಮಾನ ಸಮಯವಾದುದು ನೋಡಿ
ಚಿತ್ರರಥನ ಸಿರ ಕತ್ತರಿಸುತಲಿ
ಮತ್ತೆ ತನ್ನ ಸೈನ್ಯವ ಹಿಂದಿರುಗಿಸಿ
ಯಾದವರೆಲ್ಲರ ಒಡಗೂಡುತಲಿ
ದ್ವಾರಕಾಪುರಕೆ ಹೊರಡುತಲಿರಲು
ನೋಡುತ ನಾರದರೋಡತ ಬರುತಲಿ
ಗಾಡನೆ ನುಡಿದರು ಪಾರ್ಥನ ನೋಡಿ
ಗಾಡಿಕಾರ ಶ್ರೀಕೃಷ್ಣನು ತೆರಳಿದ
ಕಾರಣವೇನೆನುತಲಿ ಕೇಳಲು
ರೂಢಿಗೊಡೆಯ ಶ್ರೀ ಕಮಲನಾಭ ವಿ–
ಠ್ಠಲನ ಸ್ಮರಿಸಿ ವಂದಿಸಿ ಮನದೊಳಗೆ

ಚಿತ್ರರಥನ ಶಿರ ಕತ್ತರಿಸಿರಲು
ರಕ್ತಧಾರೆಯಂ ನೋಡುತ ತ್ವರದಿ
ಒತ್ತಿ ನುಡಿದರು ನಾರದರೀಪರಿ
ವ್ಯರ್ಥವಾಯಿತು ನಿನ್ನ ವಚನಗಳು ೧

ಭ್ರಷ್ಟನಾದಿ ನೀನೆನ್ನುತಲಿರಲು
ಆಶ್ಚರ್ಯವ ಹೊಂದಿದ ಪಾರ್ಥ
ಮತ್ತೆ ರುಂಡ ಮುಂಡಗಳನೆ ನೋಡುತ
ಚಿತ್ರ ಪ್ರತಿಮೆಯಂತಿರೆ ಪಾರ್ಥ ೨

ಸುರಪನ ಸುತನಣ್ಣನು ಪೇಳಿದನು
ಸರಸದಿ ಅಗ್ನಿಪ್ರವೇಶಿಸೆನೆ
ತರಿಸುವೆ ಅಗ್ನಿಪ್ರವೇಶಕೆ ಸಾಧನ
ವರ ಕಮಲನಾಭ ವಿಠ್ಠಲ ಒಲಿವ ೩

### ವಚನ

ಹೀಗೆನುತ ಅಗ್ನಿ ಪ್ರಜ್ವಲಿಸುವಂದದಿ ಮಾಡಿ
ಆಗ ಭೀಮನು ನುಡಿದ ಅಂಜದಿರು ಫಲ್ಗುಣನೆ
ಬೇಗದಿಂದಲಿ ಅಗ್ನಿ ಪ್ರವೇಶಿಸಿ ತಕ್ಷಣದಿ
ನಾಗಶಯನನು ಪ್ರೀತನಾಗಲೆಂದೆನುತ
ಯೋಗಿವಂದ್ಯನ ಮನದಿ ಧ್ಯಾನಿಸುತ ಭಕ್ತಿಯಲಿ
ಸಾಗರಜಾಪತಿ ಪ್ರೀತನಾಗಲೆಂದೆನುತ ಸ್ಮರಿಸಿ
ಬೇಗ ಸ್ನಾನವ ಮಾಡು ಶುಭ್ರ ವಸ್ತ್ರವ ಧರಿಸು
ಈಗ ವಂದಿಸುತ ಹಿರಿಯರನುಮತಿಯ ಪಡೆ ಎನಲು
ಕೇಳಿ ಫಲ್ಗುಣ ಅಣ್ಣ ಪೇಳಿದಂದದಿ ನಡಸಿ
ದ್ವಾರಕಾನಾಥನನು ಭಕ್ತಿಯಿಂದಲಿ ಸ್ಮರಿಸಿ
ಬೇಗ ಅಗ್ನಿಗೆ ಪ್ರದಕ್ಷಿಣೆ ಮಾಡಿ ಕೈಮುಗಿದು
ಕಂಗಳನು ಮುಚ್ಚಿ ಶ್ರೀ ಕಮಲನಾಭ ವಿಠ್ಠಲನೆ
ರಕ್ಷಿಸು ರಕ್ಷಿಸೆಂದೆನುತ ಸ್ತೋತ್ರ ಮಾಡುತಲಿದ್ದನು

### ಆರ‍್ಯ

ನೋಡುತ ನಾರದರಲ್ಲಿಯೆ ನಿಂತರು
ಪಾಡುತ ಹರಿ ಕೀರ್ತನೆಗಳನು
ಕೂಡಿದ ಜನರೆಲ್ಲರು ಹಾಹಾ ಎನೆ
ಗಾಡದಿ ಬಂದರು ಹರಿ ಬಳಿಗೆ ೧

ಕೃಷ್ಣ ಕೃಷ್ಣ ಕಾಪಾಡು ಪಾರ್ಥನ
ಕಷ್ಟವು ನೋಡಲು ಅಸದಳವು
ನಷ್ಟಪಡಿಸುವರೆ ನಿನ್ನಯ ಬಿರುದನು
ಭಕ್ತವತ್ಸಲನಲ್ಲವೆ ದೇವ ೨



ನಡಿ ನಡಿ ಕೃಷ್ಣ ನಿನ್ನಡಿಗಳ ಧ್ಯಾನಿಸಿ
ಸಡಗರದಿಂದಗ್ನಿ ಪ್ರವೇಶಿಸುವ
ಬಿಡಿಸಿ ರಕ್ಷಿಸು ಕಮಲನಾಭ ನಿನ್ನ
ಅಡಿಗಳ ಸೇವಕನೆಂದೆನಲು ೩

### ವಚನ

ನಾರದರ ನುಡಿ ಕೇಳಿ ನಾರಾಯಣನು ತನ್ನ
ಸೇನೆಯಲ್ಲವು ಕಳುಹಿ ದ್ವಾರಕಾಪಟ್ಟಣಕೆ
ವೈನತೇಯರ ಸ್ಮರಿಸೆ ಬಂದನಾಕ್ಷಣದಲ್ಲಿ
ಬೇಗ ಗರುಡನ ಏರಿ ದ್ವಾರಕಾಪತಿ ತಾನು
ಕಡುತ್ವರದಿ ಬರುತಿರಲು ಸುರರೆಲ್ಲ ಪೊಗಳುತಿರೆ
ದೇವಲೋಕದ ಪಾರಿಜಾತ ಕುಸುಮವ ತುಂಬಿ
ದೇವನಾರಿಯರು ಹೂವಿನ ಮಳೆಯ ಹರುಷದಲಿ
ದೇವ ದೇವೋತ್ತಮನ ಸಿರದಲಿ ಸುರಿಸುತಿರೆ
ದೇವಗಂಧರ್ವರು ಗಾನದಿಂ ಪೊಗಳುತಿರೆ
ಸಾಗಿ ಬಂದನು ಹರಿಯು ಪಾರ್ಥನ ನೋಳ್ಪ ತವಕದಿಂದ

ಬಂದಾ ಆನಂದ ಗೋವಿಂದ ಮುಕುಂದನು ಪ

ಬಂದ ಬಂದ ಸುರವಂದಿತ ದೇವನು
ಮಂದ ನಗೆಯ ಮುಖದಿಂದ ಶೋಭಿಸುತಲಿ ಅ.ಪ

ಕೆದರಿದ ಕೇಶವು ಚದುರಿದ ನಾಮವು
ಹೃದಯದಿ ಹಾರವು ಶೋಭಿಸುತ ಮುತ್ತಿನ ಹಾರವು
ಪದಕಗಳೆಲ್ಲವು ವಿಧವಿಧ ಹಾರಗಳೆಲ್ಲವು ಶೋಭಿಸುತ
ಜರದ ವಲ್ಲಿಯು ಜಾರುತಿರಲು ತ್ವರಿತದಿ ಬರಬರುತ
ಕರದ ಕಂಕಣ ಘಲುಘಲುರೆನ್ನುತಿರೆ
ತರಳರ ಪೊರೆಯಲು ಬಂದ ತೆರೆದವೊಲ್ ೧

ಎಡಬಲದಲಿ ಚಾಮರಗಳನೆ ಪಿಡಿದವರು
ಹಿಂದೋಡುತ ಬರೆ ಮುದದಲಿ ಶ್ವೇತಛತ್ರಿಯ

ಗತಿ ಶ್ರೀಪತಿಯೆ ರಕ್ಷಕನೆನುತಲಿ
ಸ್ತುತಿಸುತ ಭಕ್ತಿಯಲಿ ೧೧

ಇಬ್ಬರು ಹೊರಟರು ಯಮುನಾ ನದಿ ಬಳಿ
ಹಬ್ಬಿರುವ ವೃಕ್ಷವನೆ ಕಂಡು
ಕೊಬ್ಬಿಳಿದ ಗಂಧರ್ವನ ನೋಡಿ
ಉಬ್ಬಿಲೆ ನುಡಿದನು ೧೨

ಚಿತ್ರರಥ ಈ ವೃಕ್ಷವನೇರಿ
ಸುತ್ತ್ಯಾರಾದರು ಬರುವರೊ ನೋಡಿ
ಮತ್ಯಾರಾದರು ಅರಿಯದ ಹಾಗೆ
ಹತ್ತಿರದಲಿ ಕೂಡೆಂದ ೧೩

ನಾರಿಯರೆಲ್ಲ ನದಿಯ ಸ್ನಾನಕೆ
ದೂರದಿ ಬರುತಿಹರೆನ್ನುತ ಪೇಳಲು
ನಾರದರೀ ಪರಿ ಪೇಳಿದರಾಗ
ಮೌನದಿ ಕೂಡೆಂದು ೧೪

ಕರಚಪ್ಪಾಳೆಯ ನೀಡುವೆನು ನಾನು
ಮರದಿಂದಿಳಿದು ಬರುತಲಿ ಸ್ತ್ರೀಯರೊ-
ಳ್ಹಿರಿಯಳ ಪಾದವ ಪಿಡಿಯುತ ಬೇಡೂ
ಕರಣಿಪುದೆಂದೆನುತಾ ೧೫

ಕರುಣದಿ ನಿನಗೆ ಅಭಯವ ಕೊಡುವಳು
ತ್ವರಿತದಿ ಕರೆದೊಯ್ವಳು ತನ್ನ ಮನೆಗೆ
ದುರಿತವ ತಪ್ಪಿಸಿ ಕಾಪಾಡುವಳು
ಸರಿಮಾಳ್ಪೊಳು ಕಾರ್ಯ ೧೬

ಕರುಣಾಕರನೆ ರಕ್ಷಿಸು ಎನ್ನುತ
ಮರದಡಿ ಕುಳಿತು ನಾರದರೀಪರಿ

ವರದ ಶ್ರೀ ಕಮಲನಾಭ ವಿಠ್ಠಲನ
ಸ್ಮರಿಸುತ ಕ್ಷಣಕ್ಷಣಕೆ ೧೭

## ಆರ‍್ಯ

ಬಂದರು ನಾರಿಯರೆಲ್ಲರು ಭರದೊಳು
ನಿಂದರು ನದಿಯಲಿ ಸ್ನಾನವು ಮಾಡೆ
ಮುಂದೆ ಪುರೋಹಿತರಿಲ್ಲವು ಹ್ಯಾಂ–
ಗೆಂದು ಹಲಬುತಿರೆ ನಾರಿಯರು ೧

ಸ್ನಾನವು ಮಾಡಲು ಸಂಕಲ್ಪವು ಪೇಳುವ–
ರಿನ್ಯಾರಿಹರೆನುತ ಚಡಪಡಿಸೆ
ಮೌನದಿ ಕುಳಿತಿಹ ನಾರದರಡಿಗೆ
ಸಾನುರಾಗದಲಿ ನಮಿಸಿದರು ೨

ಸಂಕಲ್ಪವು ಪೇಳಲು ಬೇಕೆನ್ನಲು
ಕಂಸಾರಿಯ ಪಾದ ಸ್ಮರಿಸುತಲಿ
ಹಂಸವಾಹನ ಪಿತ ಕಮಲನಾಭ
ವಿಠ್ಠಲನನು ಸ್ಮರಿಸುತ ಪೇಳಿದನು ೩

## ವಚನ

ಕೃಷ್ಣ ಕೃಷ್ಣ ಹರಿ ಕೃಷ್ಣ ಕೃಷ್ಣ ಎನುತ
ಕೃಷ್ಣನ ತಂಗಿ ಸುಭದ್ರೆಯ ಮುಖ ನೋಡಿ
ಸ್ಪಷ್ಟವಾಗಿ ಪೇಳ್ವೆ ಸಂಕಲ್ಪವೆಂದೆನುತ
ತಟ್ಟನೆ ನದಿಯೊಳು ಮುಳುಗೇಳುತ ನೀವು
ಜತ್ತಾಗಿ ಕೈ ಮುಗಿದು ಭಕ್ತಿಯಿಂದಲಿ ಕೇಳಿ
ಸತ್ಯವಾದ ಸಂಕಲ್ಪ ಪೇಳುವೆನು ನಾನೆಂದೆನಲು

ಮುಳುಗಿ ಕೈ ಮುಗಿದು ನಿಂತರು ಬೇಗ ಬಹು
ವಿನಯದಿ ಬೇಡಿಕೊಂಡರು ಆಗ ೧

ಮುದದಿಂದಲಿ ಆ ಮುನಿಯ ಪಾದಕೆ
ಎರಗಿ ಕೇಳಿದರು ೫

ಗತಿಯೇನಿನ್ನು ಪೇಳಿರಿ ಮುನಿಗಳೆ
ಹಿತ ಪೇಳುವರೊಬ್ಬರನು ಕಾಣೆ
ಸತಿಯರು ಪೇಳಲು ಪತಿ ಬಂದೆರಗಿದ
ಯತಿಗಳ ಪಾದದಲಿ ೬

ಬಂದು ಮುನಿಯ ಪಾದವ ಪಿಡಿದು
ವಂದಿಸಿ ನಮಿಸುತ ಭಯ ಭಕ್ತಿಯಲಿ
ಬಂದ ಭಯಕೆ ಕಾರಣಗಳನು
ಚಂದದಿ ಕೇಳಿದರು ೭

ಚಿತ್ರರಥ ನೀ ಸತ್ತೆಯೋ ಎನುತ
ವ್ಯರ್ಥವಾಯಿತು ನಿನ್ನ ಗಾನವು
ಮತ್ತೇನಿದಕೆ ಯೋಚಿಸುತಿರುವಿ
ಸತ್ಯದಿ ನುಡಿಯೆಂದ ೮

ನೀವಲ್ಲದೆ ರಕ್ಷಕರಿನ್ಯಾರು
ಸಾವಧಾನದಿ ಪೇಳಿರಿ ಗುರುಗಳೆ
ಯಾವ ಪರಿಯಲ್ಲಾದರು ರಕ್ಷಿಸ
ಬೇಕೆಂದೆನುತಿರಲು ೯

ದಡದಡನೆ ಕಣ್ಣೀರನು ಸುರಿಸುತ
ಗಡಗಡ ನಡಗುತ ಭಯಪಡುತಿರಲು
ಬಿಡು ಚಿಂತೆಗಳ ರಕ್ಷಿಪ ಶ್ರೀ ಹರಿ ಎ–
ನ್ನೊಡನೆ ಬಾರೆನಲು ೧೦

ಸತಿಯರನೆಲ್ಲಾ ಕಳುಹುತ ಪುರಕೆ
ಅತಿಭಕ್ತಿಲಿ ನಿಂದಿರಲದ ನೋಡಿ



## ಆರ್ಯ

ಬಂದರಾಗ ಬಹುಚಂದದ ಸತಿಯರು ಆ–
ನಂದದಿಂದ ಮಾತಾಡುತಲಿ
ತಂದ ಜಲಗಳನು ಚಲ್ಲುತ ತವಕದಿ
ರಂಗವಲ್ಲಿಗಳ ಹಾಕುತಿರೆ ೧

ಇಂದಿಗೆ ಕಂಡೆನು ಇವರ್ಯಾರೆನುತಲಿ
ಮುಂದಕೆ ಬಂದಳು ಬೇಗದಲಿ
ಕಂದರ್ಪನ ಸತಿಯರಂದದಿ ಪೊಳೆಯುವ
ಸುಂದರಿಯರ ಕಾಣುತಲಾಗ ೨

ಚಂದದಿ ಅವರನು ಕೇಳುವೆನೆನುತಲಿ
ಸುಂದರಿಯರ ಬಳಿಯಲಿ ಬಂದು
ಮಂದಹಾಸ ನಗೆಯಿಂದ ಸರಸ್ವತಿಯು
ಚಂದಿರ ಮುಖಿಯರ ಕೇಳಿದಳು ೩

ಯಾರಮ್ಮ ಪೇಳಿರಿ ನೀವು ಯಾರಮ್ಮ ಪ

ನಾರಿಯರ ಮುಖವು ಮುಂಗಾರು ಮಿಂಚುಗಳಂತೆ
ತೋರ್ಪುದು ಥಳಥಳ ಹೊಳೆವ ಸುಂದರಿಯರೆ ಅ.ಪ

ರಂಭೆ ಊರ್ವಸಿಯಂತೆ ತೋರುವುದು ಬಹು
ಸಂಭ್ರಮ ಮನಕಾಗುತಿಹುದು ಕೇಳಿ
ಕಂಬು ಕಂದನರಸಿಯರಂತೆ ಕಾಣುವ
ಅಂಬುಜಾಕ್ಷಿಯರೆ ಮನದ್ಹಂಬಲ ಪೇಳಿರಿ ೧

ರತಿ ಶ್ಯಾಮಲೆಯರೆಂದು ತಿಳಿದೆ ನಿಮ್ಮ
ಅತಿ ಚಲ್ವಿಕೆಗೆ ಮನ ಮರೆದೆ ಕೇಳಿ
ಶಚಿ ಪಾರ್ವತಿಯರೆಂದು ಮತಿ ಭ್ರಮಿಸುತಲಿದೆ
ಹಿತದಿ ಪೇಳಿರಿ ನಿಮ್ಮ ಅತಿಶಯದ ವಾರ್ತೆಯ ೨

ಸರಸಿಜೋದ್ಭವನ ರಾಣಿಯನು ಪೋಲು–
ತಿರುವಂಥ ಮುಖದ ಭಾವವನು ನೋಡಿ
ಕರ ಜೋಡಿಸುತ ಬೇಡುತಿಹೆನು ಕರುಣವ ಮಾಡಿ
ಕಮಲನಾಭ ವಿಠ್ಠಲನ ಕರುಣದಿ ಪೇಳಿರಿ ೩

## ವಚನ

ಹೀಗೆ ನುಡಿಯುವ ಸರಸ್ವತಿಯ ನುಡಿಗಳ ಕೇಳಿ
ಬಾಗಿ ಸಿರವನು ವಂದನೆಯ ಮಾಡಿ ಭಕ್ತಿಯಲಿ
ಜೋಡಿಸುತ ಕರಗಳನು ಹೀಗೆ ಸ್ತೋತ್ರವ ಮಾಡಿ
ಕೊಂಡಾಡಿದರು ಹರುಷದಿಂದ

ಕೇಳಮ್ಮ ಎನ್ನ ಮಾತು ಸಾಧ್ವಿಯೇ ನಿನ್ನ
ಪಾದ ಸೇವಕರೆಲ್ಲ ನೀನರಿಯೆ ಪ

ಇಲ್ಲಿಗೇತಕೆ ಬಂದಿರಿ ನಿಮ್ಮ ಹರ್ಷ
ಸೊಲ್ಲು ಕೇಳಲು ಬಂದಿರುವೆವಮ್ಮಾ ೧

ನಿಮ್ಮ ಭೇಟಿಗೆ ನಿತ್ಯ ಬರುವೆವು ಕೇಳಿ
ನಿಮ್ಮ ಭೇಟಿಯು ನಮಗೆ ದುರ್ಲಭವು ೨

ಭೇಟಿಗೆನುತ ಬಂದು ನೀವೆಲ್ಲ ಕೇಳಿ
ಊಳಿಗ ಮಾಡುವುದಿದು ಸಲ್ಲ ೩

ನಮ್ಮ ಪಾಪವು ಕಳೆಯಲೋಸುಗ ಕೇಳಿ
ನಿಮ್ಮ ಸೇವೆಯು ಮಾಡಬೇಕೀಗ ೪

ಏನಿದು ಸೋಜಿಗ ಪೇಳಿರಿ ನಿಮ್ಮ
ಬಾಧಿಪ ಪಾಪವ ತೋರಿರಿ ೫

ಅತಿಶಯವಾಗಿಹ ಪಾಪವು ನಿಮ್ಮಂಥ
ಪತಿವ್ರತ ಸೇವದಿ ಪೋಪವು ೬



ಪಕ್ಷಿವಾಹನ ಪ್ರದ್ಯುಮ್ನನಿಗರ್ಪಿಸಿ
ಲಕ್ಷ ಪದಗಳ ಕ್ಷಿಪ್ರದಲಿ
ನಾರದರು

ಜಯ ಜಯ ಜಯವೆನ್ನುತ ಘ ಯೋಚನೆ ಮಾಡಿ
ಜಯಾಪತಿ ಸಂಕರ್ಷಣನ ರ್ಗಗಳು
ಮಹಿಮೆಯ ಪೊಗಳುತ ಪದ ಮನಸಿಗೆ ಬರಲು
ಅನಿಮಿಷೇಶನಿಗೆ ಅರ್ಪಿಸುತ ಕೆಂದು
ನು ಕಾಣಲು

ಶೇಷ ಶಯನ ಸರ್ವೇಶನ ಸ್ತು
ಸಾಸಿರ ನಾಮಗಳಿಂ ಭಜಿಸಿ
ವಾಸುದೇವನಿಗೆ ಅರ್ಪಿಸಿ ಲಕ್ಷ
ಭಾಸುರಾಂಗನನು ಪೂಜಿಸುತ ೧

ನಾರಾಯಣನನು ನಮಿಸುತ
ಬಾರಿಬಾರಿಗೂ ಪ್ರಾರ್ಥಿಸುತ
ಶ್ರೀ ರಮಣನಿಗರ್ಪಿಸಿ ಲಕ್ಷಕೆ ಪ
ನ್ಯೂನತೆಯಾಗಿರಲದ ಕಂಡು ೨

ಬೇಗದಿ ಪುತ್ರನ ನೋಡುತ ಧ
ಕೇಳ್ಳೈ ಕಂದ ಎನ್ನಯ ವಚನ
ನಾರದವಂದ್ಯನ ಗುಣಗಳ ಪ ತಲಿ
ಪೂರೈಸಿ ಪಂಚ ಲಕ್ಷಗಳ ೩

ಆ ನುಡಿ ಕೇಳುತಲಾಕುವರನ
ನೋಡುವೆ ಸಾಧ್ಯವೆ ಎನಗೆನ
ಪಾದಕೆ ನಮಿಸುತ ನಿಂದಿರಲ ಗೆ
ನೋಡುತ ಪೇಳಿದರೀ ನುಡಿ ೪

ಇಂದಿಗೆ ಸಾಧ್ಯವಿಲ್ಲದಿದ್ದರೂ
ನ್ನೊಂದು ಜನ್ಮದಲ್ಲಿದ್ದು ನಡಿ

ಎಂದೆನುತಲಿ ಪೇಳಿದರಾಗಲೆ
ಪುರಂದರ ದಾಸರು ಹರುಷದಲಿ ೭

ಪಂಚರೂಪಾತ್ಮಕನನು ಪೂಜಿಸಿ
ಪಂಚಲಕ್ಷ ಪಾದ ಕೊರತೆಯಲಿ
ಚಂಚಲ ಲಕುಮಿಯ ಪತಿಯನು ಧ್ಯಾನಿಸಿ ಅ-
ಚಿಂತ್ಯನ ಮಹಿಮೆಯ ಸ್ಮರಿಸುತಲಿ ೮

ಇನಿತು ತತ್ವಗಳ ಭೋದಿಸುತಲಿ
ಸಜ್ಜನರಿಗೆ ಸನ್ಮಾರ್ಗವ ತೋರಿ
ಕಮಲನಾಭ ವಿಠ್ಠಲನ ಪಾದಾಂಬುಜ
ಬಿಡದೆ ನಿರಂತರ ಧ್ಯಾನದಲಿ ೯

## ವಚನ

ಹೀಗೆನುತ ಶ್ರೀ ಗುರುಗಳನುಗ್ರಹದಿ ನುಡಿಸಿರುವ
ಭಾಗವತೋತ್ತಮರ ಚರಿತ್ರೆಗಳ ಹರುಷದಲಿ
ಪೇಳಿಸಿದರಿದನು ಶ್ರೀ ಹರಿಗುರುಗಳನುಗ್ರಹದಿ
ಕೇಳಿರೆಲ್ಲರೂ ಪುರಂದರದಾಸರಾಯರಿಗೆ
ಶ್ರೀಹರಿಯು ಒಲಿದು ಸರಸವಾಡುತ ನಿತ್ಯ
ನಲಿದಾಡುವುದ ನೋಡಿ ಹರುಷ ಪಡುತಿಹರೆಲ್ಲ
ದಾಸರೆಂದರೆ ಪುರಂದರ ದಾಸರೆ ಸತ್ಯ
ಈ ಪರಿಯಲಿ ಶ್ರೀಹರಿಯ ಒಲಿಸಿ ಕೊಂಡವರನ್ನು
ಈ ಪೃಥ್ವಿಯೊಳಗಾರ ಕಾಣೆನೆಂದೆನುತಿಹರು
ಕೋಪತಾಪಗಳವರ ಬಳಿಯ ಸೇರದೆ ಇಹವು
ತಾಪತ್ರಯಗಳಿವರ ಕಾಡದಲೆ ಇರುತಿಹವು
ಅಪಾರ ಮಹಿಮನ ದಯದಿಂದ ರೋಗಗಳು
ದಾಸರಾಯರ ಮುಂದೆ ಸುಳಿಯದಲೇ ಓಡುವವು
ಪಾಪ ಭೀತಿಗಳಿಲ್ಲ ಇವರ ಸ್ಮರಿಸುವ ಜನಕೆ
ತಾಪತ್ರಯಗಳಿಲ್ಲ ಇವರ ನಂಬಿದ ಜನಕೆ

ನೋಡಿ ಶ್ರೀಹರಿ ತಾನು ಅತಿ ಹರುಷದಿಂದಾಗ
ಅರ್ಘ್ಯ ಪಾದ್ಯಾಚಮನಗಳಿಂದ ಪೂಜಿಸುತ
ಷೋಡಶೋಪಚಾರಗಳ ಮಾಡಿ ಮುನಿವರರನ್ನು
ಕೂಡಿಸಲು ಉಚಿತಾಸನವನಿತ್ತು ಶ್ರೀ ಕೃಷ್ಣನ
ನೋಡಿ ನಾರದರಿನಿತು ಪ್ರಶ್ನೆ ಮಾಡುತಲಿರಲು
ಗಾಲವರು ಬಂದ ಕಾರಣವೇನು ಮುರವೈರಿ
ಹೇಳಬೇಕೆಂದೆನುತ ನುಡಿದ ನಾರದರಿಗೆ
ಪೇಳಿದನು ಶ್ರೀ ಹರಿಯು ಕೇಳಯ್ಯ ಸೋಜಿಗವ
ಅಸ್ತಮಾನದೊಳಗೆ ವೈರಿ ಸಿರ ಕತ್ತರಿಸಿ
ತಾನು ಮಾಡಿದ ಶಪಥ ಈಡೇರಿಸಲು ಕೇಳ್ದ
ಯಾವತ್ತು ವೃತ್ತಾಂತವೆಲ್ಲ ಪೇಳಲು ಕೇಳಿ
ನಾರದರು ಮಾತಾಡುವದು ಮತ್ತೇನೆಂದರೇ

## ಆರ್ಯ

ಸಣ್ಣದಾದ ಅಪರಾಧಕೆ ಈ ಪರಿ ಮ–
ಹೋನ್ನತ ಶಿಕ್ಷೆಯ ಮಾಡುವರೆ
ಚನ್ನವಲ್ಲ ಈ ಕಾರ್ಯ ಬಿಡು ಬಿಡು
ಎನ್ನಲು ಶ್ರೀ ಹರಿ ಕೇಳುತಲಿ ೧

ಆಡಿದ ಮಾತು ತಪ್ಪುವನಲ್ಲವು
ರೂಢಿಗೊಡೆಯ ರಾಮನ ವಚನ
ನೀಡಿಹೆ ಭಾಷೆಯ ತಪ್ಪಲಸಾಧ್ಯವು
ಮಾಡಿಯೆ ತೀರುವೆನೀ ಕಾರ್ಯ ೨

ಹೀಗೆ ಪೇಳಲು ನಾರದರೆದ್ದರು
ಹೋಗಿ ಬರುವೆನೆಂದೆನುತಾಗ
ಭಾಗೀರಥಿ ಪಿತ ಶ್ರೀಧ ಕಮಲನಾಭ
ವಿಠ್ಠಲಗೊಂದಿಸಿ ಭಕುತಿಯಲಿ ೩

ಸರಸಿಜೋದ್ಭವನ ರಾಣಿಯನು ಪೋಲು–
ತಿರುವಂಥ ಮುಖದ ಭಾವವನು ನೋಡಿ
ಕರ ಜೋಡಿಸುತ ಬೇಡುತಿಹೆನು ಕರುಣವ ಮಾಡಿ
ಕಮಲನಾಭ ವಿಠ್ಠಲನ ಕರುಣದಿ ಪೇಳಿರಿ ೩

## ವಚನ

ಹೀಗೆ ನುಡಿಯುವ ಸರಸ್ವತಿಯ ನುಡಿಗಳ ಕೇಳಿ
ಬಾಗಿ ಸಿರವನು ವಂದನೆಯ ಮಾಡಿ ಭಕ್ತಿಯಲಿ
ಜೋಡಿಸುತ ಕರಗಳನು ಹೀಗೆ ಸ್ತೋತ್ರವ ಮಾಡಿ
ಕೊಂಡಾಡಿದರು ಹರುಷದಿಂದ

ಕೇಳಮ್ಮ ಎನ್ನ ಮಾತು ಸಾಧ್ವಿಯೇ ನಿನ್ನ
ಪಾದ ಸೇವಕರೆಲ್ಲ ನೀನರಿಯೆ ಪ

ಇಲ್ಲಿಗೇತಕೆ ಬಂದಿರಿ ನಿಮ್ಮ ಹರ್ಷ
ಸೊಲ್ಲು ಕೇಳಲು ಬಂದಿರುವೆವಮ್ಮಾ ೧

ನಿಮ್ಮ ಭೇಟಿಗೆ ನಿತ್ಯ ಬರುವೆವು ಕೇಳಿ
ನಿಮ್ಮ ಭೇಟಿಯು ನಮಗೆ ದುರ್ಲಭವು ೨

ಭೇಟಿಗೆನುತ ಬಂದು ನೀವೆಲ್ಲ ಕೇಳಿ
ಊಳಿಗ ಮಾಡುವುದಿದು ಸಲ್ಲ ೩

ನಮ್ಮ ಪಾಪವು ಕಳೆಯಲೋಸುಗ ಕೇಳಿ
ನಿಮ್ಮ ಸೇವೆಯು ಮಾಡಬೇಕೀಗ ೪

ಏನಿದು ಸೋಜಿಗ ಪೇಳಿರಿ ನಿಮ್ಮ
ಬಾಧಿಪ ಪಾಪವ ತೋರಿರಿ ೫

ಅತಿಶಯವಾಗಿಹ ಪಾಪವು ನಿಮ್ಮಂಥ
ಪತಿವ್ರತ ಸೇವದಿ ಪೋಪವು ೬

## ಆರ‍್ಯ

ಈ ಪರಿ ಪೇಳಿದ ಶುಕಮುನಿ ವಚನವ
ಭೂಪಾಲನು ಕೇಳುತ ಮುದದಿ
ಶ್ರೀಕೃಷ್ಣ ಲೀಲಾಮೃತಸಾರವ
ಶ್ರೀಕಾಂತನ ದಯದಿಂ ಪೇಳುವದು ೧

ಎನಲಾನುಡಿ ಕೇಳುತಲಾ ಮುನಿಪನು
ಘನಮಹಿಮನ ಕೊಂಡಾಡುತಲಿ
ಅವನೀಶನೆ ಲಾಲಿಸು ಶ್ರೀಶನು
ನವವಿಧ ಭಕುತರಿಗೊಲಿದುದನು ೨

ಕರುಣಾಕರ ಕಮಲಾಕ್ಷನು ಭಕುತರ
ಭರದಿಂದಲಿ ರಕ್ಷಿಸುತಿಹನು
ಗರುಡಗಮನ ಶ್ರೀ ಕಮಲನಾಭ ವಿ-
ಠ್ಠಲ ಭಕ್ತರನುದ್ಧರಿಸುವನು ೩

## ಭಾಮಿನಿ ಷಟ್ಪದಿ

ಸತ್ಯಲೋಕಾಧಿಪನ ಪುತ್ರನು
ಚಿತ್ತದಲಿ ಹರಿಸ್ಮರಣೆ ಮಾಡುತ
ಮರ್ತ್ಯಲೋಕದ ಮನುಜರಿಗೆ ತ್ತತ್ವವನೆ ಬೋಧಿಸುತ ।
ದೈತ್ಯ ವೈರಿಯ ಕೃತ್ಯನೆನೆಯುತ
ಸತ್ವರದಿ ನಡೆತಂದ ನಾರದ
ಸತ್ಯಭಾಮೆಯ ರಮಣನಿಹ ದ್ವಾರಕಾಪುರದ ಬಳಿಗೆ ॥

ನೋಡಿರಿ ನಾರದ ಗಾಢದಿ ಬರುವುದ ಪ

ಗಾಡಿಕಾರ ಶ್ರೀಕೃಷ್ಣನ ಮಹಿಮೆಯ
ಹಾಡುತ ಪಾಡುತ ಕುಣಿ ಕುಣಿದಾಡುತ ಅ.ಪ

# ೧. ಶ್ರೀ ಹರಿಲೀಲಾ

## ಸ್ವಪ್ನ ವೃತ್ತಾಂತ

ಅಧಿಕ ಚೈತ್ರಮಾಸ ಶ್ರೀಮದ್ಭಾಗವತ ಸಪ್ತಾಹ ಕೇಳುತ್ತಿದ್ದಾಗ ಒಂದು ವಿಚಾರವು ಮನಸ್ಸಿನಲ್ಲಿಯೇ ಕೆಲಸ ಮಾಡುತ್ತಿತ್ತು. ಹಾಗೆಯೇ ಎರಡು ಮೂರು ದಿನಗಳನಂತರ ಶ್ರೀ ಮಧ್ಭಾಗವತ ಮಹಾಮಂಗಳವಾಯಿತು. ಚೈತ್ರ ಶುದ್ಧದಶಮಿ. ಇದೇ ಏಕಾದಶಿಯ ಸಾಯಂಕಲ ಶ್ರೀಮದ್ಭಾಗವತ ಹರಿಕಥೆ ಕೇಳುವುದಕ್ಕೋಸ್ಕರ ಹೋಗಿ ಕುಳಿತಿದ್ದ ವೇಳೆಯಲ್ಲಿಯೂ ಇದೇ ಯೋಚನೆಯಾಗುತ್ತಿತ್ತು. ಅಷ್ಟುಹೊತ್ತಿಗೆ ಕಥೆ ಪ್ರಾರಂಭವಾಗಲು, ಆ ಕಡೆ ನೋಡುತ್ತಿದ್ದಾಗ ಎಂದರೆ ಹರಿಕಥೆ ದೇವರನ್ನು ನೋಡುತ್ತಿದ್ದಾಗ ಉದ್ಯೋಗಪರ್ವ ಪ್ರಾರಂಭವಾಯಿತು. ಮೊದಲು ಅದರಲ್ಲಿ ಹೇಳಿದ್ದೇನೆಂದರೆ "ಈ ಉದ್ಯೋಗಪರ್ವ ಕೇಳತಕ್ಕವರು ಅವರವರ ಮನಸ್ಸಿನಲ್ಲಿ ಯಾವ ಯಾವ ಕಾರ್ಯ ಮಾಡಬೇಕೆಂದು ಉದ್ದೇಶ ಮಾಡಿಕೊಂಡಿರುತ್ತಾರೋ ಅವರವರ ಕಾರ್ಯಗಳನ್ನು ಶ್ರೀಹರಿವಾಯುಗಳು ನಿಂತು ನಡೆಸಿಕೊಡುತ್ತಾರೆ ಸಂದೇಹವಿಲ್ಲ" ಎಂದು ಮುಂತಾಗಿ ಹೇಳಿದ ದಾಸರ ವಾಕ್ಯಗಳಿಂದ ಪರಮಾನಂದ, ಹರ್ಷ, ಆಶ್ಚರ್ಯವಾಯಿತು.

ಆ ದಿನದಲ್ಲಿ ಮನೆಯಲ್ಲಿ ಶ್ರೀಹರಿದಿನವಾದ್ದರಿಂದ ರಾತ್ರಿ ಜಾಗರಣೆ ಬಹಳ ವೈಭವದಿಂದ ಶ್ರೀಹರಿವಾಯುಗಳ ಪ್ರೇರಣೆಯಿಂದ ನಡೆಯಿತು.

**ಇದಾದ ನಂತರ ಎರಡು ಮೂರುದಿನಗಳಲ್ಲಿ ಒಂದು ಸ್ವಪ್ನ ಅದು ಏನೆಂದರೆ :–** ಬಾಳಗಾರಮಠದ ಶ್ರೀ ಶ್ರೀಗಳವರ ಎಡಬಲ ಸೇವೆ ಮಾಡತಕ್ಕವರಲ್ಲಿ ಒಬ್ಬರು ದೊಡ್ಡ ಪುಸ್ತಕಗಳ ಗಂಟನ್ನು ತಲೆಯ ಮೇಲೆ ಇಟ್ಟುಕೊಂಡು ಶೇಷವಸ್ತ್ರವನ್ನು ಹೊದ್ದುಕೊಂಡು ನಮ್ಮ ಮನೆಗೆ ಬಂದರು. ಅವರನ್ನು ಕಂಡೊಡನೆ ಅತಿ ಸಂಭ್ರಮದಿಂದ ದೊಡ್ಡದಾದ ಒಂದು ಚೌಕವಾಗಿರುವ ಹಾಲ್‌ನಲ್ಲಿ ಗೋಡೆಯ ಹತ್ತಿರ ಒಂದು ಮಣೆಯನ್ನು ಹಾಕಿ ಇಲ್ಲಿ ಪುಸ್ತಕಗಳ ಗಂಟನ್ನು ಇಡಬಹುದು ಎಂದು ಹೇಳಿದರೆ ಅವರು ನಗುತ್ತಾ ಹಾಗಾಗುವುದಿಲ್ಲ! ಇದನ್ನು ಅಲ್ಲಿಡಬಾರದು

ಸುತ್ತಸತಿಯರ ಮಂದಿರವು ಬಹು
ಸಿಸ್ತಿನಿಂದಲಿ ಶೋಭಿಸುತ್ತಿರೆ
ಭಕ್ತವತ್ಸಲನರಮನೆಯು ಸರ್ವ
ಶ್ರೇಷ್ಠದಿಂದಿರಲು ೭

ಸತ್ಯಭಾಮೆಯ ರಮಣನಾಪುರ
ಮತ್ತೆ ಅಮರಾವತಿಯನಣಕಿಸೆ
ಸತ್ಯ ಧರ್ಮರು ನೋಡಿ ಹರುಷದಿ
ಸ್ತೋತ್ರದಿಂ ಪೊಗಳೆ ೮

ಕಂತುಪಿತ ಶ್ರೀಕೃಷ್ಣನೋಲಗ
ಮಂಟಪದಿ ಕುಳಿತೆಲ್ಲ ಯಾದವ–
ರಿಂತು ಪ್ರಾರ್ಥಿಸೆ ಕಮಲನಾಭ
ವಿಠ್ಠಲನೆ ಸಲಹೆನುತಾ ೯

## ವಚನ

ಈ ರೀತಿಯಿಂದಲಿ ದ್ವಾರಕಾಪುರದಲ್ಲಿ ನಾರಿ ರುಕ್ಮಿಣಿ ಸತ್ಯಭಾಮೆಯರ ಸಹಿತ ಹರಿಚಾರು ನವರತ್ನ ಸಿಂಹಾಸನದಿ ಕುಳಿತಿರಲು ಮಾರನಯ್ಯನ ಸೇವೆ ಮಾಡುತಲಿ ಯಾದವರು ಮಾಧವನ ಎಡಬಲದಿ ಚಾಮರಗಳನೆ ಪಿಡಿದು ಸಾವಧಾನದಿಂದ ಸೇವಿಸುತ್ತಿರಲು, ಗಾಯಕರು ಶ್ರೀಶನ್ನ ಗಾನದಿಂ ಪಾಡುವರು, ಕೋವಿದರು ಪೊಗಳುವರು, ಶ್ರೀಧರನೆ ಸಲಹೆಂದು ನಾರಿಯರು ನರ್ತನದಿ ಶ್ರೀಹರಿಯ ಮೆಚ್ಚಿಸುತ ಸಾಗರವ ಪರಿಯಂತೆ ಸಭೆಯು ಸಂತೋಷದಲಿ ಭೂರಮಾನಾಥನಪಾರ ವೈಭವದೊಳಿರೆ, ದೇವಲೋಕದಿ ದಿವ್ಯದೇವ ದುಂದುಭಿ ಮೊಳಗೆ, ಹೂವಿನ ಮಳೆ ಕರಿಯೆ ದೇವಗಂಧರ್ವರು ಭೂಲೋಕದಲಿ ಇಂಥ ದೊರೆಗಳಿನ್ಯಾರೆಂದು ಕೇಳು ಪರೀಕ್ಷಿತನೆ ಕಮಲಜೋದ್ಭವಪಿತನು ಆದರಿಸಿ ಭಕ್ತರನು ಉದ್ಧರಿಸಲೋಸುಗದಿ ಈ ವಿಧದ ಕ್ರೀಡೆಗಳ ತೋರುತಲಿ ಮಾಧವನು ಕಾಪಾಡುವನು. ಕಮಲನಾಭ ವಿಠ್ಠಲನು ಒಲಿದು.

ದ್ವಾರಕಾಪಟ್ಟಣವನಾಳುವ
ಶ್ರೀ ರಮೇಶನ ಮಹಿಮೆ ಪೊಗಳಲು
ನಾರದರಿಗಳವಲ್ಲವೆನಲಿ–
ನ್ಯಾರಿಗೊಶವು ೧

ಮುತ್ತು ಮಾಣಿಕ್ಯ ಬಿಗಿದ ಗೋಪುರ
ರತ್ನ ಖಚಿತದ ಕಲಶಕನ್ನಡಿ
ಚಿತ್ರ ಚಿತ್ರದ ಕೋಟೆಗಳು ಮಹ
ಅರ್ಥಿ ದ್ವಾರಕವು ೨

ದ್ವಾರದ್ವಾರದಿ ಸಾಲುಗಜಗಳು
ಮೇಲು ನುಡಿಯುವ ಸಾಲುಗಿಣಿಗಳು
ರಾಮಕೃಷ್ಣರ ಧ್ಯಾನ ಮಾಡ್ವವು
ಸಾನುರಾಗದಲಿ ೩

ಸೌಳಸಾಸಿರ ಸತಿಯರಿಗೆ ಪರ
ಮಾನುರಾಗದಿ ದಿವ್ಯ ಗೃಹಗಳು
ನೀಲ ಮಾಣಿಕ್ಯ ಬಿಗಿದ ಮನೆಗಳು
ಶೋಭಿಸುತ್ತಿಹವು ೪

ಕೋಟಿಸೂರ್ಯ ಪ್ರಕಾಶದಂದದಿ
ಮಾಟದಿಂದಿಹ ದಿವ್ಯಮನೆಗಳು
ನೋಟಕಾಶ್ಚರ್ಯ ತೋರ್ವ ಅಷ್ಟಮ
ಸ್ತ್ರೀಯರರ ಮನೆಯು ೫

ತೂಗೋ ಮುತ್ತಿನ ಗೊಂಚಲುಗಳಿಂದ
ಬಾಗಿ ಬಳಕುವ ಸೋಗೆನವಿಲ್ಗಳು
ಸೋಜಿಗದ ಅರಮನೆಯ ಶೃಂಗಾರ
ಮೂರ್ಜಗಕ್ಕರಿದು ೬

ಎಂದು ಹೇಳಿ ಪುಸ್ತಕದ ಗಂಟನ್ನು ತಲೆಯ ಮೇಲಿಟ್ಟುಕೊಂಡೇ ಗೋಡೆಯಂಚಿನಿಂದ ದೊಡ್ಡ ಪ್ರದಕ್ಷಿಣೆ; ನಂತರ ಅದರೊಳಗೆ ಪ್ರದಕ್ಷಿಣೆ; ನಂತರ ಅದರಲ್ಲಿ–ಹೀಗೆ ಪ್ರದಕ್ಷಿಣಾ ರೂಪದಲ್ಲಿ ಒಳ ಒಳಗೇ ಸುತ್ತಿಕೊಂಡು ಬಂದು ಕೊನೆಗೆ ಮಧ್ಯದಲ್ಲಿ ಗಂಟನ್ನಿಟ್ಟು ನಗುತ್ತಾ ನಗುತ್ತಾ ಕೂತುಕೊಂಡರು. ಅಷ್ಟು ಹೊತ್ತಿಗೆ ಬೆಳಗಿನ ಝಾವ ಐದು ಗಂಟೆಯ ಸಮಯ. ಈ ವೇಳೆಗೆ ಎಚ್ಚರವಾಯಿತು. ನಂತರ ಶ್ರೀಹರಿ ವಾಯುಗುರುಗಳ ಪ್ರೇರಣೆಯಿಂದ ಮುಂದೆ ಬಂದಿರುವ ಕೃತಿಯು ಶ್ರೀಗುರು ಕೃಪೆಯಿಂದ ಮನಸ್ಸಿನಲ್ಲಿ ನಿಂತದ್ದನ್ನು ಶ್ರೀಗುರುಗಳಲ್ಲಿ ಸಮರ್ಪಿಸಿರುತ್ತೇನೆ:

## ವಚನ

ಸಿರಿಯ ರಮಣನ ಚರಣಕ್ಕೆರಗಿ ವಂದನೆ ಮಾಡಿ ಗುರುಹಿರಿಯರಡಿಗಳಿಗೆ ಎರಗಿ ವಂದನೆ ಮಾಡಿ, ವರದ ಗಣಪತಿಗೆ ವಂದನೆ ಮಾಡಿ, ಕರ ಮುಗಿದು, ಪರಶಿವನ ರಾಣಿ ಪಾರ್ವತಿಯ ಸ್ತೋತ್ರವ ಮಾಡಿ, ಉರಗಭೂಷಣನಾದ ಪರಶಿವನ ಕೊಂಡಾಡಿ, ಪರಮ ಮಂಗಳೆ ಭಾರತಿಯ ಚರಣಕ್ಕಭಿನಮಿಸಿ, ವರಗಾನ ವಿದ್ಯಕಭಿಮಾನಿಯನು ಸ್ತುತಿ ಮಾಡಿ, ಪವಮಾನ ನಂದನನ ಪದುಳದಿ ಕೊಂಡಾಡಿ, ಸರಸಿಜೋದ್ಭವನಂಘ್ರಿ ಸರಸದಲಿ ಸ್ತುತಿ ಮಾಡಿ, ವರಮಹಾಲಕ್ಷ್ಮಿಯನ್ನು ಭರದಿಂದ ಕೊಂಡಾಡಿ, ಸಿರಿಯ ರಮಣನ ಭಜಿಸಿ ಸ್ತುತಿಸಿ ವರಬೇಡುತಲಿ, ವರ ಪರೀಕ್ಷಿತಗೆ ಪೇಳಿದ ಶುಕರ ವಾಕ್ಯವನು ಬರೆದು ಪೇಳ್ವುದಕಿನ್ನು ವರಮತಿಯ ಬೇಡುವೆನು. ಅರಿಯೆ ಯತಿಗಣ ಪ್ರಾಸನೇಮಗಳನೆಂದೆಂದು ; ಹಿರಿಯರಾದವರು ದೋಷಗಳ ದೂರವ ಮಾಡಿ ಪರಮ ಪಾಮರರ ಪಾಪಗಳ ಪರಿಹರಿಸುವದು. ಅರಿಯದವರ–ಪರಾಧ ತ್ವರಿತದಲಿ ಪರಿಹರಿಸಿ ಕರುಣದಿಂದಲಿ ಬಂದು ಸಲಹಬೇಕೆಂದೆ–ನುತ ಕರವೆತ್ತಿ ಪ್ರಾರ್ಥಿಪೆನು. ಕ್ಷಮಿಸಿ ಕಾಪಾಡುವುದು ವರದ ಲಕ್ಷ್ಮೀರಮಣನೊಡನೆ ಸರಸವ ಮಾಡ್ದ ಸುರಮುನಿ ನಾರದರ ಸರಸವಾರ್ತೆಯನು ವರ ಕಮಲನಾಭ ವಿಠ್ಠಲನ ಕರುಣವ ಪಡೆದು ಒರೆವೆನಿದ ಸಜ್ಜನರ ಕರುಣದಿಂದ.

ಈಗಲೆಮ್ಮಯ ಮನವು ಹರುಷಿಸೆ
ಬೇಗ ನಿನ್ನನು ಬೇಡಿಕೊಂಬೆವೊ ೫

ಇಂತು ಕೃಷ್ಣನು ಸರಸವಾಡುತ
ನಿಂತನವರಿಗೆ ಹರುಷ ತೋರುತ
ಚಿಂತೆಯೆಲ್ಲವ ಬಿಟ್ಟು ಗೋಪೇರು
ಅಂತರಾತ್ಮನ ಭಜಿಸುತಿದ್ದರು ೬

ಏನು ಪುಣ್ಯವೊ ನಮ್ಮದೆನುತಲಿ
ದಾನವಾರಿಯ ಸ್ಮರಿಸುತಿದ್ದರು
ನಾರೇರೆಲ್ಲರ ನೋಡಿ ಕೃಷ್ಣನು
ಬೇಗದಿಂದಲಿ ಅಂತರ್ಧಾನನಾದನು ೭

ಸ್ಮರನ ಪಿತನನು ಸ್ಮರಿಸಿಪಾಡುವ
ತರುಣಿಯರಿಗೆ ಮೈ ಸ್ಮರಣೆ ಮರೆತಿರೆ
ಭರದಿ ಕಂಗಳ ತೆರೆದು ನೋಡಲು
ಮುರಳೀಧರನ ಕಾಣದಲೆ ಚಿಂತಿಸಿ ೮

ಜಾಜಿ ಸಂಪಿಗೆ ಸೂಜಿ ಮಲ್ಲಿಗೆ
ರಾಜೀವಾಕ್ಷನ ಕಾಣಲಿಲ್ಲವೆ
ಬಿಳಿಯ ಮಲ್ಲಿಗೆ ಎಳೆಯ ತುಳಸಿಯೆ
ನಳಿನನಾಭನ ಸುಳಿವು ಕಾಣಿರಾ ೯

ಸರಸದಿಂದಲಿ ಹರಿವ ಯಮುನೆಯೆ
ಸರಸಿಜಾಕ್ಷನ ಪಾದ ಕಾಣೆಯಾ
ಚಿಗರಿ ಮರಿಗಳೆ ನಿಮ್ಮ ಕಂಗಳು
ನಳಿನನಾಭನ ಸುಳವು ಕಾಣವೆ ೧೦

ಯಾರ ಕೇಳಲು ಹರಿಯ ಕಾಣರು
ನಾರಿಮಣಿಯರೆ ನಾವೆ ಕರೆಯುವ

ಮುದ್ದು ಕೃಷ್ಣನೆ ಪದ್ಮನಾಭನೆ
ಶ್ರದ್ಧೆಯಿಂದಲಿ ನಿಮ್ಮ ಭಜಿಪೆವೊ ೧೧

ಜಯತು ಜಯತು ಶ್ರೀ ಲಕ್ಷ್ಮೀ ರಮಣನೆ
ಜಯತು ಜಯತು ಶ್ರೀ ಗರುಡಗಮನನೆ
ಜಯತು ಜಯತು ಶ್ರೀ ಉರಗಶಯನನೆ
ಜಯತು ಜಯತು ಶ್ರೀ ಪರಮ ಪುರುಷನೆ ೧೨

ಜಯತು ಜಾಹ್ನವಿಜನಕ ಶ್ರೀಶನೆ
ಜಯತು ಭಕ್ತರ ಭಯವಿನಾಶನೆ
ಜಯತು ಪಾವನ ಪುಣ್ಯ ಚರಿತನೆ
ಜಯತು ಜಯತು ಲಾವಣ್ಯರೂಪನೆ ೧೩

ಎಳೆಯ ಚಿಗುರಿನಂತಿರುವ ಪಾದವು
ರುಳಿಯ ಗೆಜ್ಜೆಯು ಕಾಲಪೆಂಡೆಯು
ಎಳೆಯ ಪಾದದಿ ಹೊಳೆವ ಪೈಜನಿ
ಘಲಿರು ಘಲಿರು ಎಂದೆನುತ ಮೆರೆವುದು ೧೪

ಪುಟ್ಟ ನಡುವಿಗೆ ಪಟ್ಟೆ ಮಡಿಗಳು
ಇಟ್ಟ ಚಲ್ಲಣ ಪುಟ್ಟ ಕೃಷ್ಣಗೆ
ಉಡುಗೆಜ್ಜೆಯು ಗಂಟೆ ಸರಪಳಿ
ಒಪ್ಪಿ ಮೆರೆಯುವ ಕಾಂಚಿಧಾಮವು ೧೫

ಚತುರ ಹಸ್ತದಿ ಶಂಖುಚಕ್ರವು
ಗದೆಯು ಪದುಮವು ಹೊಳೆಯುತಿರುವುದು
ಕಡಗ ಕಂಕಣ ತೋಳ ಬಾಪುರಿ
ವಜ್ರದೊಂಕಿಯು ಮೆರೆಯುತಿರುವುದು ೧೬

ಕೊರಳ ಕೌಸ್ತುಭ ವೈಜಯಂತಿಯು
ಸುರಗಿ ಸಂಪಿಗೆ ಸರಗಳೊಲಿಯುತ

ಭಾಗವತರ ಪ್ರಿಯ ಬಾರೆಂದು
ಭಾರದ್ವಾಜರು ಭಕ್ತಿಯಲಿ
ಬಾರಿಬಾರಿಗೆ ಸ್ತುತಿಗೈವರು ಸತಿ ಸುಶೀಲೆ-
ಯರು ಸುಂದರ ನಾರಿಯರು
ಕರೆವರು ಕಂಸಾರಿ
ಬಾರೆಂದು ಕರದಾರು ಶೋಭಾನೆ ೩

ಹಸ್ತಿವರದ ಹರಿ ಬಾರೆಂದು
ವಿಶ್ವಾಮಿತ್ರರು ಹರುಷದಲಿ
ಪತ್ನಿ ಕುಮುದ್ವತಿ ಸತಿ ಸಹಿತದಿ ಕರೆವರು
ಭಕ್ತಿಯಲಿ ಪರಮಾಸಕ್ತಿಯಲಿ
ಹರಿಯನು ಸ್ತೋತ್ರದಲಿ
ಭೂ ರಮಾ ಪಾರ್ಥಸಾರಥಿಯ ಕರದಾರು ಶೋಭಾನೆ ೪

ಕೌಶಿಕ ಯಜ್ಞಪಾಲನೆ ಬಾ
ಕಂಸನ ಸಭೆಯಲಿ ಸೆಳೆದನೆ ಬಾ
ಹಂಸವಾಹನಪಿತ ಬಾರೆಂದು ಕರೆವರು
ಗೌತಮರು ಪತ್ನಿ ಅಹಲ್ಯೆಯರು
ಪಾಡುತ ಪ್ರಾರ್ಥಿಪರು ಮುರಹರಿ ಗೋಪಾಲ
ಬಾರೆಂದು ಕರದಾರು ಶೋಭಾನೆ ೫

ಜಗದುದರನೆ ಶ್ರೀ ಹರಿಯೆ ಬಾ
ನಿಗಮತಂದು ಸುತಗಿತ್ತನೆ ಬಾ
ಝುಗಿಝುಗಿಸುವ ಆಭರಣಗಳ್ದೊಳೆಯುತ
ಬಾರೆಂದು ಜಯ ಜಯವೆನ್ನುವರು
ಋಷಿ ಜಗದಗ್ನಿಯರು ರೇಣುಕ ಸಹಿತ
ಶ್ರೀಶನ ಕರದಾರು ಶೋಭಾನೆ ೬

ಮಂಗಳ ಮದನ ಗೋಪಾಲನಿಗೆ
ಮಂಗಳ ಯದುಕುಲ ತಿಲಕನಿಗೆ
ಮಂಗಳ ಕಮಲಾನಾಭ ವಿಠ್ಠಲನಿಗೆ

ಹರಿಯ ಅಪ್ಪಣೆಯಂತೆ ಹುಣಸೆಯ ಮರಹುಟ್ಟಿ
ಪರರಿಗೆ ಉಪಕರಿಸುವದಿದು ಹರಿಯಾಜ್ಞೆ
ವರದ ಶ್ರೀ ಹರಿ ಕಮಲನಾಭ ವಿಠ್ಠಲನಿಚ್ಛೆ
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೧೧

## ಶ್ರೀಗೋಪೀ ಗೀತೆ

### ೧೬೬

ಒಂದು ದಿನದಲಿ ಇಂದಿರೇಶನು
ಚಂದದಿಂದಲಿ ವನಕೆ ಬಂದನು
ಸುಂದರಾಂಗನು ಗೋಪ ವೃಂದದಿ
ನಿಂದು ಕೊಳಲನು ಸ್ವರವಗೈದನು ೧

ಕೊಳಲ ಧ್ವನಿಯನು ಕೇಳುತಾಕ್ಷಣ
ಖಗಮೃಗಂಗಳು ಮಯ್ಯ ಮರತವು
ತರುಣಿ ಮಣಿಯರು ಮನೆಯ ಕೆಲಸಕೆ
ಮರತು ಮಯ್ಯನು ತೆರಳಿ ಬಂದರು ೨

ಕೊಳಲ ಧ್ವನಿಯನು ಕೇಳಿ ಗೋಪೇರು
ನಳಿನನಾಭನ ಬಳಿಗೆ ಬಂದರು
ನಳಿನಮುಖಿಯರ ನೋಡಿ ಕೃಷ್ಣನು
ಮುಗುಳುನಗೆಯಲಿ ಮಾತನಾಡಿದನು ೩

ನಾರಿಮಣಿಯರೆ ರಾತ್ರಿ ವೇಳೆಯು
ಈಗ ಇಲ್ಲಿಗೆ ಬಂದಿರೇತಕೆ
ಮಾರನಯ್ಯನ ಮಾತುಕೇಳುತ
ಮಡದಿ ಮಣಿಯರು ನುಡಿದರಾಗಲೆ ೪

ಬಾಲಕೃಷ್ಣನೆ ನಿನ್ನ ಕೊಳಲಿನ
ನಾದ ಕೇಳುತ ಓಡಿ ಬಂದೆವೊ

ಮಂಗಳವು ವಶಿಷ್ಠರು ಪಾಡುವರು ಸತಿ ಅ–
ರುಂಧತಿಯರು ಜಯ ಜಯ
ಮಂಗಳವೆಂದು ಕರದಾರು ಶೋಭಾನೆ ೭

ಶೋಭನವೆನ್ನಿರೆ ಶ್ರೀಹರಿಗೆ
ಶೋಭನವೆನ್ನಿರೆ ಮಾಧವಗೆ
ಶೋಭನವೆನ್ನಿರಿ ಸೊಬಗುಳ್ಳ ದೇವಗೆ ಶೋಭಾನೆ
ಸಿರಿಯರಸಗೆ ದಿವ್ಯ ಶೋಭಾನೆ
ಪರಮಪುರುಷನಿಗೆ ಶೋಭಾನೆ
ಶೋಭನ ಗರುಡಗಮನಗೆ
ಶೋಭನವೆನ್ನಿರೆ ಶೋಭಾನೆ ೮

## ಯುಗಾದಿಯಂದು ರಚಿತವಾದ ಹಾಡುಗಳು

### ೧೪೩

ಪವನಾಂತರ್ಗತ ಹರಿಯ ಸ್ಮರಣೆಯಮಾಡಿ ಪ

ವಿವಿಧ ಭಕುತರು ಕೂಡಿ ಹರುಷದಿ
ಪ್ಲವನಾಮ ಸಂವತ್ಸರದಲಿ
ಸವಿನಯದಿ ಭಜನೆಗಳ ಮಾಳ್ಪರು
ಹರಿಯ ಗುಣ ಕಾರ್ಯಗಳ ಸ್ಮರಣೆಯ ಅ.ಪ

ಪಕ್ಷಿವಾಹನ ಹರಿಯು ಶ್ರೀ ಲಕುಮಿದೇವಿಯ
ಲೆಕ್ಕಿಸದಿಹನಂತೆ ಹೀಗಿರಲು ಬ್ರಹ್ಮನ
ಪೊಕ್ಕುಳಲಿ ಪಡೆದನಂತೆ
ಸೊಕ್ಕಿದ ಅಸುರರನು ಬಡಿಯಲು
ಮಿಕ್ಕ ಸುರರನು ಪೊರೆಯಲೋಸುಗ

ಮಾನವಂತರು ತಿನ್ನುವ ಮಾವಿನ ಹಣ್ಣು
ಜ್ಞಾನಿಗಳಿಗೆ ರಾಮನಾಮದ ಹಣ್ಣು
ದೀನಜನರು ತಿಂಬ ಮೂಸುಂಬೆ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೫

ಅಪರೂಪದಲಿ ಬೆಳೆದ ಮಾದಳದ್ಹಣ್ಣು
ಕಪಿಗಳು ತಿನ್ನುವ ಸೀಬೆಯ ಹಣ್ಣು
ತಪಸ್ವಿಗಳಾಹಾರ ಜಂಬುನೇರಳೆಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೬

ಪರಿ ಪರಿ ಔಷಧಕೆ ಹೆರಳೆಯ ಹಣ್ಣು
ಮರ್ಯಾದೆಗೆ ಕೊಡುವ ನಿಂಬೆಯ ಹಣ್ಣು
ಪರಮ ರೂಪಿಯಾದ ಕರಬೂಜದ್ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೭

ಬಡವರಿಗೂ ಈ ಹುಣಸೇ ಹಣ್ಣಿರಬೇಕು
ಬಲ್ಲಿದರಿಗೂ ಹುಣಸೇ ಹಣ್ಣಿರಬೇಕು
ಬಲ್ಲಿದರಿದರ ರುಚಿ ಎಲ್ಲ ಜನರುಗಳು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೮

ಹುಣಸೇಹಣ್ಣಿಲ್ಲದೆ ಭಾಂಡ ಶುದ್ಧಿಗಳಿಲ್ಲ
ಹುಣಸೇ ಇಲ್ಲದೆ ಸ್ವಯಂಪಾಕ ರುಚಿಯು ಇಲ್ಲ
ಹುಣಸೇ ಮರಕ್ಕಿಂತ ಗಟ್ಟಿ ಮರಗಳಿಲ್ಲ
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೯

ಹುಣಸೇಕಾಯಿಯ ಕುಟ್ಟಿ ರಸವ ಮಾಡುವರು
ಹುಣಸೇಹಣ್ಣನು ಕುಟ್ಟಿ ಅಣಿಮಾಡಿಡುವರು
ಹುಣಸೇಹಣ್ಣಿನ ಬೆಲೆ ಮುಗಿಲಿಗೇರಿರಲು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೧೦

ದುಂದುಭಿ ವತ್ಸರದಿ ಸುಜನರೆಲ್ಲ
ತಂದೆ ಕಮಲನಾಭ ವಿಠ್ಠಲನೆನುತ
ಒಂದೆ ಮನದಲಿ ಭಜಿಸಿ ಸ್ತುತಿಪ ಜನರ
ಚಂದದಲಿ ಕಾಯ್ವ ನಾರಸಿಂಹ ಹರಿಯು ೩

## ವಿಶೇಷ

## ೧೬೫

ಆ ಹಣ್ಣು ಈ ಹಣ್ಣು ನೆನಸಿ ಫಲವೇನೆ
ಈ ಹುಣಸೇಹಣ್ಣಿಗೆ ಸಮಬಾಹೋದೇನೆ ಪ

ಹಡಗಿಂದ ಬಂದಿತು ಉತ್ತತ್ತಿ ಹಣ್ಣು
ಬಡವರಿಗೆ ಬೇಕಾದ ಬಾಳೆಯ ಹಣ್ಣು
ಕೂತರೆ ಏಳದು ಕುಂಬಳದ್ದಲ್ಲ
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೧

ಮಕ್ಕಳು ಬಯಸುವ ಚಕ್ಕೋತ ಹಣ್ಣು
ಸಕ್ಕರೆ ಸವಿಯಾದ ಅನಾಸಿನ ಹಣ್ಣು
ಜೇನು ತುಪ್ಪದ ರುಚಿ ಹಲಸಿನ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೨

ದಾಹವಡಗಿಸುವದು ದ್ರಾಕ್ಷಿಯ ಹಣ್ಣು
ದೊರೆಗಳು ತಿನ್ನುವ ದಾಳಿಂಬೆ ಹಣ್ಣು
ಫರಂಗಿಯರು ತಿನ್ನುವ ಪನ್ನೇರಳೆ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೩

ಅತಿಮಧುರವಾದ ಕಿತ್ತಲೆ ಹಣ್ಣು
ಯತಿಗಳಿಗಾನಂದ ಸೀತಾಫಲದ್ಹಣ್ಣು
ಅತಿರುಚಿಯಾದ ಅಂಜೂರದ ಹಣ್ಣು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು ೪

ರಕ್ಕಸಾಂತಕ ಹರುಷದಿಂದಲಿ
ಚೊಕ್ಕ ಸ್ತ್ರೀ ರೂಪಾದನಂತೆ ೧

ಇಂದುಶೇಖರ ಕೇಳಿದ ಸ್ತ್ರೀರೂಪ ನೋಡಲು
ಬಂದು ಬೇಡಿದನಂತೆ ಅದು ಕೇಳಿ ಶ್ರೀಶನು
ಸುಂದರ ಸ್ತ್ರೀಯಾದನಂತೆ
ನಿಂದು ನೋಡುತ ಚಂದ್ರಶೇಖರ
ಮಂದಹಾಸದಿ ಪಿಡಿಪೋದನಂತೆ
ಮಂದಗಮನೆಯು ಸಿಗದೆ ದೂರದಿ
ನಿಂದು ಕಣ್ಮರೆಯಾದಳಂತೆ ೨

ಭಸ್ಮಾಸುರಗೆ ವರವಾ ಬೇಡಿದ್ದು ಕೊಟ್ಟು
ವಿಸ್ಮಯವಾದನಂತೇ ಪಶುಪತಿಯ ಸಿರದಲಿ
ಹಸ್ತ ನೀಡಿದನಂತೇ
ಮತ್ತೆ ರಕ್ಷಕರಿಲ್ಲವೆಂದು
ತತ್ತರಿಸಿ ಭಯಪಟ್ಟನಂತೆ
ತಕ್ಷಣದಿ ಶ್ರೀ ಕಮಲನಾಭ
ವಿಠ್ಠಲ ರಕ್ಷಿಸಿ ಪೊರೆದನಂತೆ ೩

## ೧೪೪

ಸ್ಮರಿಸಿ ಬೇಡುವೆ ಹರಿಯ ಮುರಾರಿಯ
ಸ್ಮರ ಕೋಟಿತೇಜನ ಸುರಮುನಿವಂದ್ಯನ ಪ

ಮನ್ಮಥಕೋಟಿ ಲಾವಣ್ಯರೂಪದಿ ಮೆರೆವ
ಮನ್ಮಥಯ್ಯನ ಪೊಗಳುತ್ತಲಿ
ಚಿನ್ಮಯರೂಪನ ಚಿದ್ರೂಪನಾದನ
ಹೃನ್ಮನದಲಿ ಪಾಡಿಪೊಗಳಿ ಕೊಂಡಾಡುತ ಅ.ಪ

ಅಂಬರದಲಿ ದೇವ ದುಂದುಭಿಗಳು ಮೊಳಗಲು
ಕಂದರ್ಪನ ಪಿತ ಕರುಣದಿ ಭಕುತರ
ಚಂದದಿ ದುರ್ಮತಿ ನಾಮ ವತ್ಸರದಲಿ
ಕುಂದಿಲ್ಲದೆ ಸಲಹುವೆನೆನುತಲಿ ತ್ವರ ೨

ಸೃಷ್ಟಿಗೀಶನ ಗುಣಗಳ ಪಾಡುತಲಿ ವ-
ಶಿಷ್ಠರು ವಿಶ್ವಾಮಿತ್ರ
ಕಶ್ಯಪ ಭಾರದ್ವಾಜ ಮುನಿಗಳು
ದೇವೇಶನ ಸ್ತುತಿಸುತ
ಅತ್ರಿ ಜಮದಗ್ನಿ ಜಾಬಾಲಿಗಳು
ಶ್ರೀಕೃಷ್ಣನೆ ಪರನೆಂದು-
ತ್ತಮ ಋಷಿಗಳು ಪೊಗಳುತಲಿರಲು
ಸೃಷ್ಟಿಗೊಡೆಯ ಪರಮೇಷ್ಠಿ ಪಿತನ ತ-
ನ್ನಿಷ್ಟ ಭಕುತರನು ಸಲಹಲು ಕಂಕಣ
ಕಟ್ಟಿಹ ಕಮಲನಾಭವಿಠ್ಠಲ ತ್ವರ
ಶಿಷ್ಟರ ಸಲಹಲು ಸರಸರ ಓಡುತ ३

## ಸೀಸಪದ್ಯ

## ೧೬೪

ಸುಂದರಾಂಗನ ಪಾದಕೊಂದಿಸುತ ಭಕ್ತಿಯಲಿ
ಮಂದರೋದ್ಧಾರ ಮುಚುಕುಂದ ವರದ
ನೆಂದು ಸ್ತುತಿಸುವ ಭಕ್ತವೃಂದವನು ರಕ್ಷಿಸುವ
ಕುಂದನೆಣಿಸದಲೆ ನಾರಸಿಂಹ ಹರಿಯು ೧

ಇಂದಿರಾರಮಣಗೆ ಜಯ ಗೋವಿಂದ ಗೋಪಕುಮಾರ-
ನೆಂದವರ ಬಂಧನವ ಬಿಡಿಸಿ ಕಾಯ್ವ
ಕಂದರ್ಪಜನಕ ಕಮಲಾಕ್ಷ ಹರಿ ಗತಿ ಎನುತ
ಬಂದವನ ಕೈ ಬಿಡನು ಇಂದಿರೇಶ ೨

ಮನ್ಮನದೊಳು ಸ್ಮರಿಸಿ ಸ್ಮರಿಪ ಭಾಗ್ಯವು
ಮುನ್ನ ಕರುಣಿಸಿ ಸಲಹು ಬಲು ಸಂ-
ಪನ್ನ ನಿನಗೆದುರಿಲ್ಲ ಧರೆಯೊಳು
ಪನ್ನಗಾದ್ರಿ ನಿವಾಸ ಶ್ರೀಶನ ೧

ವಿಶ್ವವ್ಯಾಪಕ ನೀನೆ ವಿಶ್ವಮೂರುತಿ ನೀನೆ
ವಿಶ್ವಕರ್ತನು ನೀನೆ ವಿಶ್ವ ನೀನೆ ಶ್ರೀ-
ವಿಶ್ವವಸುನಾಮ ಸಂವತ್ಸರದೊಳು ಮೆರೆವ
ವಿಶ್ವಮೂರುತಿ ಶ್ರೀ ಸರ್ವೇಶ್ವರ ನೀನೆಂದು ೨

ವಿಶ್ವಮಯ ವಿಶ್ವೇಶ ಶ್ರೀಹರಿ
ವಿಶ್ವನಾಮಕ ವಿಮಲ ಸುಖಮಯ
ವಿಶ್ವವನು ಉದರದೊಳು ಧರಿಸಿದ
ವಿಶ್ವವನು ವದನದಲಿ ತೋರ್ದನ ೩

ಕಮಲದಳಾಕ್ಷನ ಕಮನೀಯ ರೂಪನ
ಕಮಲ ಸಂಭವನ ಪೆತ್ತಿಹ ಧೀರನ
ಕಮಲಮುಖಿಯ ಕರಕಮಲದಿ ಪೂಜ್ಯನ
ಕಮಲೆಯೊಡಗೂಡುತ ನಲಿವನ ೪

ಕಮಲ ಕರದೊಳು ಪಿಡಿದ ಕಮಲೆಯ
ಕಮಲನಾಭನ ಪಿತನೆ ಮುದದೊಳು
ಕಮಲೆಯನು ಕೈಪಿಡಿದು ಮೆರೆಯುವ
ಕಮಲನಾಭವಿಠ್ಠಲನ ಪ್ರತಿದಿನ ೫

## ೧೪೫

ಮಂಗಳವೆನ್ನಿರೆ ಮದನಗೋಪಾಲನಿಗೆ
ಮಂಗಳವೆನ್ನಿರೆ ಮಾಧವಗೆ ಪ

ಮಂಗಳವೆನ್ನಿರೆ ಮಾಮನೋಹರನಿಗೆ
ಮಂಗಳವೆನ್ನಿರೆ ಮುರಹರಗೆ ಅ.ಪ

ಭುವನಮೋಹನ ಶಾಮಲಸುಂದರಾಂಗಗೆ
ಅಮಿತಪರಾಕ್ರಮ ಅಚ್ಚುತಗೆ
ನವನವಲೀಲೆಯ ತೋರಿದ ದೇವಗೆ
ಸುವಿನಯದಿಂದ ಶ್ರೀ ಶ್ರೀಧರಗೆ ೧

ಶಂಖು ಚಕ್ರಪೀತಾಂಬರಧಾರಿಗೆ
ಬಿಂಕದಿಂದ ಮುರಳಿಯನೂದಿದಗೆ
ಶಂಕರಾದಿ ಸುರಸೇವಿತಗೆ ನಿಷ್ಕ-
ಳಂಕದಿ ಭಜಿಪರ ಪೊರೆದವಗೆ ೨

ಪರಿಪರಿ ವಿಧದಲಿ ಹರಿ ಸ್ಮರಣೆಯ ಮಾಡೆ
ಪರಾಭವನಾಮ ಸಂವತ್ಸರದಿ
ದುರಿತಗಳೆಲ್ಲವ ಪರಿಹರಿಸುತ ಕಾಯ್ವ
ಸಿರಿವರ ಕಮಲನಾಭ ವಿಠ್ಠಲನಿಗೆ ೩

## ೧೪೬

ಮಂಗಳಾರತಿ ಮಾಡಿರೆ ಮಾರಮಣಗೆ ಪ

ಮಂಗಳಾರತಿ ಮಾಡಿ ಗಂಗಾಜನಕನಿಗೆ
ಶೃಂಗಾರ ಶೀಲಗೆ ಅಂಗನೆ ಮಣಿಯರು ಅ.ಪ

ನೀರೊಳಗಾಡಿದವಗೆ ಬೆನ್ನಿಲಿ ಗಿರಿ
ಭಾರ ಪೊತ್ತಿಹ ದೇವಗೆ ಮಣ್ಣಿನಲಿದ್ದ
ಬೇರುಗಳನೆ ಮೆದ್ದಗೆ ಶ್ರೀಹರಿಗೆ
ಮೂರೆರಡರಿಯದ ಪೋರನ ಮಾತಿಗೆ
ಕ್ರೂರ ದೈತ್ಯನ ಕರುಳ್ಹಾರ ಮಾಡಿದಗೆ ೧

## ೧೬೩

ಬಂದಾ ಗೋವಿಂದನು ಗೋಕುಲದಿಂದ
ಆನಂದ ಮುಕುಂದನು ಪ

ಅಂದಿಗೆ ಕಿರುಗೆಜ್ಜೆಯು ಘಲುಘಲುರೆನೆ
ಮಂದಹಾಸನಗೆಯಿಂದಲಿ ಶ್ರೀಹರಿ ಅ.ಪ

ಕರದಿ ಕಂಕಣ ವಂಕಿಯು ಹೊಳೆಯುತಲಿ
ಸಿರದಿ ಕಿರೀಟ ಮುಂ–
ಗುರುಳು ಮುಖ ಬೆವರಿನ ಹೊಸ ಕಾಂತಿಯಲಿ
ಬೆರಳುಗಳಲಿ ಉಂಗುರ
ಥಳಥಳಥಳ ಹೊಳೆಯುವ ಸೊಬಗಿನಲಿ
ಕೊರಳೊಳು ಸರಿಗಿಯ ಸರ
ಪರಿ ಪರಿ ಸರ ಪದಕಗಳ್ಹೊಳೆಯುತಲಿ
ಜರಿ ಪೀತಾಂಬರದ ನಡುವಿಲಿ
ಕಿರು ಗೆಜ್ಜೆಗಳ್ಹೊಳೆಯುತಲಿ
ತರುತುರು ತರುಣೇರು ಮರುಳಾಗುವ ತೆರ
ಪರಿಪರಿ ರಾಗದಿ ಮುರಳಿಯ ನುಡಿಸಲು
ಸುರರು ಪುಷ್ಪ ವೃಷ್ಟಿಯ ಸುರಿಸುತಲಿರೆ
ತುರುಕರು ಮಧ್ಯದಿ ಪೊಳೆವೊ ಚಂದ್ರಮನಂತೆ ೧

ತುಂಬುರು ನಾರದರೆಲ್ಲರು ಕೂಡಿ
ಅಂಬರದಲಿ ನೆರೆದರು
ಗಂಧರ್ವಪ್ಸರ ಸ್ತ್ರೀಯರು ಕುಣಿದಾಡಿ
ಪರಮಾತ್ಮನ ಸ್ತುತಿಸುತ
ರಂಭೆ ಊರ್ವಶಿ ಮೇನಕೆಯರು ಕೂಡಿ
ಆನಂದದಿ ನರ್ತಿಸೆ
ಇಂದಿರೆ ರಮಣನ ಗುಣಗಳ ಪಾಡಿ

ಪೇಳಿರಿ ನಿಮ್ಮ ನಾಮಗಳೇನು ನಿಮ್ಮ
ಸೇರಿದ ಪಾಪ ಕಾರಣವೇನು ೭

ಗಂಗಾದಿಸಕಲ ತೀರ್ಥಗಳಲ್ಲಿ ಪಾಪ
ಹಿಂಗುವಂದದಿ ಸ್ನಾನಪಾನವ ಮಾಡಿ ೮

ಪೊಂದಿದ ಪಾಪ ನಮ್ಮೊಳಗಿಟ್ಟು ಜನ
ಚಂದದಿ ಪಾಪ ಭೀತಿಯ ಬಿಟ್ಟು ೯

ನಿರ್ಮಲ ಮನದಿಂದ ಸುಖಿಪರು ನಮ್ಮ
ಮನ್ಮಥನಯ್ಯನ ಭಜಿಸುವರೂ ೧೦

ಪೊಂದಿದ್ದ ಪಾಪವು ಪೋಗಲು ನಿಮ್ಮ
ಮಂದಿರದೊಳು ಸೇವೆ ಮಾಡುವೆವು ೧೧

ಗಂಗೆ ಗೋದಾವರಿ ಯಮುನೆಯು ಕೃಷ್ಣ
ತುಂಗಭದ್ರೆ ಕಾವೇರಿ ಕಪಿಲೆಯೂ ೧೨

ಕೇಳುತ ನಿಮ್ಮ ಕೀರ್ತಿಗಳನ್ನು ಕಮಲ
ನಾಭ ವಿಠ್ಠಲನಪಾದ ಸೇವಕರಿನ್ನು ೧೩

## ವಚನ

ಈ ಪರಿಯಿಂದ ಸೇವೆಗಳ ಕೈಗೊಳ್ಳುತಲಿ
ಶ್ರೀ ಪತಿಯ ಅನುಗ್ರಹಕೆ ಪೂರ್ಣ ಪಾತ್ರರೆಂದೆನಿಸಿ
ಆ ಪರಮಾತ್ಮನ್ನ ಸ್ಮರಿಸುತ್ತ ಹಗಲಿರುಳು ಅ-
ನೇಕ ವಿಧ ಭಕ್ತರಿಗೆ ಭಕ್ತಿ ಮಾರ್ಗಗಳ ತೋರಿಸುವ
ದಾಸರಾಯರು ಬಹಳ ಲೋಕಕುಪಕಾರಿ ಎನಿಸಿದರು

ಅಕ್ಷರೇಢ್ಯ ಅನಿರುದ್ಧನಿಗರ್ಪಿಸಿ
ಲಕ್ಷ ಪದಗಳನು ಭಕ್ತಿಯಲಿ

ಬಡವ ಬ್ರಾಹ್ಮಣನಾಗುತ ದಾನವ ಬೇಡಿ
ಕೊಡಲಿ ಪಿಡಿದ ಭಾರ್ಗವಗೆ ಕೋಡಗಗಳ ಕೂಡಿ
ಕಡಲ ಬಂಧಿಸಿ ಮಡದಿಯ ತಂದವಗೆ
ಕಡಹಲ್ದ ಮರನೇರಿ ಮಡದೇರಿಗೊಲಿದಗೆ
ಬಿಡದೆ ತೇಜಿಯನೇರಿ ಸಡಗರ ತೋರ್ದಗೆ ೨

ಪರಮಪುರುಷದೇವನ ಪರಿಪರಿಯಿಂದ
ಸ್ಮರಣೆ ಮಾಡುತ ಪಾಡುತ ಸಿರಿಯರಸಗೆ
ಸರಸೀಜಾಕ್ಷಿಯರೆಲ್ಲರೂ ಸರಸದಿ ಬಂದು
ಪರಾಭವ ನಾಮ ವತ್ಸರದಲಿ ಸುಜನರು
ಸಿರಿವರ ಕಮಲನಾಭ ವಿಠ್ಠಲನಿಗೆ ೩

## ೧೪೭

ಬಿಡದೆ ಯಾಚಿಸಿ ಬೇಡುವೆನು ಶೌರಿ ನಿನ್ನಂಘ್ರಿ ಭಜಕರ
ಅಡಿಗಳನು ಧ್ಯಾನಿಸುವ ಮತಿ ಕೋರಿ ಪ

ಮೃಡ ಪುರಂದರರೊಡೆಯ ಶ್ರೀಹರಿ
ಕಡಲಶಯನನ ಬಿಡದೆ ಭಜಿಪರ
ಸಡಗರದಿ ಸನ್ಮಾರ್ಗ ತೋರುವ
ಬಡವರ ಆಧಾರಿ ನರಹರಿ ಅ.ಪ

ನಿನ್ನ ದಾಸರ ಸಂಗದೊಳಿರಿಸೆನ್ನ ಬೇಡುವೆನು ನಿನ್ನ
ನಿನ್ನ ನಾಮಸ್ಮರಣೆ ಅನುದಿನ
ನಿನ್ನ ಚರಣವ ಭಜಿಪ ಭಕ್ತರನು ಕೊಂಡಾಡುವಂಥ ಅ–
ಚ್ಛಿನ್ನ ಭಕ್ತರ ಕೂಟದಲಿರಿಸೆನ್ನ
ಸನ್ನುತಾಂಗನೆ ಸರ್ವವ್ಯಾಪಕ
ನಿನ್ನ ಮೊರೆ ಹೊಕ್ಕಿರುವೆ ಪಾಲಿಸು
ಪನ್ನಗಾದ್ರಿವಾಸ ವೆಂಕಟ ಆ–
ಪನ್ನ ಜನರನು ಪೊರೆವ ಕರುಣಿಯೆ ೧

## ೧೬೨

ಕೃಷ್ಣಾ ಎನ್ನ ಕಷ್ಟ ಹರಿಸೊ ಜಿಷ್ಣು ಸಾರಥಿಯೆ ಪ

ವಿಠ್ಠಲ ನಿನ್ನ ಪಾದ ಮುಟ್ಟಿ ಭಜಿಸುವರ
ಇಷ್ಟಾರ್ಥಗಳನೀವೆ ಸೃಷ್ಟಿಗೊಡೆಯ ದೇವ ಅ.ಪ

ಶಿಲೆಯಾದಹಲ್ಯೆಯ ದುರಿತವ ತರಿದೆ
ಸಲಿಲ ಮಡುವಿಲಿ ಮಕರದಿ ಕರಿಯ ರಕ್ಷಿಸಿದೆ
ಸುಲಭದಿಂದಜಮಿಳನ ದುರಿತವ ತರಿದೆ
ಕಲಿ ಸುಯೋಧನನ ಓಲಗದಿ ಗರ್ವ ಮುರಿದೆ ೧

ವಿಶ್ವರೂಪನು ನೀನೆ ವಿಶ್ವವ್ಯಾಪಕನೆ
ವಿಶ್ವೋದರನೆ ಕೃಷ್ಣಾ ವಿಶ್ವನಾಟಕನೆ
ವಿಶ್ವಬಾಯೊಳು ತೋರ್ದ ವಿಶ್ವೋದ್ಧಾರಕನೆ
ವಿಶ್ವಮಯನೆ ಸರ್ವ ವಿಶ್ವನು ನೀನೆ ೨

ಅಗಣಿತ ಮಹಿಮ ಆಶ್ಚರ್ಯನು ನೀನೆ
ಬಗೆ ಬಗೆ ನಾಮಗಳಿಂದ ಪೂಜಿತನೆ
ಖಗವರವಾಹನ ಕಂಸ ಮರ್ದನನೆ
ನಿಗಮಗೋಚರ ನಿತ್ಯತೃಪ್ತನು ನೀನೆ ೩

ಕನಕಗರ್ಭನ ಪಿತ ಕರುಣದಿ ಸಲಹೊ
ಇನಕುಲ ತಿಲಕ ಸುಂದರ ಮೇಘಶಾಮ
ದಿನಕರ ತೇಜ ಶ್ರೀ ಸನಕಾದಿ ಮುನಿನುತ
ಹನುಮನಂತರ್ಯಾಮಿ ಮಮತೇಲಿ ಸಲಹೊ ೪

ಕಮಲ ಸಂಭವನಯ್ಯ ಕಮಲಜಾತೆಯ ಪ್ರಿಯ
ಕಮಲ ಪುಷ್ಪ ಮಾಲಾಲಂಕೃತ ಹರಿಯೆ
ಕಮಲಭವೇಂದ್ರಾದಿ ಸುಮನಸರೊಡೆಯ ಶ್ರೀ-
ಕಮಲನಾಭ ವಿಠ್ಠಲ ಕರುಣದಿ ಸಲಹೊ ೫

ಮಡುವಿನೊಳು ಗಜ ಮೊರೆಯನಿಡುತಿರಲು
ನೀ ಕೇಳಿ ತ್ವರದೊಳು
ಬಿಡದೆ ರಕ್ಷಿಸಿ ಪೊರೆದ ಕರುಣಾಳು
ಬಡವ ವಿಪ್ರಗೆ ಒಲಿದೆ ಕ್ಷಿಪ್ರದೊಳು ಸೌಭಾಗ್ಯವಿತ್ತೆ
ಹುಡುಗ ತಪವಿರೆ ಅಂದು ಅಡವಿಯೊಳು
ತಡೆಯದಲೆ ನೀನೊಲಿದೆ ಭಕುತಿಗೆ
ಒಡೆಯರೈವರ ಮಡದಿ ಮೊರೆ ಕೇಳಿ
ಬಿಡದೆ ಅಕ್ಷಯವೆಂದು ಸಲಹಿದೆ
ದೃಢ ಭಕುತರನು ಬಿಡದೆ ಪೊರೆಯುವೆ ೨

ರಂಗನಾಥ ನಿನ್ನಂಘ್ರಿ ಕಮಲಗಳ ಭಜಿಸುವವರ ಭವ
ಹಿಂಗಿಸುತ ಪೊರೆದಂಥ ಚರಿತೆಗಳ
ಸಂಗರಹಿತನೆ ಬಿಡಿಸು ಬಂಧಗಳ ಸಲಹೆಂದು ಪ್ರಾರ್ಥಿಪೆ
ಅಂಗಜನಪಿತ ತರಿದೆನ್ನಪರಾಧ
ಮಂಗಳಾಂಗ ಪ್ಲವಂಗ ವತ್ಸರ
ಗಂಗಾಜನಕ ನಿನ್ನಂಘ್ರಿ ಭಜಕರ
ಹಿಂಗದಲೆ ಪಾಲಿಸುತ ಪೊರೆ ಕೃಪಾ–
ಪಾಂಗ ಕಮಲನಾಭ ವಿಠ್ಠಲನೆ ೩

## ೧೪೮

ಶ್ರೀಶ ಕೇಶವ ಮಾಧವ
ವಾಸುದೇವನ ದೇವ ವಾಸವ ವಂದಿತ ಪ

ಸಾಸಿರನಾಮನೆ ಭೂಸುರಪಾಲನೆ
ದೋಷವಿದೂರನೆ ಶೇಷಶಯನಹರಿ ೧

ಇಂದಿರಾರಮಣನೆ ನಂದಗೋಪಿಯ ಕಂದ
ಮಂದರಧರ ಗೋವಿಂದ ಗೋ ಗೋಪಪಾಲ ೨

ಬಗೆ ಬಗೆ ನಾಮಗಳಿಂದ ಪೂಜೆಯಗೊಂಬ
ಅಗಣಿತ ಮಹಿಮಗೊ ಆಶ್ಚರ್ಯಗೊ
ಖಗವಾಹನ ಕರಿರಾಜ ವರದಗೊ
ನಿಗಮವೇದ್ಯ ನಿತ್ಯ ತೃಪ್ತನಿಗೊ ೬

ಶ್ರದ್ಧೆಯಿಂದಲಿ ತನ್ನ ಭಜಿಪ ಭಕ್ತರ ಕಾಯ್ವ
ರೌದ್ರಿನಾಮ ಸಂವತ್ಸರದಿ
ಮುದ್ದು ಮೂರುತಿ ಕಮಲನಾಭ ವಿಠ್ಠಲನಿಗೆ
ಪದ್ಮಾಕ್ಷಿ ವನಮಾಲೆ ಹಾಕಿದೆಯಾ ೭

## ೧೬೧

ಆರತಿ ಎತ್ತಿರೆ ವೈಯ್ಯಾರಿಯರರಸಗೆ
ಶ್ರೀ ರಮಾಕಾಂತ ಶ್ರೀ ಶ್ರೀನಿವಾಸನಿಗೆ ಪ

ಕೇಶವ ನಾರಾಯಣ ಮಾಧವನಿಗೆ
ಶ್ರೀಶ ಗೋವಿಂದ ವಿಷ್ಣು ಮಧುಸೂದನಗೆ
ಆಸೆಲಿ ತ್ರಿವಿಕ್ರಮ ವಾಮನ ಶ್ರೀಧರಗೆ
ಸೋಸಿಲಿ ಹೃಷಿಕೇಶ ಪದ್ಮನಾಭನಿಗೆ ೧

ಧರಣಿಜಪತಿ ದಾಮೋದರ ಸಂಕರ್ಷಣನಿಗೆ
ಪರ ವಾಸುದೇವ ಪ್ರದ್ಯುಮ್ನ ಅನಿರುದ್ಧನಿಗೆ
ಪುರುಷೋತ್ತಮ ಅಧೋಕ್ಷಜ ನಾರಸಿಂಹಗೆ
ಸರಸಿಜಾಕ್ಷ ಅಚ್ಯುತ ಜನಾರ್ದನಗೆ ೨

ಮಮತೇಲಿ ಸುಜನರ ಪೊರೆವ ಉಪೇಂದ್ರನಿಗೆ
ಶ್ರಮ ಪರಿಹರಿಸುವ ಹರಿ ಶ್ರೀ ಕೃಷ್ಣನಿಗೆ
ಕಮಲದಳಾಕ್ಷಗೆ ಕಮನೀಯ ರೂಪಗೆ
ಕಮಲನಾಭವಿಠ್ಠಲಗೆ ತರುಣಿಯರು ೩

ಭುವನ ಮೋಹನರೂಪ ನವನವ ಚರಿತನೆ
ನವನೀತಧರ ಕೃಷ್ಣ ಭುವನ ವಿಲಕ್ಷಣನೆ ೩

ರಂಗನಾಯಕನೆ ಪ್ಲವಂಗ ವತ್ಸರದೊಳು
ಭಂಗಗಳಳಿಯುವ ಶೃಂಗಾರ ಮೂರುತಿ ೪

ಶ್ರಮ ಪರಿಹರಿಸುತ ಮಮತೆಯಿಂದಲಿ ಕಾಯ್ವ
ಸುಮನಸವಂದ್ಯ ಶ್ರೀ ಕಮಲನಾಭ ವಿಠ್ಠಲ ೫

## ೧೪೯

ಮಂಗಳ ಮಾಧವಗೆ ಮಾರಮಣಗೆ
ಮಂಗಳ ಶ್ರೀಧರಗೆ ಪ

ರಂಗ ರಿಪುಮದ ಭಂಗ ಭವಗಜ
ಸಿಂಗ ಕರುಣಾಪಾಂಗ ಶ್ರೀಶಗೆ
ಗಂಗಾಜನಕಗೆ ತುಂಗ ಮಹಿಮಗೆ
ಭಂಗರಹಿತಗೆ ಅನಂಗಪಿತನಿಗೆ ೧

ಭುವನ ಮೋಹನ ಸುಮನಸರ ಪ್ರಿಯ
ಕವಿಜನರ ಹೃದ್ಗೃಹ ನಿವಾಸಗೆ
ನವನವ ಲೀಲೆಗಳ ತೋರ್ದಗೆ
ನವರತುನದಾರತಿಯ ಬೆಳಗಿರೆ ೨

ಗರುಡಗಮನಗೆ ಉರಗಶಯನಗೆ
ಪರಮಪುರುಷಗೆ ಪುಣ್ಯಚರಿತಗೆ
ಉರಗಗಿರಿವಾಸನಿಗೆ ದೇವಗೆ
ಸುರರೊಡೆಯ ಶ್ರೀ ಶ್ರೀನಿವಾಸಗೆ ೩

# ೧೬೦

ವಧುವಾದೆ ಯಾರಿಗೆ ಮದನ ಗೋಪಾಲಗೊ
ಸುದತಿ ಯಶೋದೆ ನಂದ ಕಂದನಿಗೊ ಪ

ಶ್ರೀಶ ಶ್ರೀ ಕೇಶವ ನಾರಾಯಣನಿಗೊ
ಸೋಸಿಲಿ ಮಾಧವ ಗೋವಿಂದ ಹರಿಗೊ
ಸಾಸಿರ ನಾಮದ ವಿಷ್ಣು ಮಧುಸೂದನಗೊ
ಭೂಸುರ ಪಾಲ ತ್ರಿವಿಕ್ರಮ ವಾಮನಗೊ ೧

ಮುದ್ದು ಮೂರುತಿ ಶ್ರೀಧರ ಹೃಷಿಕೇಶಗೊ
ಪದ್ಮನಾಭ ದಾಮೋದರಗೊ
ಶುದ್ಧಮನದಿ ಸಂಕರ್ಷಣ ವಾಸುದೇವಗೊ
ಪ್ರದ್ಯುಮ್ನ ಅನಿರುದ್ಧ ಮೂರುತಿಗೊ ೨

ಪರಮ ಪುರುಷ ಪುರುಷೋತ್ತಮ ಅಧೋಕ್ಷಜಗೊ
ಹರುಷದಿ ನಾರಸಿಂಹ ಅಚ್ಯುತಗೊ
ಸರಸಿಜನಯನ ಜನಾರ್ದನುಪೇಂದ್ರಗೊ
ದುರಿತಕಳೆವ ಸಿರಿ ಹರಿ ಕೃಷ್ಣಗೊ ೩

ಶಂಖ ಚಕ್ರ ಗದಾ ಪದ್ಮವು ಧರಿಸಿದ
ವೆಂಕಟರಮಣಗೊ ಶ್ರೀಹರಿಗೊ
ಪಂಕಜನಯನ ಶ್ರೀರಂಗನಾಥನಿಗೊ
ಬಿಂಕದಿ ಪಾಂಡುರಂಗ ವಿಠ್ಠಲಗೊ ೪

ಘನಮಹಿಮ ಮನು ಕಂಚಿ ವರದರಾಜನಿಗೊ
ಇನಕುಲ ತಿಲಕ ಶ್ರೀರಾಮಚಂದ್ರನಿಗೊ
ವನಿತೆಯರೊಡಗೂಡಿ ಮೆರೆವ ಕೃಷ್ಣನಿಗೊ
ವನಜಾಕ್ಷ ಪಶ್ಚಿಮ ರಂಗಧಾಮನಿಗೊ ೫

ಸೌಮ್ಯನಾಮ ಸಂವತ್ಸರದಂದು
ನೇಮದಿಂದ ಭಜಿಪ ಭಕುತರ
ಕಾಮ್ಯಕರ್ಮವ ತರಿದು ಪೊರೆಯುವ
ಕಮಲನಾಭ ವಿಠ್ಠಲನ ಪ್ರತಿದಿನ ೪

## ೧೩೦

ಅನಾಥ ರಕ್ಷಕ ಆಪದ್ಬಾಂಧವ
ಶ್ರೀಪತಿ ಕೇಶವ ಮಾಧವನೆ ಪ

ಮಾತುಳಾಂತಕ ಹರಿ ಮದನ ಗೋಪಾಲನೆ
ಮಾತರಿಶ್ವಪ್ರಿಯ ಹರಿ ಶ್ರೀಶ ಅ.ಪ

ಬಿಟ್ಟ ಕಂಗಳ ಮುಚ್ಚದೆ ತಿರುಗುವ
ಬೆಟ್ಟವ ಬೆನ್ನಿನೊಳಾಂತಿರುವ
ಗಟ್ಟಿನೆಲವ ಕೆದರುತ ಬೇರರಸುವ
ಹೊಟ್ಟೆಯ ಕರುಳನೆ ಬಗೆದಿರುವ ೧

ಪೊಡವಿಯ ಬೇಡುತ ಕೊಡಲಿಯ ಪಿಡಿಯುತ
ಪೊಡವಿಪರೆಲ್ಲರ ಗೆಲಿದವನೆ
ಮಡದಿಯನರಸುತ ಕಡಲನು ಕಟ್ಟುತ
ಕಡಹಲ್ದ ಮರನೇರ್ದ ಮೃಡಸಖನೆ ೨

ಬುದ್ಧನಾಗಿ ತ್ರಿಪುರರ ಗೆಲಿದವನೆ
ಶುದ್ಧ ಹಯವನೇರಿ ಮೆರೆದವನೆ
ಹದ್ದುವಾಹನವೇರುತ ನಲಿದಾಡುವ
ಪದ್ಮನಾಭ ಪುರುಷೋತ್ತಮನೆ ೩

ಅಗಣಿತ ಮಹಿಮನೆ ಖಗವರವಾಹನ
ನಿಗಮವೇದ್ಯ ನಿರ್ಮಲಚರಿತ

ದಂತಿವರದ ಅನಂತ ಮಹಿಮ ತನ್ನ
ಕಾಂತೆ ಸಹಿತ ಒಲಯುವನವರ್ಗೆ ೪

ಕಮಲಸಂಭವಪಿತ ನಮಿಸಿ ಸ್ತುತಿಸುವೆನು
ಕಮಲ ಪತ್ರಾಕ್ಷಹರಿ ಕರುಣಾನಿಧೆ
ಕಮಲನಾಭ ವಿಠ್ಠಲ ವಿಠ್ಠಲ ರಕ್ಷಿಸೆನೆ ಹೃ–
ತ್ಕಮಲದಿ ಪೊಳೆಯುವ ಸುಜನರಿಗೆ ೫

## ೧೫೯

ಎತ್ತಿದರಾರತಿ ಮುತ್ತೈದೆಯರು ಬೇಗ
ಅರ್ಥಿಯಿಂದಲಿ ಪಾಡಿ ಅಚ್ಚುತನರಸಿಗೆ ಪ

ಇಂದಿರಾದೇವಿ ಸುಗಂಧ ಸುಂದರಿ ನಮ್ಮ
ಮಂದಿರದೊಳು ನಲಿದಾಡುತಲಿಹ ತಾಯೆ
ಚಂದಿರವದನೆ ಸುಂದರಿ ಶಾಂತಿ ಜಯಮಾಯೆ
ಇಂದಿರೇಶನ ಪಟ್ಟದರಸಿ ವರ ಲಕ್ಷುಮಿಗೆ ೧

ಕರುಣದಿ ವರಗಳ ಕರೆದು ಕೊಡುವಳೆಂಬ
ಬಿರುದು ನಿನ್ನದು ತಾಯೆ ಕೊಡುವರ ಅಭಯವ
ಗರುಡಗಮನನ ವಕ್ಷಸ್ಥಳದಲಿ ವಾಸಿಸು–
ತಿರುವ ಸೌಭಾಗ್ಯದ ಖಣಿಯೆ ರಕ್ಷಿಸು ಎಂದು ೨

ಪದ್ಮಮುಖಿಯೆ ಪದ್ಮಪಾಣಿಯೆ ಪದ್ಮಾಕ್ಷಿ
ಪದ್ಮಲೋಚನೆ ಪದ್ಮಸಂಭವೆ ಪೊಳೆವ ಹೃ–
ತ್ಪದ್ಮದಿ ಕಮಲನಾಭ ವಿಠ್ಠಲನ ತೋರಿ
ಪದ್ಮನೇತ್ರೆಯೆ ಶ್ರೀ ಪದ್ಮಾಲಯೆ ಪೊರೆ ಎಂದು ೩

ಭ್ರಮಿಸಿ ಇಹ ಸುಖದಿ ಮನ ಶ್ರಮ ಪಡುತಲಿರೆ ದೇವ
ರಮೆಯ ರಮಣನೆ ಪೊರೆಯೊ ಮಮತೆಯನು ಬಿಡದೆ
ಕಮಲಸಂಭವಜನಕ ಕಮಲನಾಭ ವಿಠ್ಠಲ
ಸುಮನಸರ ಒಡೆಯ ಹೃತ್ಕಮಲದಲಿ ಪೊಳೆವ ೯

## ೧೫೮

ಯದುಕುವರನು ಹರಿ ಮದನ ಮೋಹನ ಕೃಷ್ಣ
ಉದಧಿ ಶಯನ ಹರಿ ಮಾಧವನ ಪ

ಮದಗಜಗಮನೆ ಶ್ರೀ ಪದುಮಲೋಚನೆ ಪ್ರಿಯ
ಅದ್ಭುತ ಮಹಿಮ ಶ್ರೀ ಅಚ್ಚುತನ ಅ.ಪ

ಇಂದಿರೆ ರಮಣ ಗೋವಿಂದನ ಮಹಿಮೆಯ
ಒಂದೆ ಮನದಿ ಸ್ತುತಿಸುವ ಜನರ
ಕುಂದೆಣಿಸದೆ ಮುಚುಕುಂದ ವರದ
ಹೃನ್ಮಂದಿರದಲಿ ನಲಿದಾಡುವನು ೧

ಗೋಕುಲಪತಿ ಜಗದ್ವ್ಯಾಪಕ ಹರಿ ಎಂದ-
ನೇಕ ವಿಧದಿ ಸ್ತುತಿಸುವ ಜನರ
ಶೋಕಗಳಳಿದು ಏಕಾಂತ ಭಕ್ತರೊಳಿಟ್ಟು
ತೋಕನಂದದಿ ಪರಿಪಾಲಿಸುವ ೨

ಪದ್ಮನಾಭನ ಪಾದಪದ್ಮವ ಸ್ಮರಿಸುತ
ಶುದ್ಧಮನದಿ ಪಾಡಿ ಪೊಗಳುವರಾ
ಸಿದ್ಧಾರ್ಥನಾಮ ವತ್ಸರದಲಿ ಸುಜನರ
ಹೃದ್ರೋಗವಳಿಯುತ ಸಲಹುವನೂ ೩

ಚಿಂತೆ ಎಲ್ಲವ ಬಿಟ್ಟೀ ವತ್ಸರದಲಿ ಲಕ್ಷ್ಮೀ-
ಕಾಂತನನೇಕ ವಿಧದಿ ಸ್ಮರಿಸೆ

ಬಗೆಬಗೆಯಿಂದಲಿ ಭಜಿಸುವ ಭಕುತರ
ಅಘನಾಶನ ಸುಜನರ ಪ್ರಿಯ ೪

ಸೌಮ್ಯ ವತ್ಸರದಿ ಸುಂದರಶ್ಯಾಮನ
ಸಾಮಗಾನಲೋಲನ ಭಜಿಸಿ
ಕಾಮ್ಯಕರ್ಮಗಳ ತ್ಯಜಿಸಲು ಹರುಷದಿ
ಕಮಲನಾಭ ವಿಠ್ಠಲ ಒಲಿವ ೫

## ೧೫೧

ಮಾಧವ ಮಧುಸೂದನ ಹರಿ ಜೋ ಜೋ
ಯಾದವ ರಾಯ ಶ್ರೀರಂಗನೆ ಜೋ ಜೋ ಪ

ವಸುದೇವ ದೇವಕಿ ಸುತನಾಗುದಿಸಿ
ವಸುಧೆಯ ಭಾರವನಿಳುಹಿದೆ ಜೋ ಜೋ ೧

ಶುಕಶೌನಕ ನಾರದಮುನಿ ವಂದ್ಯ
ಅಕಳಂಕ ಚರಿತ ಅಚ್ಯುತಾನಂತ ಜೋ ಜೋ ೨

ಶಿಶುರೂಪನೆತ್ತುತ ಮುದ್ದಿಸುತಿಹ
ಅಸುರೆ ಪೂತಣಿ ಅಸುಹೀರಿದೆ ಜೋ ಜೋ ೩

ಬಂಡಿಯ ರೂಪದಿ ಬಂದಸುರನ ಸಿರ
ಚಂಡಾಡುತ ನಲಿದಾಡಿದೆ ಜೋ ಜೋ ೪

ಪೊಂಗೊಳಲೂದುತ ಗಂಗೆಯೊಳಿಹ ಕಾ–
ಳಿಂಗನ ಪೆಡೆ ತುಳಿದಾಡಿದೆ ಜೋ ಜೋ ೫

ಗೋಪಾಲಕರೊಡನಾಡುತ ನಲಿಯುತ
ಪಾಪಿ ಖಳನ ತರಿದಾಡಿದೆ ಜೋ ಜೋ ೬

ಮಡುವಿನಲಿ ಗಜರಾಜ ಪಿಡಿದ ಮಕರಿಗೆ ಸಿಲುಕಿ
ಮಡದಿ ಮಕ್ಕಳನಗಲಿ ಕಡೆಗೆ ಸೊಂಡಿಲಲಿ
ಪಿಡಿದ ಕುಸುಮವನು ಜಗದೊಡೆಯಗರ್ಪಿತವೆನಲು
ದಡದಡನೆ ಬಂದೆಯೊ ಮಡದಿಗ್ಹೇಳದಲೆ ೩

ಅಂದು ದೂರ್ವಾಸಮುನಿ ಬಂದು ಶಿಷ್ಯರ ಸಹಿತ
ಇಂದೆಮಗೆ ಹಸಿವೆನಲು ನೊಂದು ಶ್ರೀಹರಿಯೆ
ತಂದೆ ನೀ ಸಲಹೆನಲು ಬಂದೆ ಬಹಳ್ಹಸಿವೆಯಲಿ
ಒಂದು ಪತ್ರದ ಶಾಖ ಉಂಡು ಸಲಹಿದೆಯೊ ೪

ಹಿಂದಜಾಮಿಳ ತನ್ನ ಬಂಧುಬಳಗವ ತ್ಯಜಿಸಿ
ಅಂದು ಇಹಸುಖದಿ ಆನಂದ ಪಡುತಿರಲು
ಬಂದರಾಗ ಯಮಭಟರು ನಿಂದು ಬಾಧಿಸುತಿರಲು
ಕಂದನಾರಗನೆನಲು ಅಂದು ಸಲಹಿದೆಯೊ ೫

ಚಿಕ್ಕವನು ಪ್ರಹ್ಲಾದ ಮಕ್ಕಳಾಟದ ಧ್ರುವನು
ರಕ್ಕಸಾಂತಕನ ಮೊರೆ ಇಕ್ಕಿ ಪ್ರಾರ್ಥಿಸಲು
ತಕ್ಕವರಗಳನಿತ್ತು ತಕ್ಕೈಸಿ ಅಣುಗನನು
ಮಿಕ್ಕಭಕುತರ ಪೊರೆದೆ ಲಕ್ಕುಮಿಯ ರಮಣ ೬

ಈ ಪರಿಯಲಿ ಬಹುಭಕುತರಾಪತ್ತುಗಳ ಹರಿಸಿ
ಶ್ರೀಪತಿಯ ರಕ್ಷಿಸಿದಿ ಆಪನ್ನಜನರ
ಗೋಪತಿ ಕೃಷ್ಣ ಜಗದ್ವ್ಯಾಪಕನೆ ನೀ ಸಲಹಿ
ತಾಪಸರ ಒಡೆಯ ಹೃದ್ವ್ಯಾಕುಲವ ಕಳೆವೆ ೭

ಕಾಳಿ ಮಡುವನೆ ಧುಮುಕಿ ಕಾಳಿಂಗನ್ಹೆಡೆ ತುಳಿದೆ
ಕಾಳದೇವಿಯರಮಣ ಕಾಲಿಗೆರುಗುವೆನು
ಕಾಳಯುಕ್ತಿನಾಮ ಸಂವತ್ಸರದಿ ಸುಜನರಿಗೆ
ಭಾಳ ಸುಖಹರುಷಗಳ ಲೀಲೆ ತೋರಿಸುವ ೮

ಸಾಧಾರಣ ವತ್ಸರದಲಿ ಸಲಹುವ
ಶ್ರೀದ ಕಮಲನಾಭ ವಿಠ್ಠಲ ಸುಜನರ ೭

## ೧೫೨

ಬಾರಯ್ಯ ಬಾರಯ್ಯ ಭಕ್ತವತ್ಸಲ ಹರಿ ಶ್ರೀಕೃಷ್ಣ ಪ

ಭಕ್ತರು ಬಂದು ದ್ವಾರದಿ ನಿಂದು
ಭಕ್ತಿಲಿ ಹಾಡುತ ಪಾಡುತಲಿರುವರು
ಮುಕ್ತಿದಾತ ನೀನಲ್ಲದೆ ಸರ್ವ-
ಶಕ್ತರಿನ್ಯಾರಿಹರ್‍ಯೆ ಎನ್ನುತ ಪೊಗಳ್ವರು ೧

ತಾಳಮೇಳದವರೆಲ್ಲರು ನಿನ್ನಯ
ಊಳಿಗ ಮಾಡಬೇಕೆನುತಲಿ ಬಂದು
ವೇಳೆ ವೇಳೆಗೆ ತಮ್ಮ ಸೇವೆಯ ಸಲಿಸುತ
ಭಾಳ ಸಂಭ್ರಮದಿಂದ ಹಾರ್‍ಯೆಪರೊ ಹರಿ ೨

ತುಂಬುರು ನಾರದರ್ವೀಣೆಯ ನುಡಿಸಲು
ರಂಭಾದ್ಯಪ್ಸರ ಸ್ತ್ರೀಯರು ನರ್ತಿಸೆ
ಅಂಬುಜನಾಭನೆ ನಂಬಿಹ ವಿಶ್ವ ಕು-
ಟುಂಬಿಯೆ ಬಾ ಬಾರೆನ್ನುತ ಸ್ತುತಿಪರು ೩

ಅಂಬರದಲಿ ದೇವತೆಗಳೆಲ್ಲರು ನೆರೆದು
ತುಂಬಿ ಪುಷ್ಪವೃಷ್ಟಿಗಳನೆ ಮಾಡುತ
ಇಂಬಿಲ್ಲದೆ ಪಾರಿಜಾತ ಕುಸುಮ ಮಳೆ
ಗಂಭೀರದಿ ಸುರಿಸುತ ಪ್ರಾರ್ಥಿಸುವರು ೪

ಅತ್ರಿ ವಸಿಷ್ಠ ಗೌತಮ ಮೊದಲಾಗಿ
ರಾತ್ರಿಹಗಲು ಎಡೆಬಿಡದಲೆ ಸ್ತುತಿಸುತ
ವೃತ್ರಾರಿಯ ಸುತನಿಗೆ ಸಾರಥಿಯೆ ವಿ-
ಚಿತ್ರ ವ್ಯಾಪಾರಿ ಶ್ರೀಹರಿ ಎಂದು ಪೊಗಳ್ವರು। ೫

ಅಂಗಜಜನಕ ಗೋಪಾಂಗನೆ ಲೋಲ ಶ್ರೀ–
ಮಂಗಳ ಮೂರುತಿ ಬಾ ಹರಿಯೆ ೩

ಗಂಗಾಜನಕಗೆ ಭೃಂಗಕುಂತಳೆಯರು
ರಂಗು ಮಾಣಿಕದಾರತಿ ಬೆಳಗೆ
ಪೈಂಗಳನಾಮ ಸಂವತ್ಸರದಲಿ ಭವ
ಭಂಗವ ಮಾಡಲು ಬಾ ಹರಿಯೆ ೪

ಸುಮನಸರೊಡೆಯಗೆ ಭ್ರಮರ ಕುಂತಳೆಯರು
ಘಮಘಮಿಸುವ ಸುಮಮಾಲೆಗಳ
ಕಮಲನಾಭ ವಿಠ್ಠಲಗರ್ಪಿಸುವರು
ಶ್ರಮ ಪರಿಹರಿಸಲು ಬಾ ಹರಿಯೆ ೫

## ೧೫೭

ಏನು ಮಾಯವೊ ಹರಿಯೆ ಶ್ರೀನಿವಾಸನೆ ನಿನ್ನ
ಧ್ಯಾನಿಸುವವರನು ಪೊರೆವೆ ಸಾನುರಾಗದಲಿ ಪ

ಜ್ಞಾನಿಗಳು ಹಗಲಿರುಳು ಮೌನದಿಂದಲಿ ಭಜಿಸಿ
ದಾನವಾಂತಕ ನಿನ್ನ ಧ್ಯಾನ ಮಾಡುವರು ಅ.ಪ

ಬಡತನದಿ ಬಹು ವ್ಯಥೆಯ ಪಡುತ ಸತಿಸುತರಿರಲು
ನುಡಿಯೆ ಭಯ ಭಕ್ತಿಯಲಿ ಒಡೆಯರಿಲ್ಲೆಮಗೆ
ಮೃಡಸಖನು ಇಹನೆನಲು ಹಿಡಿಯವಲಿಯ ಕೊಡಲು
ಕೆಡದ ಸೌಭಾಗ್ಯವನು ಒಡನೆ ನೀಡಿದೆಯೊ ೧

ಅಂದು ದುಶ್ಶಾಸನ ನೃಪನಂದನೆಯ ಬಾಧಿಸುತ
ನಿಂದು ಸೀರೆಯ ಸೆಳೆಯೆನೊಂದು ದುಃಖಿಸುತ
ಇಂದಿರಾಪತಿ ಕೃಷ್ಣ ಇಂದೆನಗೆ ನೀನೆ ಗತಿ
ಎಂದೊಡಕ್ಷಯವಿತ್ತು ಅಂದು ಸಲಹಿದೆಯೊ ೨

ಅಣುಮಹದ್ರೂಪನೆ ಘನಮಹಿಮನೆ ನಿನ್ನ
ಮಣಿದು ಬೇಡಿ ಕೈಮುಗಿಯುತ ಸ್ತುತಿಪರು
ಪ್ರಣವ ಪ್ರತಿಪಾದ್ಯನೆ ನಿನ್ನ ಗುಣಗಳ
ಎಣಿಸಲಸಾಧ್ಯವೆನುತ ಕೊಂಡಾಡ್ವರು ೬

ನವನವ ರೂಪದಿ ನಲಿಯುವ ದೇವನೆ
ನವವಿಧ ಭಕುತರು ನಮಿಸುತ ಕರೆವರು
ಭುವನ ಮೋಹನ ಸುಂದರಮೂರ್ತಿಯೆ ಎಂದು
ಕವಿಗಳು ಪೊಗಳುತ ಕುಣಿಯುತಲಿರುವರು ೭

ಎಡಬಲದಲಿ ಶ್ರೀ ಭೂದೇವಿಯರಿರೆ
ಬಿಡದೆ ಛತ್ರಚಾಮರಗಳಿಂದೊಪ್ಪುತ
ತಡಮಾಡದೆ ಬಾ ಮಡದಿಯರ ಸಹಿತದಿ
ದಡ ದಡ ಬಾರೆಂದು ಬಡ ಬಡ ಕರೆವರು ೮

ವಿಶ್ವರೂಪಕ ವಿಶ್ವನಾಮಕ
ವಿಶ್ವತೋಮುಖ ವಿಶ್ವನಾಟಕ
ವಿಶ್ವವ್ಯಾಪಕ ವಿಶ್ವಾಧಾರಕ
ವಿಶ್ವ ಕುಟುಂಬಿಯೆ ವಿಶ್ವಾಸದಿ ಬಾ ೯

ವಿರೋಧಿಕೃತು ಸಂವತ್ಸರ ಬರುತಿರೆ
ಪರೋಪಕಾರವ ಮಾಡುತ ಸುಜನರು
ವಿರೋಧಿಗಳ ದೂರಿಡುತಲಿ ಶ್ರೀ ಹರಿ
ಸರೋಜದಳ ನೇತ್ರನ ಸ್ತುತಿಸುವರು ೧೦

ಕಮಲಾಕ್ಷಿಯ ಒಡಗೂಡುತ ಬಾ ಬಾ
ಕಮಲಾಸನ ಜನಕನೆ ಹರಿ ಬಾ ಬಾ
ಕಮಲನಾಭ ವಿಠ್ಠಲ ಬೇಗ ಬಾರೆಂದು
ಸುಮನಸ ವಂದ್ಯನ ಸ್ಮರಿಸುತ ಕರೆವರು ೧೧

## ೧೫೩

ಹೆಜ್ಜೆ ತೋರೆ ಕಾಲಗೆಜ್ಜೆ ತೋರೆ
ಅರ್ಜುನ ಸಾರಥಿ ಪಟ್ಟದ ರಾಣಿ ಹೆಜ್ಜೆ ತೋರೆ ಪ

ಕಾಲಲಂದಿಗೆ ನೂಪುರವಿಟ್ಟ ಹೆಜ್ಜೆ ತೋರೆ
ಕಾಳಿಮರ್ದನ ಕೃಷ್ಣನರಸಿಯೆ ಹೆಜ್ಜೆ ತೋರೆ
ಕಾಲಸರವು ಪಾಡಗನಿಟ್ಟ ಹೆಜ್ಜೆ ತೋರೆ
ಕಾಳಿಂದಿ ರಮಣನ ಸತಿಯೆ ಹೆಜ್ಜೆ ತೋರೆ ೧

ಬಡವರ ಮನೆಗೆ ನಡದು ಬರುವ ಹೆಜ್ಜೆ ತೋರೆ
ಬಡನಡು ಬಳುಕುತ ನಡೆಯುವ ಪುಟ್ಟ ಹೆಜ್ಜೆ ತೋರೆ
ಸಡಗರದಲಿ ಹರಿಯೊಡನೆ ಬರುವ ಹೆಜ್ಜೆ ತೋರೆ
ಪೊಡವಿಗೊಡೆಯ ಶ್ರೀ ಕೃಷ್ಣನರಸಿಯೆ ಹೆಜ್ಜೆ ತೋರೆ ೨

ಮೆಲ್ಲನೆ ಮೆಲ್ಲನೆ ನಡದು ಬರುವ ಹೆಜ್ಜೆ ತೋರೆ
ಲುಲ್ಲುರುಳಿ ಪೈಜನಗಳು ಹೊಳೆವ ಹೆಜ್ಜೆ ತೋರೆ
ಉಲ್ಲಾಸದಿ ಸುರರೆಲ್ಲರು ಸ್ತುತಿಪ ಹೆಜ್ಜೆ ತೋರೆ
ಫುಲ್ಲಾಕ್ಷನ ಒಡಗೂಡುತ ಬರುವ ಹೆಜ್ಜೆ ತೋರೆ ೩

ಪದ್ಮ ರೇಖೆಗಳಿಂದ ಶೋಭಿಪ ಹೆಜ್ಜೆ ತೋರೆ
ಪದ್ಮನಾಭನ ಕೂಡಿ ಬರುವ ಹೆಜ್ಜೆ ತೋರೆ
ಪದ್ಮದೊಳು ಪುಟ್ಟಿರುವ ಪುಟ್ಟ ಹೆಜ್ಜೆ ತೋರೆ
ಪದ್ಮಮುಖಿಯೆ ಶ್ರದ್ಧೆಲಿ ಭಜಿಪರು ಹೆಜ್ಜೆ ತೋರೆ ೪

ವಿರೋಧಿಕೃತ ಸಂವತ್ಸರ ಬರುತಿರೆ ಹೆಜ್ಜೆ ತೋರೆ
ವಿರೋಧಿಗಳ ದೂರೋಡಿಪ ದಿವ್ಯ ಹೆಜ್ಜೆ ತೋರೆ
ಸರೋಜದಳದೊಳು ಶೋಭಿಪ ದಿವ್ಯ ಹೆಜ್ಜೆ ತೋರೆ
ಸುರರೆಲ್ಲರು ಕೊಂಡಾಡುತ ಸ್ತುತಿಪ ಹೆಜ್ಜೆ ತೋರೆ ೫

ಅಂಗಜಜನಕ ವಿಹಂಗವಾಹನನ ಪಾ–
ದಂಗಳ ಸ್ಮರಣೆಲಿ ನಲಿವ ಮನವ ಕೊಡು ೩

ಪಕ್ಷಿವಾಹನ ಕಮಲಾಕ್ಷನ ಮಹಿಮೆಯ
ವೀಕ್ಷಿಸಿ ಮನದಿ ಹಿಗ್ಗುವ ಜನನಿ
ರಾಕ್ಷಸನಾಮ ವತ್ಸರದಲಿ ಭಕುತರ
ಮೋಕ್ಷದಾತನು ಸಲಹುವ ಸುಜನರನು ೪

ಕಮಲಸಂಭವ ಕಮಲಾಲಯೆ ಹರಿಪಾದ
ಕಮಲಭೃಂಗಳೆ ಹಿರಣ್ಯಹರಿಣಿ
ಕಮಲನಾಭ ವಿಠ್ಠಲನೊಡಗೂಡಿ ಹೃ–
ತ್ಕಮಲದಿ ಶೋಭಿಸು ಎನುತ ಸ್ತುತಿಸುವೆನು ೫

## ೧೫೬

ರಂಗನೆ ಬಾ ಮನಮಂದಿರಕೆ
ಶೃಂಗಾರದ ಶ್ರೀ ಹರಿ ಶೌರೇ ಪ

ನಗುತ ನಗುತ ಬಾ ಖಗವಾಹನ ಹರಿ
ಬಗೆ ಬಗೆ ಕ್ರೀಡೆಗಳ ತೋರುತಲಿ
ಝಗ ಝಗಿಸುವ ಪೀತಾಂಬರಧಾರಿಯೆ
ಅಗಣಿತ ಗುಣನಿಧಿ ಬಾ ಹರಿಯೆ ೧

ಪಕ್ಷಿವಾಹನ ಪುರುಷೋತ್ತಮ ಶ್ರೀಹರಿ
ರಕ್ಷಿಸಿ ಕಾಪಾಡುವ ಜಗವ
ಕುಕ್ಷಿಯೊಳಡಗಿಸಿ ಸಲಹುವ ಸುಜನರ
ರಕ್ಷಿಸಿ ಪೊರೆಯಲು ಬಾ ಹರಿಯೆ ೨

ಪೊಂಗೊಳಲೂದುತ ಮಂಗಳ ಚರಿತ ಹೃ–
ದಂಗಳದೊಳು ನಲಿದಾಡುತಲಿ

ನಿಗಮವೇದ್ಯಳೆ ನಿನ್ನ ಪೊಗಳುವೆ ಹೆಜ್ಜೆ ತೋರೆ
ಅಗಣಿತ ಮಹಿಮನ ಗುಣಗಳ ಪೊಗಳುವೆ ಹೆಜ್ಜೆ ತೋರೆ
ಬಗೆ ಬಗೆ ಭಕುತರು ಪೂಜಿಪ ನಿನ್ನ ಹೆಜ್ಜೆ ತೋರೆ
ಖಗವಾಹನನೊಡಗೂಡುತ ಬರುವ ಹೆಜ್ಜೆ ತೋರೆ ೬

ಕಮಲ ಮುಖಿಯೆ ಕರುಣವ ಮಾಡಿ ಹೆಜ್ಜೆ ತೋರೆ
ಕಮಲನಾಭ ವಿಠ್ಠಲನ್ನ ರಾಣಿ ಹೆಜ್ಜೆ ತೋರೆ
ಕಮಲಾಕ್ಷಿಯರಿಂದ ಪೂಜೆಗೊಳ್ಳುವ ಹೆಜ್ಜೆ ತೋರೆ
ಸುಮನಸವಂದ್ಯನ ಸತಿಯೆ ನಮಿಪೆ ಹೆಜ್ಜೆ ತೋರೆ ೭

## ೧೫೪

ಆನಂದ ಆನಂದವು ಈ ಜಗದಿ
ಗೋವಿಂದನ ದಯದಿ ಪ

ಆನಂದವು ಗೋವಿಂದನ ನಾಮವು
ಆನಂದದಿ ಸ್ಮರಿಸುವ ಸುಜನರಿಗೆ ಅ.ಪ

ಬಂಧು ಬಾಂಧವರೆಲ್ಲರು ಕೂಡುತಲಿ ಒಂದೇ ಮನಸಿನಲಿ
ಇಂದಿರೇಶನ ಸ್ಮರಣೆಯ ಮಾಡುತಲಿ
ನಂದ ಯಶೋದೆಯ ಕಂದನೆ ಪರನೆಂದು
ಚಂದದಿ ಕುಣಿದಾಡುತ ಸ್ತುತಿ ಮಾಡಲು
ಇಂದಿರೇಶನು ಭವ ಬಂಧನ ಬಿಡಿಸುವ–
ನೆಂದು ಮನದಿ ಆನಂದ ಪಡುವರಿಗೆ ೧

ಪಕ್ಷಿವಾಹನ ಪುರುಷೋತ್ತಮ ಹರಿಯು ಆನಂದ ವತ್ಸರದಿ
ರಕ್ಷಿಸಿ ಪೊರೆವನು ಭಕುತರ ತ್ವರದಿ
ಅಕ್ಷರೇಢ್ಯ ಕಮಲಾಕ್ಷನೆ ಪರನೆಂ–
ದೀಕ್ಷಿಪ ಭಕುತರ ರಕ್ಷಿಸಿ ಪೊರೆವ ಪ–

ರೀಕ್ಷಿತಗೊಲಿದಂದದಿ ಪರಮಾತ್ಮನು
ರಕ್ಷ ಶಿಕ್ಷಕನೆಂದೆನುವ ಸುಜನರಿಗೆ ೨

ಕಮಲಾಪತಿ ಕಾಮನ ಪಿತ ಶ್ರೀಹರಿಯು ಕಾರುಣ್ಯ ನಿಧಿಯು
ಕಮಲಾಕ್ಷನು ಕಾಪಾಡುವ ಸುಜನರನು
ಕಮಲಭವೇಂದ್ರಾದ್ಯಮರರು ಪೊಗಳಲು
ಕಮಲನಾಭ ವಿಠ್ಠಲ ಜಯ ಜಯ ಎಂದು
ಸುಮನಸರೊಡೆಯ ಸುಂದರ ಶ್ರೀಹರಿ ತಾ
ಶ್ರಮ ಪರಿಹರಿಸುವನೆನುವ ಸುಜನರಿಗೆ ೩

## ೧೫೫

ಹರಿಸಿರಿ ರಮಣಿಯೆ ಕರಗಳ ಮುಗಿಯುವೆ
ವರಮತಿ ನೀಡೆನಗೆ ಪ

ಸರಸಿಜಾಕ್ಷನ ವಕ್ಷಸ್ಥಳದಿ ನಿವಾಸಿಯೆ
ನಿರುತದಿ ಹರಿಪಾದ ಸ್ಮರಣೆ ಎನಗೆ ಕೊಡು ಅ.ಪ

ಮಂದರೋದ್ಧರ ಗೋವಿಂದ ಗುಣಗಳಾ–
ನಂದದಿ ಸ್ತುತಿಸಿ ಹಿಗ್ಗುವ ಜನನಿ
ಇಂದಿರೆ ರಮೆ ಭಾರ್ಗವಿಯೆ ನಿನ್ನಯ ಪಾದ
ದ್ವಂದ್ವಕೆ ನಮಿಪೆ ಸುಗಂಧಿ ಸುಂದರಿಯೆ ೧

ಪರಮಪುರುಷ ಪುರುಷೋತ್ತಮನರಸಿಯೆ
ಪರಮ ಮಂಗಳೆ ಪಾವನಿ ಜನನಿ
ಸುರರು ಕಿನ್ನರರು ಕಿಂಪುರುಷರು ಸ್ತುತಿಪರು
ವರ ಮಹಾಲಕ್ಷ್ಮಿ ಸುಂದರಿ ಜಯ ಜಯ ಎಂದು ೨

ಗಂಗಾಜನಕ ಪಾಂಡುರಂಗ ನಿಜ ಸತಿ
ಭೃಂಗಕುಂತಳೆ ಭಾಗ್ಯದ ಖಣಿಯೆ

ಮಧುರೇಲಿ ಜನಿಸಿದವಗೆ
ಮಾವಕಂಸನ ತರಿದವಗೆ ಮಧುವೈರಿಹರಿಗೆ
ಮುರಳಿನಾದಗೈದು ಸ್ತ್ರೀಯರ
ಮರುಳುಗೊಳಿಸಿ ಆಡಿದವಗೆ
ಮುರವೈರಿ ಹರಿ ಮುಚುಕುಂದ
ವರದನ ಪಾಡುತಲಿ ಮುದದಲಿ ೨

ಗೋಪಾಲರೊಡಗೂಡುತಲಿ
ಗೋವರ್ಧನವೆತ್ತಿದವಗೆ ಗೋವಿಂದ ಹರಿಗೆ
ಗೋಪಿಯರ ಮನೆಯ ಪೊಕ್ಕು
ಬೇಕೆನ್ನುತ ಪಾಲ್ಬೆಣ್ಣೆ ಸವಿದ
ಶ್ರೀಕಾಂತ ಕಮಲನಾಭ ವಿಠ್ಠಲನಿಗೆ
ಸುದತಿಯರು ತ್ವರಿತದಿ ೩

## ೧೪೨

ಸುಂದರ ಮೂರುತಿ ಹರಿಯೆ ಬಾ–
ರೆಂದು ಕಶ್ಯಪ ಋಷಿ ಅದಿತಿಯರು
ಮಂದಹಾಸದಿ ನಮ್ಮ ಮಂದಿರಕೀಗ ಗೋ–
ವಿಂದ ಬಾ ಶ್ರೀಮುಕುಂದ ಬಾ ಯಾದವ
ವೃಂದ ಬಾ ಬಲುಮುದದಿಂದ ಬಾ ಬಾ–
ರೆಂದು ಕರದಾರು ಶೋಭಾನೆ ೧

ಅಚ್ಚುತಾನಂತ ಶ್ರೀಹರಿ ನೀನು
ಸಚ್ಚಿದಾನಂತಾತ್ಮನೆ ನೀನು
ಮಿತ್ರೆ ಲಕುಮಿ ಒಡಗೂಡುತ ಬಾರೆಂದು
ಅತ್ರಿಯರು ಸ್ತುತಿಪರು ಮಿತ್ರೆಯರು ಪಾಡ್ವರು
ಕೀರ್ತಿಪರು ಅನಸೂಯಾತ್ರಿಯರು
ಬಾರೆಂದು ಕರೆದಾರು ಶೋಭಾನೆ ೨

ಪಕ್ಷಿವಾಹನ ಪ್ರದ್ಯುಮ್ನನಿಗರ್ಪಿಸಿ
ಲಕ್ಷ ಪದಗಳ ಕ್ಷಿಪ್ರದಲಿ ೧

ಜಯ ಜಯ ಜಯವೆನ್ನುತ ಘೋಷದಲಿ
ಜಯಾಪತಿ ಸಂಕರ್ಷಣನ
ಮಹಿಮೆಯ ಪೊಗಳುತ ಪದಲಕ್ಷಗಳನು
ಅನಿಮಿಷೇಶನಿಗೆ ಅರ್ಪಿಸುತ ೨

ಶೇಷ ಶಯನ ಸರ್ವೇಶನ ಸ್ತುತಿಸುತ
ಸಾಸಿರ ನಾಮಗಳಿಂ ಭಜಿಸಿ
ವಾಸುದೇವನಿಗೆ ಅರ್ಪಿಸಿ ಲಕ್ಷವು
ಭಾಸುರಾಂಗನನು ಪೂಜಿಸುತ ೩

ನಾರಾಯಣನನು ನಮಿಸುತ ಪ್ರತಿದಿನ
ಬಾರಿಬಾರಿಗೂ ಪ್ರಾರ್ಥಿಸುತ
ಶ್ರೀ ರಮಣನಿಗರ್ಪಿಸಿ ಲಕ್ಷಕೆ ಪಾದ
ನ್ಯೂನತೆಯಾಗಿರಲದ ಕಂಡು ೪

ಬೇಗದಿ ಪುತ್ರನ ನೋಡುತ ಹರುಷದಿ
ಕೇಳ್ಳೈ ಕಂದ ಎನ್ನಯ ವಚನ
ನಾರದವಂದ್ಯನ ಗುಣಗಳ ಪಾಡುತ
ಪೂರೈಸಿ ಪಂಚ ಲಕ್ಷಗಳ ೫

ಆ ನುಡಿ ಕೇಳುತಲಾಕುವರನು
ನೋಡುವೆ ಸಾಧ್ಯವೆ ಎನಗೆನುತ
ಪಾದಕೆ ನಮಿಸುತ ನಿಂದಿರಲಾಗಲೆ
ನೋಡುತ ಪೇಳಿದರೀ ನುಡಿಯ ೬

ಇಂದಿಗೆ ಸಾಧ್ಯವಿಲ್ಲದಿದ್ದರೂ ಇ-
ನ್ನೊಂದು ಜನ್ಮದಲ್ಲಿದ್ದು ನಡಿಸು

ಚಲ್ವನವರತ್ನದಾರತಿ ಎತ್ತುತಾ
ಜಯಮಂಗಳಂ ನಿತ್ಯ ಶುಭಮಂಗಳಂ ೫

ರೇಣುಕಾ ಸಹಿತ ಜಗದಗ್ನಿ ಋಷಿಗಳು ತಮ್ಮ
ಧ್ಯಾನಗೋಚರನಾದ ಪರಮಾತ್ಮನ
ಮಾನಿನಿಮಣಿ ಲಕುಮಿಯೊಡನೆ ಶ್ರೀಕೃಷ್ಣನಿಗೆ
ನೀಲಮಾಣಿಕ್ಯದ ಆರತಿ ಎತ್ತುತ
ಜಯಮಂಗಳಂ ನಿತ್ಯ ಶುಭಮಂಗಳಂ ೬

ಪರಮಮಂಗಳೆಯಾದ ಅರುಂಧತೀ ಸತಿ ಸಹಿತ
ವಶಿಷ್ಠ ಋಷಿಗಳು ಇಷ್ಟಮೂರುತಿಯಾದ
ವರಕಮಲನಾಭ ವಿಠ್ಠಲನ ಸ್ಮರಿಸುತ ನಿತ್ಯ
ನವರತ್ನದಾರತಿ ಬೆಳಗಿದರು
ಜಯಮಂಗಳಂ ನಿತ್ಯ ಶುಭಮಂಗಳಂ ೭

ಮಂಗಳಂ ಸಪ್ತಋಷಿಗಳು ಪರ್ಣಶಾಲೆಯೊಳು
ಗಾಂಗೇಯನುತನ ಪೂಜಿಸಿ ಹರುಷದಿ
ಸಂಗೀತಲೋಲನಿಗೆ ಶೃಂಗಾರ ಪುರುಷನಿಗೆ
ರಂಗಿನಾರತಿಯೆತ್ತಿ ಬೆಳಗಿದರು
ಜಯಮಂಗಳಂ ನಿತ್ಯ ಶುಭಮಂಗಳಂ ೮

## ೧೪೧

ಸರಸಿಜನಾಭ ಶ್ರೀಹರಿಪಾದಕಾರತಿಯ ಬೆಳಗಿರೆ ಪ

ವಸುದೇವ ಸುತನೆಂದೆನಿಸಿ
ಅಸುರೆ ಪೂತನಿಯ ಸಂಹರಿಸಿ ಆನಂದ ಸುರಿಸಿ
ಕಾಳಿಮಡುವ ಧುಮುಕಿ ಫಣಿಯ
ಮೇಲೆ ನಾಟ್ಯವನಾಡಿದವಗೆ
ಸನಕಾದಿ ನಾರದ ಮುನಿವಂದ್ಯಗೆ
ಸುರ ರಮಣಿಯರು ಹರುಷದಿ ೧

## ೧೪೦

ಸತಿ ಸಹಿತ ಕಶ್ಯಪರು ರತುನದಾರತಿ ಪಿಡಿದು
ರತಿಪತಿಪಿತನಿಗೆ ಅತಿಹರುಷದಿ
ಅತಿಶಯದ ಮಹಿಮೆಗಳ ಪೊಗಳುತಲಿ ಶ್ರೀಹರಿಗೆ
ಕುಶಲದಾರತಿ ಎತ್ತಿಬೆಳಗಿದರು
ಜಯಮಂಗಳಂ ನಿತ್ಯ ಶುಭ ಮಂಗಳಂ ೧

ಅನಸೂಯ ಸಹಿತ ಅತ್ರಿಯರು ಬೇಗನೆ ಬಂದು
ನಳಿನಾಕ್ಷನ ಚರಣಕ್ಕೆರಗಿ ನಿಂದು
ವಿಧವಿಧದ ಆಟಗಳ ಆಡಿದ ಶ್ರೀಹರಿಗೆ
ಪದುಮದಾರತಿ ಎತ್ತಿ ಬೆಳಗಿದರು
ಜಯಮಂಗಳಂ ನಿತ್ಯ ಶುಭಮಂಗಳಂ ೨

ಶೀಲವತಿಯಾದ ಸುಶೀಲೆ ಸಹಿತ
ಭಾರದ್ವಾಜ ಋಷಿಗಳು ತಮ್ಮ ಆಶ್ರಮದಲಿ
ಶ್ರೀಲಕುಮಿವಲ್ಲಭಗೆ ಶೀಘ್ರದಿಂದಲಿ ತಾವು
ಗೋಮೇಧಿಕದಾರುತಿ ಬೆಳಗಿದರು
ಜಯಮಂಗಳಂ ನಿತ್ಯ ಶುಭಮಂಗಳಂ ೩

ಕುಮುದ್ವತಿ ಸಹಿತ ವಿಶ್ವಾಮಿತ್ರ ಋಷಿಗಳು
ಕನಕ ಮಂಟಪದಿ ಮೆರೆಯುವ ದೇವಗೆ
ಸನಕಾದಿವಂದ್ಯನಿಗೆ ವನಜಾಕ್ಷಿಯರಸನಿಗೆ
ಕನಕದಾರತಿ ಎತ್ತಿ ಬೆಳಗಿದರು
ಜಯಮಂಗಳಂ ನಿತ್ಯ ಶುಭಮಂಗಳಂ ೪

ಪ್ರಹ್ಲಾದವರದನಿಗೆ ಅಹಲ್ಯೆಯ ಸಹಿತದಿ
ಫುಲ್ಲಲೋಚನಪ್ರಿಯಗೆ ಋಷಿಗೌತಮ
ಮಲ್ಲಿಗೆಹಾರಗಳು ಧರಿಸಿ ಶೋಭಿಪ ಹರಿಗೆ

ಕುಂದಣ ಮಯವಾದ ಚಂದ ತೊಟ್ಟಿಲಲಿ
ಚಂದ್ರ ಸೂರ್ಯರ ಗೆಲುವ ಮುಖಕಾಂತೆಯಲಿ
ಇಂದಿರಾಪತಿ ಶ್ರೀಶ ಇಭರಾಜವರದ
ಮೂಕಾಂಬಿಕೆ ಮಲಗೆ ತೂಗುವೆ ಹರುಷದಲಿ ೧

ಸುರರೆಲ್ಲ ನೆರೆದು ಸಂಭ್ರಮಗೊಳುತಿರಲು
ಸುರಗಂಧರ್ವಪ್ಸರ ಸ್ತ್ರೀಯರು ನಾಚುತಿರಲು
ಹರಬ್ರಹ್ಮ ಮೊದಲಾದವರು ಸ್ತುತಿಸುತಲಿರಲು
ಭಳಿರೆ ಜಗನ್ಮಾತೆ ರಕ್ಷಿಸು ರಕ್ಷಿಸೆನಲು ೨

ಘಲು ಘಲು ಘಲುರೆಂಬ ಕಾಲ್ಗೆಜ್ಜೆಗಳಿಂದ
ಥಳ ಥಳ ಹೊಳೆವ ಪೀತಾಂಬರದ ಚಂದ
ಗಿಳಿಗೆಜ್ಜೆ ಹೆರಳು ಬಂಗಾರಗಳಿಂದ
ಹೊಳೆವ ಮೀನ ಬಾವುಲಿ ಸರಗಳ ಚಂದ ೩

ಕನ್ನಡಿ ಕದುಪಿನ ನಗೆಮುಖ ಕಾಂತಿ
ಸಣ್ಣ ಮೂಗುತಿನಿಟ್ಟು ನಲಿಯುತ ಶಾಂತಿ-
ಯನು ತೋರುತ ಭಕ್ತಜನರಿಗೆ ಭ್ರಾಂತಿ
ಯನು ಕಳೆದು ಉದ್ಧರಿಸುವ ಕಾಂತೆ ೪

ಕಮಲ ಮುಖಿಯ ಕರಕಮಲದಿ ಅಭಯ
ತೋರುತ್ತ ಭಕ್ತರಿಗೆಲ್ಲ ಉಣಿಸಿ ಅಮೃತವ
ಕಡೆಗಣ್ಣನೋಟದಿ ಜಗವ ಮೋಹಿಸುವ
ಕಮಲನಾಭವಿಠ್ಠಲ ಭಕುತರ ಪೊರೆವ ೫

## ೧೧೪

ಆರೋಗಣೆಯ ಮಾಡು ಶ್ರೀವೆಂಕಟೇಶ
ಸಾಗರಶಯನನೆ ಸರ್ವವ್ಯಾಪಕ ಕೃಷ್ಣ ಪ

ಗಂಗೆಯ ಜನಕಗೆ ಮಂಗಳ ಅಭಿಷೇಕ
ಸಂಭ್ರಮದಲಿ ಮಾಡಿ ತವಕದಲಿ

ಶಂಭುವಂದಿತಗೆ ಪೀತಾಂಬರನುಡಿಸಿ ಪಾ–
ದಂಗಳನೆ ಪೂಜಿಸುತ ಸ್ತುತಿಪರು
ಇಂದಿರಾಪತಿ ಶೀಘ್ರದಿಂದಲಿ ೧

ಅಪ್ರಮೇಯನೆ ನಿನಗೆ ಅಪ್ಪಾಲು ಅತಿರಸ
ವಪ್ಪಾದ ವಡೆದೋಸೆ ಚಿತ್ರಾನ್ನವೂ
ಸತ್ಯಮೂರುತಿ ನಿನಗೆ ಮುತ್ತಿನಂಥಲಾಡುಓಗರ
ಮತ್ತೆ ಪಾಯಸ ಮೊಸರು ಬುತ್ತಿ ವಿ–
ಚಿತ್ರದಲಿ ತಂದರ್ಪಿಸಿಹರು ೨

ಕನಕ ಮಂಟಪದೊಳು ಕರ್ಪೂರದಾರತಿ
ವಿನಯದಿ ಮಾಡುತ್ತ ನಮಿಸುವರು
ಮನಕೆ ಬೇಸರ ಬೇಡ ಕಮಲನಾಭ ವಿಠ್ಠಲ
ಘಮ ಘಮಿಪ ತಾಂಬೂಲ ವೀಳ್ಯವ
ತವಕದಲಿ ಸ್ವೀಕರಿಸು ಶ್ರೀಶಾ ೩

## ೧೧೫

ಉಡಿಯ ತುಂಬಿರೆ ಕಡಲೊಡೆಯನ
ಮಡದಿಗ್ವರುಷದಿ ಪ

ಬಿಡಿಯ ಮುತ್ತು ಬಿಗಿದ ತಟ್ಟೆಯ
ಪಿಡಿದು ಬೇಗದಿ ಅ.ಪ

ಅಚ್ಚ ಜರಿಪೀತಾಂಬ್ರನುಟ್ಟ ಅಚ್ಚುತನರಸಿಗೆ
ಹೆಚ್ಚಿನ ಆಭರಣ ಧರಿಸಿ ಮೆರೆವ ದೇವಿಗೆ
ಅಚ್ಚುತನ ವಕ್ಷಸ್ಥಳದಿ ವಾಸಿಪ ಲಕುಮಿಗೆ
ಅಚ್ಚಮುತ್ತು ಅರಿಶಿನಡಿಕೆ ಉತ್ತತ್ತಿ ಫಲಗಳು ೧

ನಿಂಬೆ ನೇರಳೆ ಜಂಬು ದ್ರಾಕ್ಷಿ ಕದಳಿ ಫಲಗಳಿಂ
ಅಂಬುಜಾಕ್ಷನರಸಿಗೆ ದಾಳಿಂಬೆ ತೆಂಗು ಸಹಿತದಿ

ಮಿತ್ರೆ ರುಕ್ಮಿಣಿ ಸತ್ಯಭಾಮೆಯರರಸಗೆ
ರತ್ನದಾರತಿ ಎತ್ತುತಾ ಜಯ ಜಯ
ಮುತ್ತೈದೆಯರು ಪಾಡುತಾ ೨

ಮಮತೆಯಿಂದಲಿ ಕಮಲನಾಭ ವಿಠ್ಠಲನಿಗೆ
ಕನಕದಾರತಿ ಎತ್ತುತಾ ಜಯ ಜಯ
ಮುತ್ತೈದೆಯರು ಪಾಡುತಾ ೩

## ೧೩೯

ಶೇಷಶಯನ ಶ್ರೀಕೃಷ್ಣನಿಗಾರತಿ
ಆ ಸತಿ ಲಕುಮಿಯು ಮಾಡಿದಳು ಪ

ಸಾಸಿರನಾಮನ ಭೂಸುರಪಾಲನ
ಸೋಸಿನಿಂದ ಸ್ಮರಿಸುತ ಮನದಿ ಅ.ಪ

ಅಂಬುಧಿಯುದುಕದಿ ಆಲದ ಎಲೆ ಮೇಲೆ
ಅಂಗುಟವನು ಬಾಯೊಳಗಿಟ್ಟು
ತುಂಬಿಗುರುಳ ಮುಖಕಮಲದ ಚಲುವಗೆ
ಸಂಭ್ರಮದಲಿ ಮುತ್ತಿನಾರತಿಯ ೧

ಮಂದರಧರ ಗೋವಿಂದಗೆಮ್ಮಯ
ಕುಂದುಗಳೆಣಿಸದೆ ಸಲಹೆನ್ನುತಾ
ವಂದಿಸಿ ಪ್ರಾರ್ಥನೆ ಮಾಡುತ ಬೇಗದಿ
ಇಂದಿರೇಶ ಸಲಹೆಂದೆನುತ ೨

ಗೋವರ್ಧನವನು ಎತ್ತಿ ಸುಜನರನು
ಗೋಗೋಪಾಲರ ಪೊರೆದವಗೆ
ಗೋಪತಿ ಕಮಲನಾಭ ವಿಠ್ಠಲನಿಗೆ
ಗೋಪಿಯರೊಡನಾಡುವ ಹರಿಗೆ ೩

ಅಂಬುಧಿಯೊಳು ಜನಿಸಿದ ಮುಕುಂದನರಸಿಗೆ
ಅಂಬುಜಾಕ್ಷಿಯರೆಲ್ಲ ನೆರೆದು ಸಂಭ್ರಮಪಡುತಲಿ ೨

ಮಾದಳದ ಫಲವು ಮಾವು ಪನ್ನೆರಿಲ ಫಲಗಳ
ಮಾಧವನ ಮಡದಿಗೀಗ ಮಾನಿನಿಮಣಿಯರು
ಕ್ರೋಧಿನಾಮ ಸಂವತ್ಸರದಿ ಸಾಧು ಜನಗಳ
ಆದರಿಸಿ ಕಾವ ಕಮಲನಾಭ ವಿಠ್ಠಲನರಸಿಗೆ ೩

## ೧೧೬

ಕದವ ತೆಗೆಯೆ ಸುಂದರಿವಯ್ಯಾರಿ ಮುತ್ತಿನ ಪ

ಕಡಲ ಶಯನನೆ ಮಡದಿ ಹರುಷದಿ
ಸಡಗರದಿ ಮುಂದಡಿ ಇಡುತ ನಿನ್ನ
ಒಡೆಯ ಬಂದಿಹನೆಂದು ಹರುಷದಿ
ಬೆಡಗು ಮಾಡದೆ ಬಿಡಿಯ ಮುತ್ತಿನ ೧

ಯಾರು ನಿನ್ನಯ ಪೆಸರ ಏನೆಂದು ತಿಳಿಯದೆ
ಹೇಗೆ ತೆಗೆಯಲಿ ಕದವಾ
ಘೋರ ರಾತ್ರಿಯ ವೇಳೆಯಲಿ ಬಂ–
ದೀಗ ಬಾಗಿಲ ಬಡಿಯ ನಿಂದಿರೆ
ನಾರಿಯರು ಏನೆಂದು ಕೇಳ್ವರು
ದ್ವಾರ ಬಿಡುಬಿಡುತಲಿ ಸಾಗು ಮುಂದಕೆ ೨

ತೆಗೆಯಲೊಲ್ಲೆನು ಕದವ ಸಮರಾತ್ರಿ ವೇಳದಿ
ರುಕ್ಮನ ಅನುಜೆ ಕೇಳೆ ಪೃಥ್ವಿಯೊಳು ಎನ್ನನು
ಚಕ್ರಿ ಎನ್ನುತ ಪೇಳ್ವರೆ
ಅರ್ಥಿವಚನಗಳನ್ನು ಕೇಳುತ
ಸತ್ವರದಿ ನೀ ಬಂದು ಮುಂದಕೆ

## ೧೩೭

ಮುತ್ತಿನ ಆರತಿಯ ತಂದೆತ್ತೀರೆ ಲಕ್ಷ್ಮಿಗೆ
ಮುತ್ತೈದೆಯರು ಜಯ ಪ

ರತ್ನಮಂಟಪದೊಳು ವರ ಮಹ–
ಲಕ್ಷ್ಮಿಯ ಕುಳ್ಳಿರಿಸಿ
ಮುತ್ತಿನ್ಹಾರಗಳ್ಹಾಕಿ
ಮುತ್ತೈದೆಯರು ಜಯ ೧

ಮಿತ್ರೆ ಮಹಲಕ್ಷುಮಿಯ ಬಹು
ಸಿಸ್ತಿಲಿ ಶೃಂಗರಿಸಿ
ಉತ್ತಮಾಂಗನೆಗೀಗ
ಮುತ್ತೈದೆಯರು ಜಯ ೨

ಕರ್ತೃ ಶ್ರೀಹರಿ ಎನ್ನುತ ಕಮಲನಾಭ
ವಿಠ್ಠಲನರಸಿಗೀಗ
ಎತ್ತಿ ಚಾಮರ ಬೀಸಿ
ಮುತ್ತೈದೆಯರು ಜಯ ೩

## ೧೩೮

ಮುತ್ತೈದೆ ಜಯ ಜಯ
ಮುತ್ತೈದೆ ಜಯ ಜಯ
ಮುತ್ತೈದೆಯರು ಪಾಡುತ ಜಯ ಜಯ
ಮುತ್ತಿನಾರತಿ ಎತ್ತುತಾ ಪ

ಪೃಥ್ವಿಗೊಡೆಯ ಪುರುಷೋತ್ತಮ ಹರಿಗೀಗ
ಮುತ್ತಿನಾರತಿ ಎತ್ತುತಾ ಜಯ ಜಯ
ಮುತ್ತೈದೆಯರು ಪಾಡುತಾ ೧

## ೧೩೬

ಮಂಗಳಾಂಗ ಶ್ರೀಕೃಷ್ಣಗೆ ಸುದತಿಯರು
ಮಂಗಳಾರತಿ ಎತ್ತಿರೆ ಪ

ರಂಗಯದುಕುಲೋತ್ತುಂಗ ಭವ ಭಯ
ಭಂಗ ಶುಭಗುಣಸಾಂದ್ರನಿಗೆ ಜಯ ಅ.ಪ

ಮೀನ ಕೂರ್ಮ ಕ್ರೋಡ ನೃಹರಿಗೆ
ದಾನವ ಬೇಡಿದಗೆ
ಮಾನದಿ ಭೃಗು ಶ್ರೀರಾಮ ಶ್ರೀಕೃಷ್ಣಗೆ
ಸಾನುರಾಗದಿ ಬುದ್ಧ ಕಲ್ಕ್ಯನಿಗೆ ಜಯ ೧

ಅಕ್ಷರೇಢ್ಯ ಅನಿರುದ್ಧ ಮೂರುತಿಗೆ
ಪಕ್ಷಿವಾಹನ ಹರಿಗೆ
ಕುಕ್ಷಿಯೊಳೀರೇಳು ಜಗವನಿಂಬಿಟ್ಟಗೆ
ಲಕ್ಷ್ಮೀನಾರಾಯಣ ಶ್ರೀ ಶ್ರೀಶನಿಗೆ ಜಯ ೨

ಗೋಕುಲದೊಳು ಗೋಪಾಲಕರೊಡಗೂಡಿ
ಗೋವ್ಗಳ ಕಾಯ್ದವಗೆ
ಗೋವರ್ಧನಗಿರಿ ಎತ್ತಿದ ಧೀರಗೆ
ಗೋಪಿದೇವಿಗೆ ಬಾಲಲೀಲೆಯ ತೋರ್ದಗೆ ೩

ವೃಂದಾವನದಿ ಮೃತ್ತಿಕೆ ಮೆಲ್ಲುವೆನೆಂದು
ವೃಂದಾರಕರು ನುಡಿಯೆ
ನಂದ ಯಶೋದೆಯರು ಬಂದು ತೋರೆನಲು
ಛಂದದಿಂದ ವಿಶ್ವರೂಪವ ತೋರ್ದಗೆ ೪

ಕಾಳಾಹಿವೇಣಿಯರೊಡಗೂಡಿ ನಲಿವಗೆ
ಕಾಳಿಂದಿ ರಮಣನಿಗೆ
ಕಾಲಕರ್ಮಕೆ ಈಶನಾದ ಸ್ವಾಮಿಗೆ
ಕಾಳಿಮರ್ದನ ಕಮಲನಾಭವಿಠ್ಠಲನಿಗೆ ೫

ಮುತ್ತಿನ ಕದತೆಗೆದು ಬೇಗನೆ
ರತ್ನ ಪೀಠದಿ ಕುಳ್ಳಿರಿಸೆ ಹೊಸ
ಮುತ್ತಿನರಗಿಣಿ ಸತ್ಯವಾಣಿಯೆ ೩

ಕೇಳಿ ಹರ್ಷಿತನಾದೆನು ನಿನ್ನಯ ಮಾತ
ಕೇಳಿ ನಗುವರು ಜನರು
ಹೇಳಿ ಕೇಳುವರಿಲ್ಲ ನಿನ್ನ ಮನಸಾರ
ಮಾತುಗಳಾಡಲೇತಕೆ ಕು–
ಲಾಲ ಭವನವಿದಲ್ಲ ಸುಮ್ಮನೆ
ಹೇಳ ಕೇಳದೆ ಹೊರಡು ಮುಂದಕೆ ೪

ಹೀಗೆ ನುಡಿಯುವದೇತಕೆ ಈಗೆನ್ನ ಮಾತಿಗೆ
ಬೇಗದಿ ತೆಗೆ ಕದವ
ನಾಗವೇಣಿಯೆ ನಗುತ ಪೇಳುವೆ
ಬೇಗದಲಿ ಇನ್ನೊಂದು ನಾಮವ
ಈಗ ಧರಣಿಧರನು ಬಂದಿಹೆ
ಸಾಗರನ ಸುತೆ ಸರ್ಪವೇಣಿಯೆ ೫

ಧರಣೀಧರ ನೀನಾದರೆ ಈ ಧರೆಯನೆಲ್ಲವ
ಸಿರದ ಮೇಲಿರಿಸುವೆಯ
ಸರ್ವ ಜನರಿಗೆ ಭಯವ ಪಡಿಸುವ
ಉರಗರಾಜ ನೀನೆಂದು ತಿಳಿದೆನು
ಇರುತ ಸರ್ಪಗಳೊಳಗೆ ನೀ ಬಲು
ಹರುಷದಿಂದಲಿ ಸಾಗುಮುಂದಕೆ ೬

ಹರಿಣಾಕ್ಷಿ ಕೇಳೆ ನೀನು ಎನ್ನನು ಜನರು
ಹರಿಯೆಂದು ಕರಿಯುವರು
ಕರೆ ಕರೆಯ ಮಾಡದಲೆ ಬೇಗನೆ
ವರ ಕನಕ ಕದ ತೆಗೆದು ಸುಮ್ಮನೆ

ಇರಿಸು ಸುಖ ಸಾಮ್ರಾಜ್ಯ ಪೀಠವ
ಹರುಷದಿಂ ಕುಳಿತೆಲ್ಲ ಪೇಳುವೆ ೭

ಕೋತಿ ನೀನಹುದಾದರೆ ಮಾತುಗಳ್ಯಾಕೆ
ಜಾತಿ ಕಪಿಗಳ ಕೂಡುತ
ಪ್ರೀತಿಯಿಂದಲಿ ಮನಕೆ ಬಂದೆಡೆ
ನೀತೆರಳುತಲಿ ಪೋಗು ಮುಂದಕೆ
ಕೋತಿಗಳ ಗುಂಪಿದಲ್ಲ ತಿಳಿಮಹ-
ರೂಪವತಿಯರಿರುವ ಸ್ಥಳವಿದು ೮

ಪ್ರೀತಿಸತಿಯೆ ನೀ ಕೇಳೆ ನಿನ್ನೊಳು ಬಹು
ಪ್ರೀತಿಯಿಂದಲಿ ಬಂದೆನು
ಶ್ರೀಶನ ನುಡಿಕೇಳಿ ರುಕ್ಮಿಣಿ
ಆತುರದಿ ಬಾಗಿಲನೆ ತೆಗೆಯುತ
ನಾಥ ಕಮಲನಾಭ ವಿಠ್ಠಲನಿಗೆ
ತಾನಮಿಸಿ ವಂದಿಸುತ ಭಕುತಿಯಲಿ
ಬಾಗಿಲು ತೆಗೆದಳಾಗ ಭಕುತಿಯಲಿ ಶ್ರೀಶಗೆ
ಬಾಗಿಲು ತೆಗೆದಳಾಗ ೯

## ೧೧೭

ಜನಕರಾಜನ ಸುತೆ ಜಾನಕಿ ಜೋ ಜೋ
ಇನಕುಲತಿಲಕನರ್ಧಾಂಗಿಯೆ ಜೋ ಜೋ ಪ

ಕುಂದಣ ಕೆತ್ತಿದ ಚಂದದ ತೊಟ್ಟಿಲ
ಮಂದಗಮನೆಯರು ತಂದಿರಿಸಿದರು
ಸುಂದರಾಂಗಿ ವೈದೇಹಿಯನೆತ್ತುವ ಆ-
ನಂದದಿ ಜೋಗುಳ ಪಾಡ್ವರು ಜೋ ಜೋ ೧

ರತ್ನ ಮುತ್ತುಗಳ ಕಿರೀಟವು ಹೊಳೆಯಲು
ಮುತ್ತಿನ ತೊಡುಗೆಯಲಿ ರಂಜಿಸುವ ಸುಂದರಿಯ

ಪುಟ್ಟಬಾಲಕನಾಗಿ ಗೋವ್ಗಳನೆಲ್ಲ
ಅಟ್ಟಿಯ ಮನೆಗೆ ಪೋಗಿ
ದುಷ್ಟ ಕಾಳಿಂಗನ ಮೆಟ್ಟಿ ತುಳಿದ ಹರಿಗೆ
ರತ್ನದಾರತಿ ಎತ್ತಿರೆ ೪

ಕೊಂದು ಕಂಸನ ಬೇಗ ಮಧುರೆಲಿ ನಿಂತ
ಮಹಾನುಭಾವಗೆ
ತಂದೆ ಶ್ರೀ ಕಮಲನಾಭವಿಠ್ಠಲಗೆ
ಕುಂದಣದಾರತಿಯ ೫

## ೧೩೫

ಮಂಗಳವೆನ್ನಿರೆ ಮಹಲಕ್ಷ್ಮಿ ದೇವಿಗೆ
ಅಂಗನೆ ಮಣಿಯರು ಸಂಭ್ರಮದಲಿ ಶುಭ ಪ

ಅರಿಶಿನ ಕುಂಕುಮ ಅರಳು ಮಲ್ಲಿಗೆ ಗಂಧ
ಸುರಪಾರಿಜಾತ ಪುಷ್ಪವರ್ಷಿಸಿ
ನರಸಿಂಹನರಸಿಗೆ ಪರಿಪರಿ ಫಲಗಳ
ಹರದೇರುಡಿಯ ತುಂಬುತಲಿ ಶ್ರೀ ಲಕ್ಷ್ಮಿಗೆ ೧

ಸರಿಗೆ ಸರವು ಜರದ ನೆರಿಗೆ ಮೇಲೊಲಿಯಲು
ಅರಳು ಮಲ್ಲಿಗೆ ಜಾಜಿ ಸರವ ಮುಡಿದು
ಹರುಷದಿಂದಲಿ ನಾಗಮುರಿಗಿ ಕಂಕಣಕೈಲಿ
ಪರಿಪರಿ ವರಗಳ ಕೊಡುವಳಿಗೆ ಜಯ ೨

ಕಡಗ ಕಾಲಂದುಗೆ ಘಲುರೆಂಬನಾದದಿ
ಬೆಡಗಿನಿಂದಲಿ ಬರುವ ಭಾಗ್ಯದಾಯಿನಿಗೆ
ಕಡಲಶಯನ ಕಮಲನಾಭವಿಠ್ಠಲನ ರಾಣಿ
ಬೆಡಗಿನ ನಡಿಗೆಯ ನಡೆವ ದೇವಿಗೆ ಶುಭ ೩

ಉತ್ತಮ ಸತಿಯರು ತೊಟ್ಟಿಲ ಪಿಡಿಯುತ
ಅರ್ಥಿಯ ಜೋಗುಳ ಪಾಡ್ವರು ಜೋ ಜೋ ೨
ಕೌಸಲ್ಯದೇವಿಯ ಕಂದನ ರಮಣಿಯೆ
ಕೌಶಿಕಯಜ್ಞದ ಪಾಲನಅರಸಿಯೆ
ಹಂಸವಾಹನನ ಪಿತನ ಸತಿಯೆ ಖಳ
ಧ್ವಂಸ ಮಾಡಿದ ರಘುರಾಮನರಸಿಯೆ ೩

ಅಂಬುಜನಯನೆ ಪೀತಾಂಬರ ಶೋಭಿತ
ಕಂಬುಕಂಠಿ ಕೋಕಿಲವಾಣಿ ಜೋ ಜೋ
ತುಂಬುಗುರುಳ ಮುಖ ಕಮಲೆಯೆ ಜೋ ಜೋ
ನಂಬಿದವರ ಕಾಯ್ವ ಕರುಣಿಯೆ ಜೋ ಜೋ ೪

ಕಮಲನಯನೆ ಕಮಲಾಲಯೆ ಜೋ ಜೋ
ಕಮಲಗಂಧಿಯೆ ಕಮಲೋದ್ಭವೆ ಜೋ ಜೋ
ಕಮಲನಾಭ ವಿಠ್ಠಲನ ಸತಿ ಜೋ ಜೋ
ಕಮಲೆ ಹೃತ್ಕಮಲದಿ ವಾಸಿಸು ಜೋ ಜೋ ೫

## ೧೧೮

ಜಯ ಜಯ ಶ್ರೀ ಹರಿ ಶೌರಿ
ಜಯ ಜಯ ಮಂದರಧಾರಿ
ಜಯ ಜಯ ಶ್ರೀ ಮುರವೈರಿ
ಜಯ ಜಯ ಕಂಸಾರಿ ಪ

ಮುತ್ತಿನ ಮಂಟಪದಿ
ರತ್ನಪೀಠವನಿರಿಸಿ
ಅರ್ಥಿಲಿ ಬಾ ಹಸೆಗೆನ್ನುತ ಕರೆವರು
ಮುತ್ತೈದೆಯರುಗಳು ೧

ನಾರಿ ರುಕ್ಮಿಣಿ ಭಾಮೆ ಸಹಿತದಿ
ದ್ವಾರಕಾಪುರ ವಾಸನಿಗೆ
ಸೌಳಸಾಸಿರ ಸತಿಯರಾಳ್ದ
ಸಾರಸಾಕ್ಷ ಹರಿಗೆ ಬೇಗ ೪

ಕಡಲೊಡೆಯಗೆ ಮೃಡಸಖನಿಗೆ
ಕಡುಹರುಷದಿ ಕಾಮಿನಿಯರು
ಸಡಗರದಲಿ ಕಮಲನಾಭ
ವಿಠ್ಠಲನಂಘ್ರಿ ಭಜಿಸಿನಲಿದು ೫

## ೧೩೪

ಮಂಗಳಂ ನರಹರಿಗೆ ಜಯ ಜಯ
ಮಂಗಳ ಮುರಹರಗೆ ಪ

ಮಂಗಳ ಮದನಗೋಪಾಲ ಶ್ರೀಕೃಷ್ಣಗೆ
ಮಂಗಳ ಮಾಧವಗೆ ಅ.ಪ

ವಸುದೇವ ಸುತನಾಗಿ ಗೋಕುಲದೊಳು
ಮೊಸರು ಬೆಣ್ಣೆಯ ಕದ್ದು
ಶಶಿಮುಖಿಯರ ಕೂಡಿ ನಿಶಿರಾತ್ರಿಯಲಿ
ರಾಸ ಕ್ರೀಡೆಯಾಡಿದ ಹರಿಗೆ ೧

ನಳಿನಮುಖಿಯರೆಲ್ಲ ನೀರೊಳಗಾಡಿ
ಬಳಲಿ ಮೇಲಕೆ ಬರಲು
ಲಲನೆಯರ ಕಂಡು ಪರಿಹಾಸ್ಯ ಮಾಡಿದ
ಚೆಲುವ ಗೋಪಾಲಕೃಷ್ಣಗೆ ೨

ಬೆಟ್ಟವ ಬೆರಳಿನಲಿ ಎತ್ತಿದ
ಭಕ್ತವತ್ಸಲ ಹರಿಗೆ
ಮಿತ್ರೆಯರಿಗೆ ಮೊಸರು ಬುತ್ತಿಯ
ಭುಕ್ತಿಯನೆವದಲಿ ಮುಕ್ತಿ ತೋರಿದ ದೊರೆಗೆ ೩

ಇಂದಿರೆ ರಮಣ ಬಾ
ಕಂದರ್ಪ ಜನಕ ಬಾ
ಸುಂದರಾಂಗನೆ ಬಾ ಹಸೆಗೆನ್ನುತ
ಚಂದದಿ ಕರೆದರು ೨

ಕಂಬು ಕಂದರೆಯೆ ಬಾ
ಅಂಬುಜ ಮುಖಿಯೆ ಬಾ
ಸಂಭ್ರಮದಲಿ ಬಾ ಹಸೆಗೆನ್ನುತ ಕರೆದರು
ಅಂಬುಜ ಮುಖಿಯರು ೩

ನಾರಿ ರುಕ್ಮಿಣಿ ದೇವಿ
ನಾರದ ವಂದ್ಯನಿಗೆ
ಚಾರು ಪರಿಮಳ ಅರಿಶಿನ ಕುಂಕುಮ
ಹಾರವನರ್ಪಿಸುತ ೪

ಪರಿ ಪರಿ ಕುಸುಮಗಳ
ಪದಕ ಪುಷ್ಪದ ಮಾಲೆ
ಪರಮಾತ್ಮನ ಕೊರಳಿಗೆ ಹಾಕುತ
ಅಲಂಕರಿಸಿದಳಾಗ ೫

ಜಯ ಜಯ ಶ್ರೀ ಕೇಶವನೆ
ಜಯ ಜಯ ನಾರಾಯಣನೆ
ಜಯ ಜಯ ಶ್ರೀ ಮಾಧವನೆ
ಜಯ ಜಯ ಗೋವಿಂದ ೬

ಜಯ ಜಯ ಶ್ರೀ ವಿಷ್ಣುಹರೆ
ಜಯ ಜಯ ಶ್ರೀ ಮಧುಸೂದನನೆ
ಜಯ ಜಯ ಶ್ರೀ ತ್ರಿವಿಕ್ರಮನೆ
ಜಯ ಜಯ ವಾಮನನೇ ೭

ಬಂದ ಕಪಿ ಕಟಕವನೆ ನೋಡುತ್ತ ಸಾಗರಕೆ ಸೇತುವೆ
ಒಂದೇ ನಿಮಿಷದಿ ರಚಿಸಿ ಶೀಘ್ರದಲಿ
ಮಂದಮತಿ ರಾಕ್ಷಸರ ವಧಿಸುತಲಿ ಅಂದಣವ ಕಳುಹಿ
ಮಂದಗಮನೆಯ ಕರೆಸಿ ಬೇಗದಲಿ
ಬಂದ ರಾಮನು ಎಂದು ಮಾರುತಿ
ಮುಂದೆ ಭರತಗೆ ಕುಶಲ ತಿಳಿಸಲು
ತಂದೆ ಕಮಲನಾಥ ವಿಠಲ
ಮುಂದೆ ಪ್ರಜೆಗಳ ಪೊರೆದವಗೆ ಜಯ ೩

## ೧೩೩

ಮಂಗಳಂ ಜಯ ಸುಂದರ ಮೂರುತಿಗೆ
ಮಾ ಮನೋಹರನಿಗೆ ಪ

ಮಂಗಳ ಮಧುಸೂದನನಿಗೆ
ಮಂಗಳ ಮುರಮರ್ದನನಿಗೆ
ಮಂಗಳಾಂಗ ಶ್ರೀ ಮದನಂತ–
ರಂಗನಿಗೆ ಶುಭಾಂಗ ಹರಿಗೆ ೧

ರಂತಿದೇವನನ್ನು ಪೊರೆದ
ಚಿಂತಿತಾರ್ಥ ಪ್ರದಾತನಿಗೆ
ಸಂತತವು ಭಕುತರನು
ಸಂತೋಷದಿ ಪೊರೆವ ಹರಿಗೆ ೨

ಪಾಂಡವರನು ಪೊರೆದಗೆ
ಪುಂಡರೀಕಗೆ ಒಲಿದಗೆ
ತಂಡತಂಡದ ಭಕ್ತರನ್ನು
ಕಂಡುಪೊರೆವ ಮಹಮಹಿಮಗೆ ೩

ಜಯ ಜಯ ಶ್ರೀ ಶ್ರೀಧರನೇ
ಜಯ ಜಯ ಶ್ರೀ ಹೃಷಿಕೇಶ
ಜಯ ಜಯ ಶ್ರೀ ಪದ್ಮನಾಭ
ಜಯ ದಾಮೋದರನೆ ೮

ಜಯ ಜಯ ಸಂಕರ್ಷಣನೆ
ಜಯ ಜಯ ಶ್ರೀ ವಾಸುದೇವ
ಜಯ ಜಯ ಶ್ರೀ ಪ್ರದ್ಯುಮ್ನ
ಜಯ ಜಯ ಅನಿರುದ್ಧ ೯

ಜಯ ಜಯ ಶ್ರೀ ಪುರುಷೋತ್ತಮನೆ
ಜಯ ಜಯ ಶ್ರೀ ಅಧೋಕ್ಷಜನೆ
ಜಯ ಜಯ ಶ್ರೀ ನಾರಸಿಂಹ
ಜಯ ಜಯ ಅಚ್ಚುತನೆ ೧೦

ಜಯ ಜಯ ಶ್ರೀ ಜನಾರ್ದನನೆ
ಜಯ ಜಯ ಶ್ರೀ ಉಪೇಂದ್ರಹರೇ
ಜಯ ಜಯ ಶ್ರೀ ಹರಿ ಶ್ರೀಶಾ
ಜಯ ಜಯ ಶ್ರೀ ಕೃಷ್ಣಾ ೧೧

ಇಂತು ದೇವನ ಸ್ತುತಿಸಿ
ಸಂತಸದಿ ವೀಳ್ಯವನು
ಕಂತು ಪಿತನಿಗೆ ಅರ್ಪಿಸಿ ಮುದದಿ
ವಂದಿಸಿ ಭಕ್ತಿಯಲಿ ೧೨

ಕಮಲಾಕ್ಷಿಯರು ಕೂಡಿ
ಕನಕದಾರತಿ ಪಿಡಿದು
ಕಮಲನಾಭ ವಿಠ್ಠಲ ಲಕ್ಷ್ಮೀಯರಿಗೆ
ಬೆಳಗಿದರಾಗ ೧೩

## ೧೩೨

ಮಂಗಳಂ ಜಯ ಮಂಗಳಂ ರಾಮ ಸಜ್ಜನರ ಪ್ರೇಮ
ಮಂಗಳಂ ಲೋಕಾಭಿರಘುರಾಮ ಪಟ್ಟಾಭಿರಾಮ ಪ

ಮಂಗಳಂ ಶ್ರೀ ದಶರಥಾತ್ಮಜಗೆ
ಮಂಗಳಂ ಅಯೋಧ್ಯವಾಸಿಗೆ
ಮಂಗಳಂ ಜನಕಜಾಮಾತೆಗೆ
ಮಂಗಳಂ ಶ್ರೀ ರಾಮಚಂದ್ರಗೆ ಅ.ಪ

ದೇವದೇವೋತ್ತಮ ವೈಕುಂಠದೊಳಗೆ ಶ್ರೀ ಭೂಮೇರಿಂದ
ಸೇವೆಗಳ ಕೈಗೊಳ್ಳುತ ಮಲಗಿರಲು
ದೇವಋಷಿ ಬ್ರಹ್ಮೇಂದ್ರಾದಿಗಳು ಸಹಿತ ಶ್ರೀಧರನ ಸ್ತುತಿಸುತ
ರಾವಣಾಸುರನುಪಟಳ ವರ್ಣಿಸಲು
ಶ್ರೀ ವರನು ಸಂತೈಸಿ ಅವರನು
ಭೂಮಿಪತಿ ದಶರಥನ ಪ್ರೇಮ
ಕುಮಾರನಾಗುದಿಸುತಲಯೋಧ್ಯದಿ
ಪ್ರೇಮ ತೋರುತ ಮೆರೆದವಗೆ ಜಯ ೧

ದಶರಥನ ಸುತರಾಗಿ ಬೆಳೆಯುತಲಿ ಕೌಶಿಕನಯಜ್ಞವ
ಕುಶಲದಲಿ ರಕ್ಷಿಸುತ ಹರುಷದಲಿ
ಎಸೆವ ಧನುವನು ಮುರಿದು ನಿಮಿಷದಲಿ
ಶಶಿಮುಖಿಯ ಕೂಡುತ
ಕುಶಲದಲಿ ವನವಾಸ ಚರಿಸುತಲಿ
ದಶಶಿರನು ಜಾನಕಿಯ ಕದಿಯಲು
ಶಶಿಮುಖಿಯನರಸುತಲಿ ವನವನ
ವಸುಧಿಪತಿ ಕಪಿಗಳ ಕಳುಹಿ ಸತಿ
ಕುಶಲ ತಿಳಿಯುತ ನಲಿದವಗೆ ಜಯ ೨

## ೧೧೯

ಜಯ ಜಯ ಮಂಗಳಾ ನಿತ್ಯ ಶುಭಮಂಗಳಂ ಪ

ಜಗದೇಕ ವೀರನಿಗೆ ಜಗದುದರ ದೇವನಿಗೆ
ಜಗವ ಬಾಯೊಳು ತೋರ್ದ ಮಹಮಹಿಮಗೆ
ಜಗವ ಸೃಜಿಸಿದ ಹರಿಗೆ ಜಗವಪಾಲಿಪದೊರೆಗೆ
ಜಗವ ಸಂಹರಿಸುವಗೆ ಜಯ ಮಂಗಳಂ ಅ.ಪ

ವರಮುನಿಯ ತಾಡನದಿ ಹೊರಡೆ ಲಕ್ಷ್ಮಿಯು ಆಗ
ಗಿರಿಗಿಳಿದು ಬಂದು ಹುತ್ತದೊಳಗಿರಲು
ಪರಮೇಷ್ಠಿ ಅರಸಿಪಾಲ್ಗರಿಯೆ ಗೋಪಾಲಕನ
ವರಕುಠಾರದ ಪೆಟ್ಟಿಗಂಜಿ ನಟಿಸಿದವಗೆ ೧

ಗಿರಿಗಿರಿಯ ಸಂಚರಿಸಿ ಅಡವಿಮೃಗ ಬೆನ್ನಟ್ಟಿ
ಪರಮಪದ್ಮಾವತಿಯ ಮನದಿ ಕಂಡು
ದುರುಳ ಮಾತುಗಳಾಡಿ ಶಿಲೆಯತಾಡಿತನಾಗಿ
ಕೊರವಂಜಿ ರೂಪದಿಂ ಕಣಿಯ ಹೇಳಿದಗೆ ೨

ಆಕಾಶರಾಜನಿಗೆ ಅಳಿಯನೆನಸಿಕೊಂಡು
ಆಕೆ ಪದ್ಮಾವತಿಯ ಕೂಡಿದವ
ಬೇಕಾದ ವರಗಳನು ಕೊಡುತ ಭಕ್ತರ ಪೊರೆವ
ಶ್ರೀಕಾಂತ ಕಮಲನಾಭವಿಠ್ಠಲಗೆ ೩

## ೧೨೦

ಜಯ ಮಂಗಳಂ ನಿತ್ಯ ಶುಭಮಂಗಳಂ ಪ

ಪಾಲಸಾಗರವನ್ನು ಲೀಲೆಯಲಿ ಮಥಿಸಲು
ಬಾಲೆ ಮಹಾಲಕ್ಷ್ಮಿ ಸಹಪುಟ್ಟಲು

## ೧೩೧

ಮಂಗಳಂ ಜಯ ಮಂಗಳಂ ರಾಮ ಮುನಿಜನ ಸ್ತೋಮ
ಮಂಗಳಂ ಲೋಕಾಭಿರಘುರಾಮ ಸದ್ಗುಣ ಸ್ತೋಮ ಪ

ದಶರಥನ ವರಪುತ್ರ ನೀನಾಗಿ ಕೌಶಿಕನ ಯಜ್ಞದಿ
ಅಸಮಸಾಹಸ ದೈತ್ಯರನು ಗೆಲಿದಿ
ವಸುಧೆಯೊಳು ಗೌತಮನ ಸತಿಯಳನು ಉದ್ಧರಿಸಿ ತಾಟಕಿ
ಹೊಸಪರಿಯ ದೈತ್ಯರನು ಸಂಹರಿಸಿ
ಎಸೆವ ಮಿಥಿಲಾ ಪುರದಿ ಜಾನಕಿ
ಬಿಸಜನೇತ್ರೆಯ ಕೈಪಿಡಿದು ರನ್ನ
ಹೊಸ ಪರಿಯ ರಥದೊಳಗೆ ಪೊರಟು
ಸತಿಸಹಿತ ಅಯೋಧ್ಯೆಯಲಿ ಮೆರೆದಗೆ ೧

ದಶರಥನು ಪುತ್ರಗೆ ಪಟ್ಟವನು ಕಟ್ಟುವೆನು ಎನಲು
ದಶದಿಕ್ಕಿಗೆ ಪತ್ರವನು ಕಳುಹಿಸಲು
ಎಸೆವ ಮಂಗಳ ವಾದ್ಯ ಕೇಳುತಲೆ ಕೈಕೇಯಿ ಬರಲು
ಅಸದಳದವರ ಬೇಡಿ ಕಾಡಿಸಲು
ವಸುಧೆಗೀಶನ ವನಕೆ ಕಳುಹಲು
ಕುಶಲವಿಲ್ಲದೆ ಮರುಗೆ ದಶರಥ
ಮಿಸುಣಿಮಣಿ ಸಿಂಹಾಸನ ತ್ಯಜಿ–
ಸುತಲಿ ಪಿತೃ ವಾಕ್ಯವ ನಡೆಸಿದಗೆ ೨

ಮಡದಿ ಸೀತಾ ಲಕ್ಷ್ಮಣರ ಕೂಡಿ
ಬಿಡದೆ ದೈತ್ಯರನೆಲ್ಲ ಕಡಿದಾಡಿ
ಒಡತಿ ಸೀತೆಗೆ ಉಂಗುರವ ನೀಡಿ ಹನುಮಂತ ಬರಲು
ಕಡುಜವದಿ ಸಾಗರದಿ ಸೇತುವೆಯ ಮಾಡಿ
ತಡೆಯದಲೆ ರಾವಣನ ಮೂಲವ
ಕಡಿದು ಕಮಲನಾಭ ವಿಠ್ಠಲನು
ಮಡದಿಸಹಿತಾಯೋಧ್ಯೆ ಪುರದಲಿ
ಸಡಗರದಿ ಸಾಮ್ರಾಜ್ಯವಾಳ್ದಗೆ ೩

## ವಚನ

ಹೀಗೆಂದ ಹರಿ ವಚನ ಕೇಳುತ ನಾರದರು
ಮಾಧವಗೆ ವಂದಿಸುತ ಮನದಲ್ಲಿ ಯೋಚನೆ ಮಾಡಿ
ಗಾಡಿಕಾರನು ಕೃಷ್ಣ ಆಡಿದೀ ಕಾರ್ಯಗಳು
ಮಾಡಿಯೆ ಬಿಡುವೆನೆಂಬ ಧೈರ್ಯ ಮನಸಿಗೆ ಬರಲು
ಬೇಗದಲಿ ಚಿತ್ರರಥನಿಗೆ ತಿಳಿಸಬೇಕೆಂದು
ಸಾಗಿದರು ನಾರದರು ಗಂಧರ್ವನನು ಕಾಣಲು

ಓಡುತೋಡುತ ಬಂದ ನಾರದ
ಗಾಡದಿಂದ್ವಾರಿದ ವಿಮಾನಕೆ
ನೋಡಿದನು ಗಂಧರ್ವನಿಹಮದ
ಗರ್ವದಲಿ ಕುಳಿತದನು ೧

ಬನ್ನಿರೆನ್ನುತಲಿ ಕರೆಯದಾದನು
ಮನ್ನಿಸುತ ಮಾತುಗಳನಾಡದೆ
ಉನ್ನತ ಗರ್ವದಲಿ ಗಾನವ
ಮಾಡಿ ಹರುಷಿಪನು ೨

ಎಡಬಲದಿ ಸತಿಯರು ವಿನೋದದಿ
ಮಡಿಚಿ ಕೊಡುತಿಹ ವೀಳ್ಯ ಮೆಲುತಲಿ
ಬಿಡದೆ ರಾಗವ ಹಾಡಿ ಪಾಡುತ
ಕಡು ಹರುಷದಿಂದಿರಲು ೩

ಚಿತ್ರರಥನನು ನೋಡುತೊಮ್ಮೆಗೆ
ಮತ್ತೆ ಸೂರ್ಯನ ನೋಡುತೊಮ್ಮೆಗೆ
ವ್ಯರ್ಥವಾದುದೆ ಇಂಥ ಗಾನವು
ಸತ್ತನು ಗಂಧರ್ವ ೪

ಬೆದರಿದಾತನ ಸಖಿಯರು ಕೇಳಿ
ಒದಗಿದ ಕಷ್ಟವು ಪರಿಹಾರವಾಗಲು

ಮೋಟುಮರಕೆ ಸ್ಥಾಣುವೆನ್ನುತ ಕರೆವರು
ಈ ಪೃಥ್ವಿಯ ಮೇಲಿನ ಜನರು ೫

ಬಿಸುಜಮುಖಿಯೆ ಇನ್ನೊಂದು ಪೆಸರು ಕೇಳೆ
ಪಶುಪತಿಯೆಂದು ಕರೆವರೆನ್ನ
ವಸುಧೆಯ ಮೇಲಿನ ಪೆಸರುಗಳಿಗೆ ನೀ
ಪ್ರತಿಯಾಗರ್ಥವ ಕಲ್ಪಿಸುವಿ ೬

ವೃಷಭರಾಜ ನೀನಾದರೆ ಮುಂದಕೆ
ಪಶುಗಳ ಮಂದೆಗೆ ತೆರಳುವದು
ಕುಸುಮಗಂಧಿಯರ ಸದನದಿ ಕಾರ್ಯವು
ವೃಷಭರಾಜಗಿಲ್ಲವು ಕೇಳೌ ೭

ಶೀಲವಾಣಿಯೆ ಸುಶೀಲೆಯೆ ಎನ್ನಯ
ವಾಣಿ ಕೇಳಿ ಕದವನು ತೆಗಿಯೆ
ಪೇಳುವೆ ಮತ್ತೊಂದು ನಾಮವ ಎನ್ನನು
ಶೂಲಿ ಎಂದು ಕರೆವರು ಜನರು ೮

ಶೂಲಿಯಾದರೆ ನಿನ್ನ ಬಾಧೆಯ ಕಳೆಯಲು
ಯಾರಿಗೆ ಸಾಧ್ಯವು ಜಗದೊಳಗೆ
ನಾರಿಯರಿಗೆ ಹೇಳದೆ ಮುಂದಕೆ ನಡೆ
ಶೂರರಾದ ವೈದ್ಯರ ಬಳಿಗೆ ೯

ಕರಿಯ ಮುಖನ ಮಾತೆಯೆ ತಡಮಾಡದೆ
ಕನಕಮಯದ ಕದ ತೆರೆ ಬೇಗ
ಕಮಲನಾಭ ವಿಠ್ಠಲನನು ಪಾಡುತ
ಶಿವನ ನಮಿಸಿ ತೆಗೆದಳು ಕದವ ೧೦

ಮೇಲಾದ ಅಮೃತ ಪುಟ್ಟಲಾಗ ಶ್ರೀಕೃಷ್ಣನು
ದೇವನಾರಿಯ ರೂಪವನು ತಾಳಿದ ೧

ಅಂದು ಸ್ತ್ರೀರೂಪ ಮತ್ತೊಮ್ಮೆ ನೋಡುವೆ ಎನಲು
ಇಂದಿರಾಪತಿ ಶ್ರೀಶ ಸ್ತ್ರೀ ರೂಪವ
ಚಂದದಿಂ ತಾಳಿದ್ದರೆ ಇಂದುಶೇಖರ ತಾನು
ಬಂದು ಬೆನ್ನಟ್ಟಲು ಮಾಯವಾದ ಹರಿಗೆ ೨

ಭಸ್ಮಾಸುರ ತಪಕೆ ಮೆಚ್ಚಿ ವರಗಳ ಕೊಡಲು
ನಿಶ್ಚಯವ ನೋಡಬೇಕೆನುತ ಬಂದು
ನೆತ್ತಿಯ ಮೇಲೆ ಕೈಯಿಡುವ ಸಮಯದಲಿ ಪುರು–
ಷೋತ್ತಮ ಶ್ರೀ ಕಮಲನಾಭ ವಿಠ್ಠಲ ಕಾಯ್ದ ೩

## ೧೨೧

ಜಯ ಮಂಗಳ ಶುಭ
ಶುಭ ಮಂಗಳ ಪ

ಜಯ ಮಂಗಳ ಜಗದುದರ ಶ್ರೀದೇವಗೆ
ಶುಭ ಮಂಗಳ ಸುಂದರ ವರಲಕ್ಷ್ಮಿಗೆ ೧

ಜಯ ಮಂಗಳ ಭಕ್ತರ ಪರಿಪಾಲಗೆ
ಶುಭ ಮಂಗಳ ಭಾರ್ಗವಿ ಮಹಲಕ್ಷ್ಮಿಗೆ ೨

ಜಯ ಶುಭ ಕಮಲನಾಭ ವಿಠ್ಠಲನಿಗೆ
ಜಯ ಶುಭ ಕಮಲಾಸನ ಪಿತನರಸಿಗೆ ೩

## ೧೨೨

ಜಯ ಲಕ್ಷ್ಮಿ ಬಾ ಹಸೆಗೆ
ಜಯ ಜಯ ಜಗನ್ಮಾತೆ ತ್ರೈಲೋಕವಿಖ್ಯಾತೆ ಪ
ಮುತ್ತಿನ ಮಂಟಪದಿ ರತ್ನಪೀಠವಿರಿಸಿ
ಮುತ್ತೈದೆಯರು ನಿನ್ನ ಅರ್ಥಿಯಲಿ ಕರೆವರು ಅ.ಪ

ಗೆಜ್ಜೆ ಸರಪಣಿ ಕಾಲಗೆಜ್ಜೆ ನಾದದಿಂದ
ಹೆಜ್ಜೆನಿಡುತ ಬಾ ಬಾ ಸಜ್ಜನರಕ್ಷಕಳೆ ೧

ಅಚ್ಚ ಜರಿ ಪೀತಾಂಬರ ಹೆಚ್ಚಿನಾಭರಣಗಳು
ಮಿತ್ರೇರಲಂಕರಿಸುವರು ಅಚ್ಚುತನೊಡಗೂಡಿ ೨

ಮುತ್ತಿನ್ಹಾರ ಪದಕ ಜತ್ತಿಲೊಲಿಯುತಿಹುದು
ಹಸ್ತ ಕಡಗ ದೋರ್ಯ ಸಿಸ್ತಿನ ಸುಂದರಿಯೆ ೩

ಕರ್ತೃ ಕಮಲನಾಭ ವಿಠ್ಠಲನರಸಿಯೆ
ಹಸ್ತಿಗಮನೆ ಬಾ ಬಾ ಉತ್ತಮ ಪೀಠಕೆ ೪

## ೧೨೩

ಜೋಜೋ ಜೋಜೋ ಜೋ ವೆಂಕಟೇಶ
ಜೋಜೋ ಜೋಜೋ ಜೋ ಶ್ರೀನಿವಾಸ
ಜೋಜೋ ಜೋಜೋ ಭಕ್ತರಘನಾಶ
ಜೋಜೋ ಜೋಜೋ ಜೋ ಸ್ವಪ್ರಕಾಶ ಜೋಜೋ ಪ

ನಂಬಿದೆ ತಂದೆ ಮುದ್ದು ಮೋಹನ್ನ ವಿಠ್ಠಲ
ಸುಂದರ ಶ್ರೀ ಉರಗಾದ್ರಿವಾಸ ವಿಠ್ಠಲ
ವಂದಿಪೆ ಸಿರಿ ಉರಗಾದ್ರಿವಾಸ ವಿಠ್ಠಲ
ಇಂದಿರಾಪತಿ ತಂದೆ ವೆಂಕಟೇಶ ವಿಠ್ಠಲ ೧

## ೧೩೦

ಬಾಗಿಲು ತೆಗೆಯಲೆ ಭಾಮತಿ ರನ್ನಳೆ
ಈಗ ನಾ ಬಂದೆನು ಇಂದುಮುಖಿ ಪ

ನಾಗವೇಣಿಯೆ ನಿನ್ನೀಗಲೆ ನೋಡಲು
ಬೇಗನೆ ಬಂದೆನು ತೆಗಿ ಕದವಾ ಅ.ಪ-

ಯಾರದು ಈ ಸಮರಾತ್ರಿಯ ವೇಳದಿ
ಬಾಗಿಲು ತೆಗೆ ಎಂದೆನುತಿಹರು
ತೋರದು ಎನಗೊಂದಾಲೋಚನೆ ನಿಮ್ಮ
ನಾಮವು ಪೇಳಲು ತೆಗೆಯುವೆನು ೧

ನೀಲವೇಣಿಯೆ ಕೇಳೆನ್ನ ಮಾತನು
ಬಹಳ ಚಿಂತೆಯಾತಕೆ ಮನದಿ
ನೀಲಕಂಠನೆಂದೆನ್ನನು ಕರೆವರು
ಕೇಳು ಮನಸು ಚಂಚಲ ಬಿಟ್ಟು ೨

ನೀಲಕಂಠನೆಂದರೆ ನೆನಪಾಯಿತು
ನವಿಲಿನ ಮರಿ ಬಂದಿಹುದೆಂದು
ನಾರಿಯರೆಲ್ಲರು ಹಾಸ್ಯವ ಮಾಳ್ಪರು
ಸಾರುತ ವನಗಳ ಚರಿಸೆಂದು ೩

ಬೆದರದೆ ತೆರೆ ಕದ ಸುದತಿಮಣಿಯೆ ನಾ
ಬದಲೊಂದು ನಾಮವ ಪೇಳುವೆನು
ಬುಧ ಜನರೆಲ್ಲರು ಭಕುತಿಲಿ ಸ್ಥಾಣು–
ವೆನ್ನುತ ನಾಮವ ಕೊಂಡಾಡುವರು ೪

ಬೂಟಾಟಿಕೆ ಮಾತುಗಳನ್ನ ಏತಕೆ
ಸಾಟಿಯಾರು ಜಗದೊಳಗಿನ್ನು

ಆನಂದಮಯ ಅಂತರಾತ್ಮವಿಠಲ
ನವನೀತ ಧರ ತಾಂಡವ ಕೃಷ್ಣ ವಿಠ್ಠಲ
ಜಯವೆಂದು ಪಾಡುವೆ ಜಯಾಪತಿ ವಿಠ್ಠಲ
ಸರಿಯುಂಟೆ ನಿನಗಿನ್ನು ಶಾಂತೀಶ ವಿಠ್ಠಲ ೨

ಗಂಗಾಜನಕ ಶ್ರೀ ಗಜವರದ ವಿಠ್ಠಲ
ಸಂಗರಹಿತ ಶೇಷಶಯನ ವಿಠ್ಠಲ
ಹಯವನೇರುತ ಪೊರೆದೆ ಶ್ರೀಹರಿ ವಿಠ್ಠಲ
ದಾನವೈರಿಯೆ ಧ್ರುವವರದ ವಿಠ್ಠಲ ೩

ಗರುಡಗಮನ ಗುರುವಾಸುದೇವ ವಿಠ್ಠಲ
ವರವ ಪಾಲಿಸು ವರದ ಲಕ್ಷ್ಮೀಶ ವಿಠ್ಠಲ
ಪದ್ಮನಾಭನೆ ಕಾಯೊ ಪ್ರದ್ಯುಮ್ನ ವಿಠ್ಠಲ
ವರಲಕ್ಷ್ಮೀರಮಣ ವರದ ವೆಂಕಟೇಶ ವಿಠ್ಠಲ ೪

ಸಜ್ಜನಪಾಲ ಶ್ರೀ ಸುಜ್ಞಾನ ವಿಠ್ಠಲ
ಶಾಮಲಾಂಗನೆ ಕೃಷ್ಣ ಶ್ರೀನಾಥ ವಿಠ್ಠಲ
ಭಾರ ಕರ್ತೃ ಭಾರತೀಶ ಪ್ರಿಯ ವಿಠ್ಠಲ
ಪರಿಸರನೊಡೆಯ ಶ್ರೀವರಹ ವಿಠ್ಠಲ ೫

ಜ್ಞಾನದಾಯಕ ಆನಂದಮಯ ವಿಠ್ಠಲ
ಸಜ್ಜನ ಪರಿಪಾಲ ಶ್ರೀ ಪ್ರಾಜ್ಞ ವಿಠ್ಠಲ
ಜಗವ ಮೋಹಿಪ ದೇವ ಜಗದ್ಭರಿತ ವಿಠ್ಠಲ
ವಿಶ್ವ ವ್ಯಾಪಕ ವಿಜ್ಞಾನಮಯ ವಿಠ್ಠಲ ೬

ವಿಷ್ಣುಮೂರುತಿ ಕೃಷ್ಣದ್ವೈಪಾಯನ ವಿಠ್ಠಲ
ಅಕ್ಷರೇಡ್ಯನೆ ಕಾಯೋ ಲಕ್ಷ್ಮೀಶ ವಿಠ್ಠಲ
ಕಂಟಕ ಹರಿಸು ಶ್ರೀವೆಂಕಟೇಶ ವಿಠ್ಠಲ
ಸಾರಿದೆ ಸಲಹೆನ್ನ ಶ್ರೀರಮಣ ವಿಠ್ಠಲ ೭

ಭೂಮಿಗೊಡೆಯ ವರಹನನು ನೋಡಿ
ಕಾಮಿನಿ ಬಕುಳೆ ಸೇವೆಗೆ ಮಾಡಿ
ಕಾಮಜನಕ ಬೇಟೆಗೆ ಹೊರಟನು ಬಹು
ಪ್ರೇಮದಿಂದಲಂಕರಿಸಿದ ಹರಿಗೆ
ಮಂಗಳಂ ಜಯ ಮಂಗಳಂ ೪

ವನವನ ಚರಿಸಿ ಸ್ತ್ರೀಯರ ನೋಡಿ
ವನಜಾಕ್ಷೇರು ನಡುಗುತ ಭಯದಿ
ಘನಮಹಿಮಗೆ ಕಲ್ಲು ಕಲ್ಲೆಸೆಯೆ ಹಯ
ವನದಿ ಮೃತಿಸೆ ಗಿರಿ ಏರಿದಗೆ
ಮಂಗಳಂ ಜಯ ಮಂಗಳಂ ೫

ಕಾಮಿನಿ ಬಕುಳೆಗೆಲ್ಲವ ಪೇಳಿ
ಕೋಮಲೆ ಕೊರವಿ ರೂಪವ ತಾಳಿ
ವ್ಯೋಮರಾಜನ ಪುರದಲಿ ಧರಣಿಗೆ
ಸಾಮುದ್ರಿಕೆ ಪೇಳಿದ ಹರಿಗೆ
ಮಂಗಳಂ ಜಯ ಮಂಗಳಂ ೬

ವಶಿಷ್ಟ ಕಶ್ಯಪರು ಶುಕರುಗಳು
ವಿಶಿಷ್ಟ ಬಂಧುಗಳ ಕರೆಸುತಲಿ
ಪಟ್ಟದರಸಿ ಲಕುಮಿಯು ಬರೆಹರುಷದಲಿ
ಕಟ್ಟಿ ಮಾಂಗಲ್ಯ ಹರಿ ಪದ್ಮಿನಿಗೆ
ಮಂಗಳಂ ಜಯ ಮಂಗಳಂ ೭

ಜಯ ಜಯ ವೆಂಕಟ ಪದ್ಮಿನಿಗೆ
ಜಯ ಜಯ ಪದ್ಮಾವತಿಪ್ರಿಯಗೆ
ಜಯ ಜಯ ಕಮಲನಾಭ ವಿಠ್ಠಲಗೆ
ಜಯ ಜಯ ಶ್ರೀ ಶ್ರೀನಿವಾಸನಿಗೆ
ಮಂಗಳಂ ಜಯ ಮಂಗಳಂ ೮

ದುರುಳರ ಮಡುಹಿದ ವರದ ವಿಠ್ಠಲ
ಅಂಬುಧಿ ಶಯನಪನ್ನಂಗ ಶಯನ ವಿಠ್ಠಲ
ದಾರಿ ತೋರಿಸೊ ದಾಮೋದರ ವಿಠ್ಠಲ
ಕರುಣಿಸಿ ಪೊರೆ ಎನ್ನ ಕಮಲನಾಭ ವಿಠ್ಠಲ ೮

ಕಂಜದಳಾಕ್ಷ ಕಮಲನಾಥ ವಿಠ್ಠಲ
ಮುರಮರ್ದನನೆ ಕಾಯೋ ಮುರಳೀಧರ ವಿಠ್ಠಲ
ದಯದಿಂದ ಪಾಲಿಸು ದಯಾನಿಧೆ ವಿಠ್ಠಲ
ಅಚ್ಚುತ ಹರಿ ಕೃಷ್ಣಕ್ಷೇತ್ರಜ್ಞವಿಠ್ಠಲ ೯

ಜ್ಞಾನಿಗಳರಸನೆ ಆನಂದ ವಿಠ್ಠಲ
ಮೂಜಗದೊಡೆಯ ಭಾರ್ಗವೀಶ ವಿಠ್ಠಲ
ಸರ್ವಕರ್ತೃ ಪುರುಷೋತ್ತಮ ವಿಠ್ಠಲ
ಮಧುವೈರಿ ಪೊರೆಮಧುರನಾಥ ವಿಠ್ಠಲ ೧೦

ರಾಕ್ಷಸವೈರಿ ರಮಾಧವ ವಿಠ್ಠಲ
ಕರುಣಿಗಳರಸನೆ ಕಾರುಣ್ಯ ವಿಠ್ಠಲ
ಎದುರ್ಯಾರೋ ನಿನಗಿನ್ನು ಯದುಪತಿ ವಿಠ್ಠಲ
ಉದ್ಧರಿಸೆನ್ನ ಉದ್ಧವವರದ ವಿಠ್ಠಲ ೧೧

ನಾಗಶಯನ ಕೃಷ್ಣಯೋಗೀಶ ವಿಠ್ಠಲ
ಕುಂಭಿಣಿಪತಿ ಶ್ರೀಶ ಸಿಂಧುಶಯನ ವಿಠ್ಠಲ
ಸುಜ್ಞಾನವೀವ ಪ್ರಾಜ್ಞಾನಿಧಿ ವಿಠ್ಠಲ
ಸಂಕಟಹರಿಸು ಸಂಕರ್ಷಣ ವಿಠ್ಠಲ ೧೨

ಗೋಪಿಕಾಲೋಲ ಗೋಪೀನಾಥ ವಿಠ್ಠಲ
ವೇದ ಪ್ರತಿ ಪಾದ್ಯ ವೈಕುಂಠಪತಿ ವಿಠ್ಠಲ
ಮಾತರಿಶ್ವಪ್ರಿಯ ಶ್ರೀಕಾಂತ ವಿಠ್ಠಲ
ಧನ್ಯನಾದೆನೋ ದೇವ ಧನ್ವಂತ್ರಿ ವಿಠ್ಠಲ ೧೩

ಕಮಲದಳಾಕ್ಷಗೆ ಕಮಲಮುಖಿಯರೆಲ್ಲ
ಕಮಲ ಮುತ್ತಿನ ಆರತಿ ಪಿಡಿದು
ಕಮಲನಾಭ ವಿಠ್ಠಲನ ಪಾಡಿ ಹರುಷದಿ
ಕಮಲಾಕ್ಷಿಯರು ಶೋಭನ ಪಾಡುತ್ತ ೩

## ೧೨೯

ಬಂದರು ನಾರದರ್ಹರುಷದಲಿ
ನಿಂದು ಯಜ್ಞ ನೋಡುತ ಮುದದಿ
ಇಂದು ಯಾರಿಗರ್ಪಣೆ ಮಾಡುವಿರೆನೆ
ಬಂದಿತು ಸಂಶಯ ಋಷಿಗಳಿಗೆ
ಮಂಗಳಂ ಜಯ ಮಂಗಳಂ ಪ

ತ್ವರದಿಭೃಗು ಮುನಿಗಳು ಹೊರಡುತಲಿ
ಹರಬ್ರಹ್ಮರು ಸರಿಯಲ್ಲೆನುತ
ಹರಿವೈಕುಂಠದಿ ಮಲಗಿರೆ ನೋಡುತ
ಭರದಿಂದೊದೆಯೆ ವಕ್ಷಸ್ಥಳಕೆ
ಮಂಗಳಂ ಜಯ ಮಂಗಳಂ ೧

ನೊಂದಿತು ಪಾದವೆಂದುಪಚರಿಸೆ
ಇಂದಿರಾದೇವಿ ಕೋಪಿಸಿ ತೆರಳೆ
ಬಂದು ಋಷಿಗಳಿಗರುಹಿದರು ಶ್ರೀಗೋ-
ವಿಂದಗೆ ಸಮರಿಲ್ಲೆಂದೆನುತಾ
ಮಂಗಳಂ ಜಯ ಮಂಗಳಂ ೨

ಮಡದಿ ಇಲ್ಲದೆ ಬೇಸರ ಪಡುತಾ
ಪೊಡವಿಗಿಳಿದು ಹುತ್ತದೊಳಗಿರಲು
ಕೊಡಲಿಯ ಗಾಯಕೌಷಧ ಹುಡುಕುತ ಹರಿ
ಅಡವಿಗಳಲಿ ಸಂಚರಿಸಿದಗೆ
ಮಂಗಳಂ ಜಯ ಮಂಗಳಂ ೩

ಸಿರದ ಮಾಲೆಯ ಧರಿಸಿಕೊಂಡಿಹ
ಪರಮ ಆಶ್ಚರ್ಯದಲಿ ನಾವೆಲ್ಲ
ಅರುಹಲೀಗ ಬಂದಿಹೆವು ಎನುವರು ೨

ಅಂದು ಮೋಹಿನಿ ರೂಪವ ಕಂಡು
ಪರಶಿವನು ಇನ್ನೊಮ್ಮೆ ನೋಡಲು ಬೇಡೆ
ಪರಮಾತ್ಮನಾ ಸುಂದರಾಕೃತಿಯ
ನೋಡುತ ಪಿಡಿಯಲು ಪೋಗಿ
ನಂದ ಕಂದನ ರೂಪ ನೋಡಿದನು
ಹಿಂದೆ ಮೂಕಾಸುರನೆಂಬ ದೈತ್ಯನ ಕೊಲಿಸಿದ
ಇಂದಿರೇಶನಿಗೆ ಸೇವಕನಾದ ಶಿವನು
ಮಂದಗಮನೆ ಉಮೆ ಇಂದು ಶಿವನನು
ನಿಂದಿಸಿದೆವೆಂದೆನಲು ಬೇಡ ಶ್ರೀ–
ತಂದೆ ಕಮಲನಾಭ ವಿಠ್ಠಲನ
ಚಂದದಲಿ ಭಜಿಸುವನು ಎನುವರು ೩

## ೧೨೮

ಪರಮಾನಂದದಿ ಸರಸಿಜಾಕ್ಷಿಯರೆಲ್ಲ
ಪರಮ ಪುರುಷನಿಗಾರತಿ ಎತ್ತುತ ಪ

ಕರಿವರ ವರದನ ಸ್ಮರಿಸುತ ಸಂತತ
ನವರತ್ನದಾರತಿ ಬೆಳಗಿದರು ಅ.ಪ

ಗೋಪಿಕಾಲೋಲನಿಗೆ ಗೋಪಾಲಕೃಷ್ಣಗೆ
ಗೋವರ್ಧನೋದ್ಧಾರ ಗೋವಿಂದಗೆ
ಗೋಪಸ್ತ್ರೀಯರ ಕೂಡ್ಯಾಡಿದ ಹರಿಗೆ
ಗೋಪಿಬಾಲನಿಗೆ ಎತ್ತಿದರಾರತಿ ೧

ನಂದಕುಮಾರಗೆ ನವನೀತ ಚೋರಗೆ
ಬೃಂದಾವನದಿ ವಿರಾಜಿಪಗೆ
ಚಂದಿರವದನಗೆ ಇಂದಿರೆ ಸಹಿತಗೆ
ಕುಂದಣದಾರತಿ ಬೆಳಗಿದರು ೨

ಶ್ರೀಧರ ಪೊರೆ ವೇದವತೀಶ ವಿಠ್ಠಲ
ಸಾಧುಗಳರಸನೆ ಭಕ್ತವತ್ಸಲ
ಮೇದಿನಿಯೊಳು ನಿನ್ನ ಪೋಲುವರಿಲ್ಲ
ಆದರದಿಂ ಕೇಳೊ ನೀ ಎನ್ನ ಸೊಲ್ಲ ೧೪

ರನ್ನ ಮಂಟಪದೊಳು ಚಿನ್ನದ ತೊಟ್ಟಿಲು
ಕನ್ನೇರುತೂಗಿ ಪಾಡುವರೊ ಗೋವಿಂದ
ಕರುಣಸಾಗರ ಕೃಷ್ಣ ಮಲಗಿ ನಿದ್ರೆಯ ಮಾಡೊ
ಕಮಲನಾಭ ವಿಠ್ಠಲ ಪರಮದಯಾಳು ೧೫

## ೧೨೪

ಜೋಜೋ ಜೋಜೋ ಲಾಲಿ ಗೋವಿಂದ
ಜೋಜೋ ಜೋಜೋ ಲಾಲಿ ಮುಕುಂದ
ಜೋಜೋ ಜೋಜೋ ಲಾಲಿ ಆನಂದ
ಜೋಜೋ ಜೋಜೋ ಲಾಲಿ ಗೋಪಿಯ ಕಂದ ಪ

ಚಿನ್ನದ ತೊಟ್ಟಿಗೆ ರನ್ನದ ಮಲುಕು
ಕನ್ನಡಿ ಹೊಳೆವೊ ಮೇಲ್ಕಟ್ಟಿನ ಬೆಳಕು
ಸ್ವರ್ಣ ಮಂಟಪದಿ ರಾಜಿಪದಿವ್ಯ ಹೊಳಪು
ಕರ್ನೇರಲಂಕರಿಸಿ ನಲಿಯುವ ಕುಲುಕು ಜೋ ಜೋ ೧

ಅರಿಶಿನ ಕುಂಕುಮ ಗಂಧ ಪುಷ್ಪಗಳು
ಸರಸೀಜಾಕ್ಷಗೆ ಮುತ್ತಿನ್ಹಾರ ಪದಕಗಳು
ಸುರರೊಡೆಯಗೆ ಪಟ್ಟೆ ಪೀತಾಂಬರಗಳು
ಹರುಷದಿಂದಿರಿಸಿ ನಲಿವ ಸ್ತ್ರೀಯರುಗಳು ಜೋ ಜೋ ೨

ಮುತ್ತೈದೆಯರೆಲ್ಲ ಬಂದು ನೆರೆದರು
ಉತ್ತಮ ಸ್ವರ್ಗ ಕಲಶವ ಪೂಜಿಸುವರು

ಚಿತ್ತಜನಯ್ಯನ ಎತ್ತಿಕೊಂಡಿಹರು
ಮತ್ತೆ ತೊಟ್ಟಿಲೊಳಿಟ್ಟು ಜೋಗುಳವ ಹಾಡಿದರು
ಜೋ ಜೋ ೩

ಕೇಶವನನ್ನು ತನ್ನಿ ನಾರಾಯಣನ್ನ
ಆಸೆಲಿ ಮಾಧವ ಗೋವಿಂದನನ್ನ
ಸಾಸಿರ ನಾಮದ ವಿಷ್ಣು ಮಧುಸೂದನನ್ನ
ಸೋಸಿಲಿ ತ್ರಿವಿಕ್ರಮ ವಾಮನನ್ನ ಜೋ ಜೋ ೪

ಶ್ರದ್ಧೆಯಲಿ ಶ್ರೀಧರ ಹೃಷಿಕೇಶನನ್ನ
ಪದ್ಮನಾಭನ ಕೊಳ್ಳಿ ದಾಮೋದರನ್ನ
ಶುದ್ಧ ಮನದಿ ಸಂಕರ್ಷಣ ವಾಸುದೇವನನ್ನ
ಪ್ರದ್ಯುಮ್ನನನು ತನ್ನಿ ಅನಿರುದ್ಧನನ್ನ ಜೋ ಜೋ ೫

ಪುರುಷೋತ್ತಮನ ಕೊಳ್ಳಿ ಅದೋಕ್ಷಜನನ್ನ
ನಾರಸಿಂಹನ ತನ್ನಿ ಅಚ್ಚುತನನ್ನ
ಸರಸದಿ ಜನಾರ್ದನ ಉಪೇಂದ್ರನನ್ನ
ಹರುಷದಿಂದಲಿ ಕೊಳ್ಳಿ ಹರಿ ಶ್ರೀಕೃಷ್ಣನನ್ನ ಜೋ ಜೋ ೬

ಹೀಗೆಂದು ತೂಗುತ ಜೋಗುಳ ಹಾಡಿ
ನಾಗವೇಣಿಯರು ಸಂಭ್ರಮದಿಂದ ಕೂಡಿ
ಆಗ ಕಮಲನಾಭ ವಿಠ್ಠಲನ್ನ ನೋಡೀ
ಬೇಗ ರಕ್ಷೆಗಳನಿತ್ತರು ತ್ವರೆ ಮಾಡಿ ಜೋ ಜೋ ೭

## ೧೨೫

ಜೋ ಜೋ ಶ್ರೀಹರಿ ಮಲಗೊ ಜೋಗುಳ ಪಾಡಿ
ಪಾಡಿ ತೂಗುವೆ ಮುದದಿ ಪ

ಯೋಗಿಗಳರಸನೆ ಸಾಗರಶಯನನೆ
ಭಾಗವತರಪ್ರಿಯ ಬಾಗಿ ಸ್ತುತಿಪರೊ ನಿನ್ನ ಅ.ಪ

ಕಡಲಶಯನ ಕಮಲನಾಭ ವಿಠ್ಠಲನ ಗುಣ
ಒಡೆದು ಪೇಳದೆ ಗುಟ್ಟಾಗಡಗಿಸಿ ನಡೆಯಮ್ಮ ೫

## ೧೨೭

ಪತಿಯ ಮಂದಿರದಲಿ ಸುಖವಾಗಿ ಬಾಳಮ್ಮ
ಮತಿವಂತೆ ಎನಿಸಿ ಸನ್ಮತಿ ಪಡೆದು ಪ

ಚತುರಳೆ ನಿನ್ನ ಸಖಿಯರೆಲ್ಲರು
ಅತಿಶಯದಿ ನಿನ್ನ ಪತಿಯ ಗುಣಗಾನ
ಕಥನ ಮಾಡುತ ನಿನ್ನೆದುರಿನಲಿ
ಸ್ತುತಿಸಿ ಹಿಗ್ಗಿ ಪೊಗಳುವರೆ ಪಾರ್ವತಿ ಅ.ಪ

ವಸತಿ ಇಲ್ಲದೆ ಸ್ಮಶಾನದಲಿ ವಾಸಿಪನೆಂದು
ಅಪಹಾಸ್ಯ ಮಾಡುವರೆ
ವಸನ ಪೀತಾಂಬರವನುಡುವುದನರಿಯದೆ
ಹಸಿಯ ಚರ್ಮವನುಡುತಿಹನೆಂಬರೆ
ಅಸನಕಿಲ್ಲದೆಗರಳ ವಿಷವನುಂಬುವನೆಂದು
ಗುಸುಗುಸು ನುಡಿಯುವರೆ
ಅಸಮನೇತ್ರನು ಭಸುಮ ಲೇಪಿಸಿ
ವೃಷಭರಾಜನ ಏರಿ ಬರುವನು
ಶಶಿಮುಖಿಯೆ ನೀನರಿಯದಲೆ ಈ
ಪಶುಪತಿಗೆ ಸತಿಯಾದೆ ಎಂಬರು ೧

ಸರಿಸವತಿಯ ತನ್ನ ಸಿರಮೇಲಿರಿಸಿದಿ
ಗಿರಿಜೆ ತರವಲ್ಲ ಕೇಳೆ
ಪರಿಪರಿ ರತ್ನಾಭರಣಂಗಳರಿಯದೆ
ಉರಗಗಳ ಭೂಷಿತನಾದ ನಮ್ಮ
ಗರಳ ಕಂಠನಿಗೆ ನೀನರಿಯದೆ ಸತಿಯಾದೆ ಎಂದು
ತರಳರೆಲ್ಲರು ಹಾಸ್ಯ ಮಾಡುವರೆ
ಸರಸವಾಡುತ ನೋಡು ಕಂಠದಿ

ನವನೀತ ಚೋರನೆಂದು ನಾರಿಯರೆಲ್ಲ
ನವವಿಧ ನುಡಿ ನುಡಿವರೊ
ಭುವನ ಮೋಹನಸ್ವಾಮಿ ಸುಮನಸ ವಂದ್ಯನೆ
ಕವಿ ಜನರಪ್ರಿಯ ಶ್ರೀ ಕಮಲನಾಭ ವಿಠ್ಠಲ ೭

## ೧೨೬

ಪತಿಮಂದಿರದಲಿ ನೀ ಸುಖವಾಗಿ ಬಾಳು ನಿನ್ನ
ಪತಿಗಹಿತಕರ ಸಂಗ ತ್ಯಜಿಸಮ್ಮ ಮಗಳೆ ಪ

ಉದಯ ಪೂರ್ವಕೆ ಎದ್ದು ಹರಿಯ ಸ್ಮರಣೆಯ ಮಾಡು
ಮುದದಿ ಗುರುಹಿರಿಯರಿಗೆ ವಂದನೆಯ ಮಾಡು
ಮದನನಯ್ಯನ ಭಜಕರನು ಕಂಡು ನಲಿದಾಡು
ಪದುಮನಾಭಗೆ ಪಟ್ಟದರಸಿಯಾಗಮ್ಮ ೧

ರತ್ನಾಕರನು ತಂದೆ ಎನುತ ಗರ್ವಿಸಬೇಡ
ಮತ್ತೆನಗೆ ಸರಿಯಾರು ಎಂದೆನಲು ಬೇಡ
ಚಿತ್ತಜನಯ್ಯನ ಮನವರಿತು ನಡೆಯಮ್ಮ
ಹೊತ್ತು ಹೊತ್ತಿಗೆ ಪತಿಯ ಸೇವೆ ನಿರತಳಾಗಿ ೨

ಬಿಟ್ಟಕಂಗಳು ಮುಚ್ಚದವನು ಎಂದೆನಬೇಡ
ಬೆಟ್ಟ ಬೆನ್ನಿಲಿ ಪೊತ್ತನೆನಲು ಬೇಡ
ಗಟ್ಟಿ ನೆಲವನು ಕೆದರಿ ಅಲಸಿದನೆನಬೇಡ
ಹೊಟ್ಟೆಯ ಕರುಳನು ಬಗೆದವ ನೆನೆಬೇಡ ೩

ಕಡುಲೋಭಿದಾನ ಬೇಡಿದನು ಎಂದೆನಬೇಡ
ಪೊಡವಿಪಾಲಕರ ಕೆಡಹಿದನು ಎನಬೇಡ
ಮಡದಿಯ ತಂದ ಕಪಿವಡೆಯನು ಎನಬೇಡ
ತುಡುಗತನದಿ ಪಾಲ್ಬೆಣ್ಣೆ ಚೋರನೆಂದೆನಬೇಡ ೪

ಉಡಿಗೆ ಉಡದ ಮಾನಗೇಡಿ ಇವನೆನಬೇಡ
ತುಡಗತನದಿ ರಾಹುತನಾದನೆನಬೇಡ

ಹರ ಬ್ರಹ್ಮಾದಿಗಳು ಕೂಡಿ ನಿನ್ನನು
ಪರಿಪರಿ ವಿಧದಲಿ ಕೊಂಡಾಡಿ
ಸುರರು ಗಂಧರ್ವರು ವರಋಷಿಗಳು ಕೂಡಿ
ಪರಮ ಸಂಭ್ರಮದಿಂದ ಹರಿ ನಿನ್ನ ಸ್ತುತಿಪರು ೧

ಗೋಕುಲದ ನಾರಿಯರು ಗೋವಿಂದ ನಿನಗೆ
ಬೇಕಾದ ಪಾಲ್ಮೊಸರು
ಜೋಕೆಯಿಂದಲಿ ಹೊಸ ಬೆಣ್ಣೆ ತಂದಿಹೆವೆಂದು ಅ–
ನೇಕ ಬಗೆಯಲಿ ಸ್ತುತಿ ಮಾಡಿ ಬೇಡುತಲಿರುವರು ೨

ದಿಟ್ಟ ಗೋಪಾಲ ಕಯ್ಯೊಳಗೊಂದು
ಪುಟ್ಟ ಬಚ್ಚೆಯ ಪಿಡಿದು
ಅಚ್ಚುತ ನಿನಗೀವೆವೆಂದು ಬಾಗಿಲೋಳ್ ನಿಂದು
ಪುಟ್ಟ ಮಕ್ಕಳು ಬಾಯಿಬಿಟ್ಟು ಪ್ರಾರ್ಥಿಸುವರು ೩

ಇನಕೋಟಿ ಪ್ರಭೆ ನಾಚಿಪ ಮುಖ ಕಮಲದ
ದನುಜದಲ್ಲಣ ನಿನ್ನನು
ಸನಕಾದಿಗಳು ಸ್ತುತಿಮಾಡಿ ಮೈ ಮರೆತರೊ
ವನಿತೆಯರೋಕುಳಿಗಳನಾಡಿ ನರ್ತಿಸುವರೊ ೪

ನಿದ್ರೆ ಮಾಡಿದರೆ ನೀನು ಈ ಜಗವೆಲ್ಲ
ಉದ್ಧಾರವಾಗುವುದೇನು
ನಿದ್ರೆ ಸಾಕೇಳೆಂದು ದುರ್ಗಾದೇವಿಯರು ಸ್ತುತಿಸೆ
ಮುದ್ದು ಕೃಷ್ಣನೆ ಭಕ್ತರುದ್ಧಾರಕರ್ತನೆ ೫

ಹಯ ಮುಖ ಹರಿ ಮತ್ಸ್ಯನೆ ಕೂರ್ಮನೆ ವರಹ
ಹಯಗ್ರೀವ ನರಸಿಂಹನೆ
ಜಯವಟು ಭೃಗು ರಾಮಕೃಷ್ಣ ಬುದ್ಧನೆ ಕಲ್ಕಿ
ಜಯ ನಾನಾ ರೂಪನೆ ಜಯವೆಂದು ಪೊಗಳ್ವರೊ ೬

## ೬೦

ಧನ್ವಂತ್ರಿ ನಿನ್ನ ಸ್ಮರಿಸಿ ಧನ್ಯರಾಗಿಹರ ಪಾದ
ಧ್ಯಾನದೊಳಿರಿಸೆನ್ನ ಧನ್ಯನೆಂದೆನಿಸೊ ಪ

ನಿನ್ನ ದಾಸರ ಕೀರ್ತಿ ನಿನ್ನ ದಾಸರ ವಾರ್ತೆ
ನಿನ್ನ ನಾಮಾಮೃತವು ಎನ್ನ ಕಿವಿ ತುಂಬಿರಲಿ ಅ.ಪ

ನಿನ್ನ ಪಾದದ ಸ್ಮರಣೆಯನ್ನು ಮಾಳ್ಪರ ಸಂಗ
ಇನ್ನು ಪಾಲಿಸು ದೇವನೆ
ಘನ್ನ ಮಹಿಮನೆ ಪರಮ ಪುಣ್ಯಶೀಲರ ಸೇವೆ
ಇನ್ನು ಕರುಣಿಸೊ ಕೇಶವಾ
ಸನ್ನುತಾಂಗನೆ ಭವಭಯವನ್ನು ಬಿಡಿಸೆಂದು ನಾ
ನಿನ್ನ ಮೊರೆಯಿಡುವೆ ಹರಿಯೇ
ಚನ್ನ ಶ್ರೀಗೋಪಾಲ ಗೋವಿಂದ ಕೇಶವ
ನಿನ್ನ ನಾಮನಿರಂತರವು ಪಾ-
ವನ್ನ ಮಾಡಲಿ ಎನ್ನ ಜಿಹ್ವೆಯಾ ೧

ಆದರದಿ ನಿನ್ನ ಸ್ಮರಿಪ ಸಾಧುಜನರ ಸಂಗ
ಭೇದವಿಲ್ಲದೆ ಕರುಣಿಸೊ
ಆದಿ ಮೂರುತಿ ನಿನ್ನ ಆದರದಿ ಸ್ಮರಿಪ ಪರ-
ಮಾದರವ ನಿತ್ತು ಸಲಹೊ
ಸಾಧು ಜನರೊಡಗೂಡಿ ಮೋದ ಪಡುವ ಭಾಗ್ಯ
ಮಾಧವನೆ ದಯಪಾಲಿಸೋ
ಶ್ರೀದ ಶ್ರೀಭೂರಮಣ ಮಾಧವ ಜನಾರ್ದನ
ಕ್ರೋಧಿ ಸಂವತ್ಸರವು ಭಕುತರ
ಕ್ರೋಧಗಳ ಕಳೆಯುತ್ತ ಸಲಹಲಿ ೨

ಶರಣೆಂದು ಬೇಡುವೆ ಪರಿಪರಿ ಅಘಗಳ
ಪರಿಹರಿಸೆಂದು ನಾ ಸ್ಮರಿಸಿಬೇಡುವೆನು

ಭಕ್ತವತ್ಸಲ ತನ್ನ ಭಕ್ತರ ಸಂಗದೊಳಿಟ್ಟು
ಸಂತೈಸುವ ಸತ್ಯಸಂಕಲ್ಪ ಶ್ರೀ ೫

ತಾಳ ತಂಬೂರಿ ಸುಸ್ವರಗಳಿಂದಲಿ ಬಹು
ನೇಮದಿಂದಲಿ ಸರುವರು ಕೂಡಿ
ಗಾನಲೋಲನ ಭಜನೆಯ ಮಾಡುತ ಸತ್ಯ
ಸ್ವಾಮಿಯ ಗುಣಗಳ ಪೊಗಳುವ ಸುಜನರು ೬

ಸಡಗರದಿಂದಲಿ ಕಡಲೊಡೆಯನ ಗುಣ
ಪೊಗಳುತ ಹಿಗ್ಗುತ ಅಡಿಗಡಿಗೆ
ಕಡಲ ಶಯನ ಕಮಲನಾಭ ವಿಠ್ಠಲನೆಂದು
ಬಿಡದೆ ಭಜಿಸುವರ ತೊಡರು ಬಿಡಿಸುವ ಶ್ರೀ ೭

## ೧೧೧

ಯಾಕೆ ಮನದಲಿ ಶೋಕಿಸುತ್ತಿರುವೆ ಜಗ
ದೇಕನಾಥನು ಸಾಕುತಿರುವನು ನೀ ತಿಳಿಯದಿರುವೆ ಪ

ಲೋಕನಾಥನ ವಿವೇಕದಿ ಸ್ತುತಿಸದೆ
ವ್ಯಾಕುಲದಿಂ ಮನ ಕಳವಳಗೊಳುತಲಿ ಅ.ಪ

ಸೃಷ್ಟಿಕರ್ತನು ರಕ್ಷಿಸುತ್ತಿರುವ
ದುರಿತಂಗಳ ರಾಸಿಯ
ಬೆಟ್ಟಗಳ ತರಿದೊಟ್ಟು ತಿರುವ
ಅದು ತಿಳಿಯದು ನೀ ಬಲು
ಕಷ್ಟಗಳ ಪಡುತಿರ್ಪ ವಿಷಯಗಳ
ನೋಡುತ ನಗುತಿರುವ
ಇಷ್ಟು ಈತನ ಪ್ರಭಾವವು ತಿಳಿಯದೆ
ಲಕ್ಷ್ಮಿರಮಣ ರಕ್ಷಿಸೆನ್ನುತ ಸ್ಮರಿಸದೆ ೧

ಸರಸಿ ಜೋದ್ಭವಪಿತನೆ ಸರಸಿಜಾಕ್ಷಿಯ ಕೂಡಿ
ಹರುಷದಿ ನೆಲಸೆನ್ನ ಹೃದಯದಲಿ ದೇವ
ಸರಸಿಜನೇತ್ರನೆ ಬಿಡದೆ ನಿನ್ನನು ಸ್ಮರಿಪ
ಕಡುಭಾಗವತರ ಸಂಗವನೆ ನೀಡೈ
ಮೃಡನ ಸಖನೆ ನಿನ್ನಂಘ್ರಿ ಸ್ಮರಿಸುವ ಭಾಗ್ಯ
ತಡೆಯದಲೆ ಪಾಲಿಸುತ ಪೊರೆ ಶ್ರೀ
ಕಮಲನಾಭ ವಿಠ್ಠಲನೆ ದಯದಲಿ ೩

## ೯೧

ನೊಂದು ಬಳಲಿದೆ ದೇವ ಇಂದಿರೇಶ ಸರ್ವೇಶ ಶ್ರೀಶ
ತಂದೆ ರಕ್ಷಿಸಿ ಸಲಹೊ ಶ್ರೀನಿವಾಸ ಪ

ಕಂದರ್ಪಜನಕ ಕಾರುಣ್ಯವಾರಿಧಿ ದೇವ
ಮಂದರೋದ್ಧಾರಿ ಕಂಸಾರಿ ಶ್ರೀಹರಿ ಶೌರಿ ಅ.ಪ

ಸ್ನಾನಜಪತಪವ ನೇಮಗಳ ಬಿಟ್ಟೆ
ಮೌನವನು ಬಿಟ್ಟೆ ದಾನಧರ್ಮವ ಕೊಡದೆ ಕೈಬಿಟ್ಟೆ
ಶ್ರೀನಿವಾಸನ ಪೂಜೆನೇಮ ನಿಷ್ಠೆ ಮಾಡದಲೆ ಬಿಟ್ಟೆ
ಶ್ವಾನ ಸೂಕರನಂತೆ ಹೊರೆದೆ ಹೊಟ್ಟೆ
ಏನ ಪೇಳಲಿ ಪರರ ದ್ರವ್ಯಪಹರಿಸುತಿಹ
ಹೀನ ಜನರ ಸಂಗಮಾಡಿ ಬಳಲಿ ಬರಿದೆ ೧

ಹಿಂದಿನ ಪಾಪ ದುಷ್ಕರ್ಮ ಫಲವೋ ಇದು ನಿನ್ನ ಒಲವೊ
ಸುಂದರಾಂಗನೆ ರಕ್ಷಿಸೆನ್ನ ಸಲಹೊ
ಬಂಧನದ ಬಹಳ ಭವ ಕರೆ ಕರೆಯೋ ಭವಬಂಧ ಸೆರೆಯೊ
ಇಂದಿರಾರಮಣ ಬಿಡಿಸೆನ್ನ ಪೊರೆಯೊ
ಹಿಂದೆ ಮುಂದೆನಗೆ ಗತಿ ನೀನೆಂದು ನಂಬಿದೆ ದೇವ
ಮಂದರೋದ್ಧಾರಿ ಮುಚುಕುಂದ ವರದನೆ ಸ್ವಾಮಿ ೨

## ೧೧೦

ಮನ್ಮಥನಯ್ಯನ ಮನದಲಿ ಸ್ಮರಿಸಿರೊ
ಮನ್ಮಥ ನಾಮ ಸಂವತ್ಸರದಿ ಪ

ಸುಮ್ಮನೆ ಕಾಲವ ಕಳೆಯುವದೇತಕೆ
ಬ್ರಹ್ಮನಪಿತ ನಂಘ್ರಿಗಳ ಭಜಿಸುತ ಅ.ಪ

ಬಂಧು ಬಳಗ ಮಂದಿಮಕ್ಕಳೆಲ್ಲರು ಕೂಡಿ
ಒಂದೆ ಸ್ಥಳದಿ ಭಜನೆಯಮಾಡಿ
ಇಂದಿರಾರಮಣನ ಚಂದದಿ ಪೊಗಳಲು
ಬಂದ ದುರಿತಗಳ ಪೊಂದಿಸನೆಂದೆಂದು ೧

ಮಾಕಮಲಾಸನ ಲೋಕದ ಜನರಿಗೆ
ತಾಕಾಣಿಸಿ ಕೊಳ್ಳದೆ ಇಹನು
ಶ್ರೀಕರ ಸಲಹೆಂದು ಏಕ ಭಕುತಿಯಲಿ
ಲೋಕವಂದ್ಯನ ಸ್ತುತಿಗೆ ನೂಕುವ ಅಘಗಳ ೨

ಅತಿಶಯದಿಂದಲಿ ಸತಿಸುತರೆಲ್ಲರು
ಪತಿತಪಾವನನ ಕೊಂಡಾಡುತಲಿ
ಗತಿ ನೀನಲ್ಲದೆ ಮತ್ತೆ ಹಿತರ್‍ಯಾರಿಲ್ಲವೆನೆ
ಸತತ ಸುಕ್ಷೇಮವಿತ್ತು ಪಾಲಿಸುವಂಥ ೩

ಶ್ರಮವ ಪರಿಹರಿಸೆಂದು ನಮಿಸಿಬೇಡುವ ಭಕ್ತ
ಜನರನು ಸಂತೈಸುತಲಿಹನು
ಹನುಮ ಭೀಮ ಮಧ್ವಮುನಿಗಳ ಸೇವಿಪ
ಮನುಜರ ಮನೋರಥಗಳನೆ ಪೂರೈಸುವೊ ೪

ವತ್ಸರ ಆದಿಯಲಿ ಅಕ್ಷರೇಡ್ಯನ ಪಾದ
ಕ್ಷಿಪ್ರದಿಂದಲಿ ಸೇವಿಪ ನರನ

ಶ್ರಮವ ಪರಿಹರಿಸಿ ಉದ್ಧರಿಸೊ ಜೀಯಾ
ಬಿಡುತಿಹೆನು ಬಾಯ
ಸುಮನಸರವೊಡೆಯ ಬಿಡು ನಿನ್ನ ಮಾಯ
ಕಮಲಸಂಭವ ಜನಕ ಬಿಡದೆ ಕಯ್ಯ ಪೊರೆಯುವದು ಶ್ರೇಯ
ಕಮಲಾಕ್ಷ ನಮಿಸಿ ಮುಗಿಯುವೆನು ಕಯ್ಯ
ಕಮಲ ಪತ್ರಾಕ್ಷ ಸುಜನರ ಕಲ್ಪತರುವೆ ಹೃ-
ತ್ಕಮಲದಿ ಪೊಳೆವ ಶ್ರೀ ಕಮಲನಾಭ ವಿಠ್ಠಲ ೩

## ೯೨

ಪದ್ಮನಾಭ ಮುದ್ದು ಪದ್ಮನಾಭ
ಉದ್ಧರಿಸು ನಮ್ಮ ಸಿರಿ ಪದ್ಮನಾಭ ಪ

ನಾನಾಯೋನಿಗಳಲ್ಲಿ ಜನಿಸಿ ಪದ್ಮನಾಭ
ನಾನಾಕ್ಲೇಶಗಳಿಂದ ಬಳಲಿ ಪದ್ಮನಾಭ
ನಾ ನಿನ್ನನು ಸ್ಮರಿಸದ್ಹೋದೆ ಪದ್ಮನಾಭ
ನಾನೆಂಬ ದುರ್ಮತಿಯ ಬಿಡಿಸೊ ಪದ್ಮನಾಭ ೧

ತಂದೆತಾಯಿಬಂಧು ನೀನೆ ಪದ್ಮನಾಭ ನಿನ್ನ
ನಂಬಿದ ಭಕ್ತರೊಳಿರಿಸಿ ಪದ್ಮನಾಭ
ಅಂಬುಜಾಕ್ಷ ಸಲಹಬೇಕೊ ಪದ್ಮನಾಭ ಪೀ-
ತಾಂಬರಧಾರಿಯೆ ಸಲಹೊ ಪದ್ಮನಾಭ ೨

ಪಾಪಿಯೆಂದು ನೂಕದಿರು ಪದ್ಮನಾಭ ಅ-
ನೇಕಪಾಪಗಳಿಗೆ ಪಾವಕ ಪದ್ಮನಾಭ
ಶ್ರೀಕಾಂತನೀ ಸಲಹಬೇಕೊ ಪದ್ಮನಾಭ
ಏಕಾಂತ ಭಕ್ತರ ಪೊರೆದೆ ಪದ್ಮನಾಭ ೩

ಹಿಂದೆ ನಿನ್ನ ಭಕ್ತರೆಲ್ಲ ಪದ್ಮನಾಭ ಗೋ-
ವಿಂದ ರಕ್ಷಿಸೆಂದು ಸ್ಮರಿಸೆ ಪದ್ಮನಾಭ

ಮಲುಗುವಾಗ ಮುಕುಂದನ ಸ್ಮರಿಸುತ
ಲಯ ಚಿಂತನೆಯನು ಮಾಡುತಲಿ
ಕರಮುಗಿಯುತ ಕಾಯೇನ ವಾಚಾ ಎಂ–
ದ್ಹೇಳುತ ಪ್ರಾಜ್ಞನ ಸ್ಮರಿಸುತಲಿ ೨೧

ಝಾಮಝಾಮದಿ ಶ್ರೀ ಹರಿ ಮಾಧವ
ಕೇಶವ ನಾರಾಯಣ ಎನುತ
ಆಗಲು ಬೆಳಗಿನ ಝಾವದಿ ಸೃಷ್ಟಿಯ
ಚಿಂತನೆ ಮಾಡಿ ಎಂದೆನುತ ೨೨
ಮಳಲಗೌರಿ ನೋಂತಿಹ ಸತಿಯರಿಗೆ

ಮುರಳೀಧರ ಒಲಿದಿಹನೆನ್ನುತ
ಉದಯವಾಗಲು ವಿಶ್ವನ ಸ್ಮರಿಸುತ
ವಿಧಿ ನೇಮಗಳನುಸರಿಸುತ್ತ ೨೩

ನಿತ್ಯದಿ ಈ ತೆರವಾಚರಿಸುವ ನರ
ಮುಕ್ತನು ಧರೆಯೊಳಗೆಂದೆನುತ
ಅತ್ಯುತ್ಸಾಹದಿ ಬರೆದೋದುತಲಿ– .
ದರರ್ಥವ ತಿಳಿದಾಚರಿಸುತ್ತ ೨೪

ಈ ವಿಧ ಚಿಂತನೆ ಮಾಡುವ ಮನುಜಗೆ
ದಾರಿದ್ರ್ಯವು ದೂರಾಗುವದು
ಮಾರಮಣನು ತನ್ನವರೊಡಗೂಡುತ
ವಾಸವಾಗುವನೆಂಬುವ ಬಿರುದು ೨೫
ಕರೆಕರೆಗೊಳ್ಳದೆ ಕೇಳಿರಿ ನಿತ್ಯವು

ಕನಕಗಿರಿವಾಸನ ಮಹಿಮೆ
ಕನಲಿಕೆ ಕಳೆವುದು ಕಮಲನಾಭ–
ವಿಠ್ಠಲನು ಕೊಂಡಾಡುತ ಮಹಿಮೆ ೨೬

ಮುದದಿಂದಲಿ ಆ ಮುನಿಯ ಪಾದಕೆ
ಎರಗಿ ಕೇಳಿದರು ೫

ಗತಿಯೇನಿನ್ನು ಪೇಳಿರಿ ಮುನಿಗಳೆ
ಹಿತ ಪೇಳುವರೊಬ್ಬರನು ಕಾಣೆ
ಸತಿಯರು ಪೇಳಲು ಪತಿ ಬಂದೆರಗಿದ
ಯತಿಗಳ ಪಾದದಲಿ ೬

ಬಂದು ಮುನಿಯ ಪಾದವ ಪಿಡಿದು
ವಂದಿಸಿ ನಮಿಸುತ ಭಯ ಭಕ್ತಿಯಲಿ
ಬಂದ ಭಯಕೆ ಕಾರಣಗಳನು
ಚಂದದಿ ಕೇಳಿದರು ೭

ಚಿತ್ರರಥ ನೀ ಸತ್ತೆಯೋ ಎನುತ
ವ್ಯರ್ಥವಾಯಿತು ನಿನ್ನ ಗಾನವು
ಮತ್ತೇನಿದಕೆ ಯೋಚಿಸುತಿರುವಿ
ಸತ್ಯದಿ ನುಡಿಯೆಂದ ೮

ನೀವಲ್ಲದೆ ರಕ್ಷಕರಿನ್ಯಾರು
ಸಾವಧಾನದಿ ಪೇಳಿರಿ ಗುರುಗಳೆ
ಯಾವ ಪರಿಯಲ್ಲಾದರು ರಕ್ಷಿಸ
ಬೇಕೆಂದೆನುತಿರಲು ೯

ದಡದಡನೆ ಕಣ್ಣೀರನು ಸುರಿಸುತ
ಗಡಗಡ ನಡಗುತ ಭಯಪಡುತಿರಲು
ಬಿಡು ಚಿಂತೆಗಳ ರಕ್ಷಿಪ ಶ್ರೀ ಹರಿ ಎ-
ನ್ನೊಡನೆ ಬಾರೆನಲು ೧೦

ಸತಿಯರನೆಲ್ಲಾ ಕಳುಹುತ ಪುರಕೆ
ಅತಿಭಕ್ತಿಲಿ ನಿಂದಿರಲದ ನೋಡಿ

ನಿತ್ಯ ಕರ್ಮಮುಗಿಸುವ ಬೇಗದಿ ಶ್ರೀ–
ಹರಿಪೂಜೆಗೆ ಅಣಿಮಾಡುತಲಿ
ಪುಷ್ಪಗಳನು ಗಂಧಾಕ್ಷತೆ ಶ್ರೀ ತುಳಸಿಯ
ತಂದಿಡುವೆನು ಮೋದದಲಿ ೧೫

ಪಂಚಭಕ್ಷ ಪಾಯಸಗಳ ಮಾಡುತ
ಪಂಚಾತ್ಮಕ ನ ಸ್ಮರಿಸುತಲಿ
ಮಿಂಚಿನಂತೆ ಹೊಳೆಯುವ ತಬಕಿಲಿ
ತಾಂಬೂಲವ ನಿರಿಸುತ ಬೇಗದಲಿ ೧೬

ಬ್ರಹ್ಮನು ಈ ವಿಧ ಪೂಜೆಯ ಪ್ರತಿದಿನ
ಬ್ರಹ್ಮನ ಪಿತಗರ್ಪಿಸುತಲಿರಲು
ಸುಮ್ಮಾನದಿ ಮಹಲಕುಮಿಯು ಇದ–
ನೊಯ್ಯುತ ಸುರಮುನಿ ವಂದ್ಯನಿಗೆ ತಾನರ್ಪಿಸಲು ೧೭

ಪರಮಾತ್ಮನು ಈ ವಿಧ ಸೇವೆಯ ಕೈ–
ಗೊಳುತಲಿ ಸಂತಸ ಪಡಲಿನ್ನು
ಅರಿತವರೆಲ್ಲರು ನಿರುತದಿ ಹರಿ ಧ್ಯಾ–
ನವ ಮಾಡುತಲಿರೆ ತಾವಿನ್ನು ೧೮

ದೇವಪೂಜೆ ವೈಶ್ವದೇವವು ನಿತ್ಯದಿ
ಗೋಬ್ರಾಹ್ಮಣನರ್ಚಿಸಿ ಇನ್ನು
ಸಾಯಂ ಸಮಯದಿ ಸಾಧುಗಳೊಡನೆ
ದೇವರ ಕಥೆ ಕೇಳುತಲಿನ್ನೂ ೧೯

ಝಾಮಝಾಮದಿ ಜಯಶಬ್ದಗಳಿಂ
ಜಯಾಪತಿಯನು ಪೊಗಳುತಲಿ
ಆರತಿ ಜೋಗುಳ ಹಾಡುತ ಮುದದಲಿ
ಮಧ್ವೇಶಾರ್ಪಣ ಪೇಳುತಲಿ ೨೦

ಬಂದು ಅವರ ಸಲಹಿದೆಯೊ ಪದ್ಮನಾಭ ಮು–
ಕುಂದ ನಿನ್ನ ಮೊರೆಯ ಹೊಕ್ಕೆ ಪದ್ಮನಾಭ ೪

ಮಡುವಿನಲ್ಲಿ ಗಜವ ಕಾಯ್ದೆ ಪದ್ಮನಾಭ
ದೃಢ ಪ್ರಹ್ಲಾದಗೆ ಅಭಯವಿತ್ತೆ ಪದ್ಮನಾಭ
ಮಡದಿ ನುಡಿಯ ಕೇಳಿ ತ್ವರದಿ ಪದ್ಮನಾಭ
ಅಡವಿಯಲ್ಲಿ ಅಭಿಮಾನವ ಕಾಯ್ದೆ ಪದ್ಮನಾಭ ೫

ವಂದಿಪೆ ಮುಚುಕುಂದ ವರದ ಪದ್ಮನಾಭ
ವಂದಿಪೆ ಗಜರಾಜ ವರದ ಪದ್ಮನಾಭ
ವಂದಿಪೆ ಉರಗಾದ್ರಿವಾಸ ಪದ್ಮನಾಭ
ಇಂದಿರೇಶ ಸ್ತುತಿಪದೇವ ಪದ್ಮನಾಭ ೬

ಕರುಣಿಗಳರಸನೆ ಕಾಯೋ ಪದ್ಮನಾಭ ಶ್ರಮ
ಪರಿಹರಿಸು ನಮಿಪೆ ದೇವ ಪದ್ಮನಾಭ
ಕಮಲ ಸಂಭವನನ್ನು ಪಡೆದ ಪದ್ಮನಾಭ
ಕಮಲನಾಭ ವಿಠ್ಠಲ ಕಾಯೋ ಪದ್ಮನಾಭ ೭

## ೯೩

ಪಾಲಿಸು ಪರಮಾತ್ಮನೆ ಪಾವನ ಗುಣ–
ಶೀಲ ಸದ್ಗುಣಧಾಮನೆ ಪ

ಶ್ರೀಲಕುಮಿಯ ಪ್ರಿಯ ಶ್ರೀಶಸರ್ವೋತ್ತಮ
ವಾಸವವಂದಿತ ವಾಸುದೇವನೆ ಹರಿ ಅ.ಪ

ಕೇಶವ ನಾರಾಯಣ ಮಾಧವ
ಗೋವಿಂದ ವಿಷ್ಣುವೆ ನಮಿಪೆ
ಮಧುಸೂದನ ತ್ರಿವಿಕ್ರಮ ವಾಮನ
ಶ್ರೀಧರ ಹೃಷಿಕೇಶ ಪದ್ಮನಾಭನೆ ಪೊರೆ

ನಾನು ನನ್ನದು ಎಂಬ ಅಭಿಮಾನ
ಅದು ಪೋಗುವ ತನಕ
ಜ್ಞಾನ ಮಾರ್ಗಕೆ ಇಲ್ಲ ಸಾಧನ-
ವೆಂದರಿಯುತ ಮನದಲಿ
ಧ್ಯಾನಿಸುತ್ತಿರು ಶ್ರೀನಿಧಿ ಗುಣಗಳನು
ಹೀಗಿರುವುದೆ ಪ್ರಧಾನ
ಧ್ಯಾನ ಗಾನ ಮೌನಾದಿ ವ್ರತಗಳನು
ಶ್ರೀನಿಧಿಗರ್ಪಿಸಿ ಮನ ಹರುಷಿಸದಲೆ ೨

ತಂದೆ ಶ್ರೀ ವೆಂಕಟೇಶ ವಿಠ್ಠಲನು
ಹರಿಭಕುತರ ಪೊರೆಯನು
ಛಂದದಿಂದಲಿ ಕೇಳಿ ಪೋಷಿಪನು
ಮುಕುಂದನಲಿ ಭಕುತಿ
ಎಂದೆಂದಿಗೂ ತಪ್ಪದೆ ಉದ್ಧರಿಸುವನು
ನಿಜವೆಂದರಿ ಇದನು
ಮುಂದೆ ಕಮಲನಾಭ ವಿಠ್ಠಲ ಭಕುತರ
ಸಂದಣಿ ಪೊರೆದು ಸಂತೈಸುತಲಿರೆ ವ್ಯಥ ೩

## ೧೧೨

ಹರಿನಾರಾಯಣ ಎನ್ನಿರೊ ಸಜ್ಜನರು ಶ್ರೀ-
ಹರಿಕೃಷ್ಣ ಶರಣೆನ್ನಿರೊ ಪ

ಪರಿಪರಿ ದುರಿತಗಳಳಿದು ಪೋಗುವದೆಂದು
ನಿರುತವು ವೇದಪುರಾಣ ಪೇಳುವದು ಶ್ರೀ ಅ.ಪ

ಹರಿ ಎಂದ ಮಾತ್ರದಲಿ ಹತ್ತಿದ ಪಾಪ
ಪರಿಹಾರಾಗುವುದು ಕೇಳಿ
ಹರಿದಾಸರೊಡನೆ ಕೂಡಿ ಸತ್ಸಂಗದಿ
ಹರಿ ಕೀರ್ತನೆಯನು ಪಾಡಿ
ಹರಿಯ ಮಹಿಮೆಯ ಸ್ಮರಿಸುತಲಿ ಹಗ

ಲಿರುಳು ಚಿಂತನೆ ಮಾಳ್ಪ ಸುಜನರ
ಪರಮ ಕರುಣಾ ಸಾಗರನು ತನ್ನ–
ವರೊಳಿರಿಸುತ ಪೊರೆವ ಸಂತತ ೧

ಕರಿರಾಜ ಕಷ್ಟದಲಿ ಮೊರೆ ಇಡೆ ಕೇಳಿ
ತ್ವರದಿ ಓಡಿ ಬರಲಿಲ್ಲವೆ
ಹರಿ ನೀ ರಕ್ಷಕನೆನ್ನಲು ಪಾಂಚಾಲಿಗ–
ಕ್ಷಯ ವಸ್ತ್ರವೆನಲಿಲ್ಲವೆ
ತರುಳರೀರ್ವರ ಪೊರೆದು ರಕ್ಷಿಸಿ
ಕರೆಯೆ ನಾರಗನೆಂದ ದ್ವಿಜನಿಗೆ
ನರಕ ಬಾಧೆಯ ಬಿಡಿಸಿ ಸಲಹಿದ
ಹರಿಗೆ ಸಮರು ಅಧಿಕರಿಲ್ಲ ಶ್ರೀ ೨

ಬಡಬ್ರಾಹ್ಮಣನ ಸತಿಯು ನಯಭಯದಿಂದ
ಒಡೆಯರ್‍ಯಾರಿಲ್ಲೆನಲೂ
ಪೊಡವೀಶ ಶ್ರೀಪತಿಯು ಪರಮಾಪ್ತನೆನಲು
ಹಿಡಿಯಗ್ರಾಸವ ಕೊಡಲು
ನಡೆದು ದ್ವಾರಕ ದೊಡೆಯನಿಗೆ ಒ–
ಪ್ಪಿಡಿಯ ಗ್ರಾಸವ ಕೊಡಲು ಭುಂಜಿಸಿ
ಕೆಡದ ಸೌಭಾಗ್ಯವನೆ ನೀಡಿದ
ಬಿಡದೆ ಕಮಲಾನಾಭ ವಿಠ್ಠಲನ ೩

## ಸಂಪ್ರದಾಯದ ಹಾಡುಗಳು

### ೧೧೩

ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ಜೋ
ವಾಸುದೇವ ನಾರಾಯಣ ಜೋ ಜೋ ಪ

ಕೃತಿಶಾಂತಿ ಜಯ ಮಾಯ ಶ್ರೀಲಕ್ಷ್ಮಿಪತಿ ಜೋ
ಪತಿತ ಪಾವನ ಪುರುಷೋತ್ತಮ ಜೋ ಜೋ ಅ.ಪ

ಮುರಳಿಯನೂದುತ ಮೆರೆಯುವ ಕೃಷ್ಣನ
ಸ್ಮರಣೆಯ ಅನುದಿನ ಮಾಡುತಲಿ
ಸರಸಿಜನಾಭನ ಸ್ಮರಿಸುತ ಮನದಲಿ
ಸ್ನಾನಕೆ ತೆರಳುತ ಶೀಘ್ರದಲಿ ೯

ನದಿಯ ಸ್ನಾನಕೆ ಪೋಗುವ ಸಮಯದಿ
ನಾರದವಂದ್ಯನ ಸ್ಮರಿಸುತಲಿ
ಭಾಗೀರಥಿಯಲಿ ಸ್ನಾನವು ಮಾಡುತ
ಬಾಗುತ ಸಿರವನು ಬೇಗದಲಿ ೧೦

ಫಣಿರಾಜನ ಶಯನದಿ ಮಲಗಿಹ ಶ್ರೀ–
ಪರಮಾತ್ಮನ ನೋಡುತ ಬೇಗ
ಪಾದಗಳ ಸೇವಿಪ ಶ್ರೀ ಭೂದೇವಿಯ–
ರೇನುಧನ್ಯರೆಂದೆನುತಾಗ ೧೧

ಪೊಕ್ಕಳ ಮಧ್ಯದಿ ಪೊರಟಿಹ ನಾಳದ
ತುದಿಯಲಿ ರಂಜಿಪ ಕಮಲದಲಿ
ಉದ್ಭವಿಸಿದ ನಾಲ್ಮೊಗನನು ನೋಡುತ
ಬಗೆ ಬಗೆ ಪ್ರಾರ್ಥಿಸುತಲಿ ಇನ್ನು ೧೨

ನೆರೆದಿಹ ಸುರ ಪರಿವಾರವೆಲ್ಲ ಶ್ರೀ–
ಹರಿಯನು ವಾಲೈಸುತಲಿನ್ನೂ
ಪರಮವೈಭವದಿ ಮೆರೆಯುವ ದೇವನ
ಸ್ಮರಿಸುವೆ ಜಲಮಧ್ಯದೊಳಿನ್ನು ೧೩

ದೇವರ ರಥವನು ತೊಳೆಯುವೆನೆಂಬ–
ನುಸಂಧಾನದಿ ಸ್ನಾನವು ಮಾಡಿ
ದೇವರ ರಥ ಶೃಂಗರಿಸುವೆನೆನ್ನುತ
ಶ್ರೀಮುದ್ರೆಗಳ್ಹಚ್ಚುತ ಪಾಡಿ ೧೪

ದಾರಿ ಕಾಣೆ ದಾಮೋದರ ಸಂ_
ಕರ್ಷಣ ವಾಸುದೇವ ಪ್ರದ್ಯುಮ್ನನನಿ-
ರುದ್ಧ ಪುರುಷೋತ್ತಮ ಅಧೋಕ್ಷಜ
ನಾರಾಸಿಂಹ ಅಚ್ಚುತ ಜನಾರ್ದನ ಉ-
ಪೇಂದ್ರ ಹರಿ ಶ್ರೀ ಕೃಷ್ಣ ಶೌರಿ ೧

ವಾರಿ ವಿಹಾರದಲಿ ಬೆನ್ನಿಲಿ ಗಿರಿ
ಭಾರವನ್ನೆ ತಾಳಿ
ಕೋರೆ ತೋರುತ ಕರುಳ್ಹಾರವ ಮಾಡಿದ
ಮೂರಡಿ ಭೂಮಿಯ ಬೇಡಿ ಭೂಪಾಲನ
ಕಾಡಿ ಕೆಡಹುತ ಕೂಡಿ ಕಪಿಗಳ
ಬೇಡಿ ಪಾಲ್ಮೊಸರ್ಬೆಣ್ಣೆ ಬುದ್ಧನೀ-
ನಾಗಿ ಖಡ್ಗವಧರಿಸಿ ಕುದುರೆಯ-
ನೇರಿ ಮೆರೆಯುವ ಶ್ರೀ ರಮಾಪತೆ ೨

ಶಾಂತೀಶ ಅನಿರುದ್ಧನೆ ಶರಣೆಂಬೆ ನಿನ್ನ
ಕೃತಿಪತಿ ಪ್ರದ್ಯುಮ್ನನೆ ಜಗದೀಶ ಜಯಾಪತಿ
ಜಯ ಸಂಕರ್ಷಣ ದೇವ
ನಮಿಪೆ ಮಾಯಾಪತಿ ವಾಸುದೇವನೆ ನಿನ್ನ
ಚರಣ ಪಂಕಜ ತೋರು ಲಕ್ಷ್ಮೀ-
ರಮಣ ನಾರಾಯಣ ನಮೋ
ಗರಡು ಗಮನನೆ ಕಮಲನಾಭ ವಿ-
ಠ್ಠಲನೆ ಶ್ರೀಹರಿ ಪರಮ ಕರುಣಿಯೆ ೩

## ೯೪

ಪಾಲಿಸು ಶ್ರೀಶನೆ ಪರಮ ಪವಿತ್ರನೆ
ಪಾವನ್ನ ಚರಿತನೆ ಪಾಲಿಸೆನ್ನ ಪ

ಮುಖವನು ತೊಳೆಯುತ ಮುರಹರಿ ಧ್ಯಾನದಿ
ಶ್ರೀತುಳಸಿಯ ನಮಿಸುತಲಿನ್ನೂ
ಮೀಸಲ ನೀರನು ಎರೆಯುತ ಬೇಗದಿ
ಮೃತ್ತಿಕಿ ಫಣಿಗಿಡುತಲಿ ಇನ್ನು ೩

ಮೂರು ಪ್ರದಕ್ಷಿಣಿ ಮಾಡುತ ಬೇಗದಿ
ಮುದದಿ ನಮಸ್ಕರಿಸುತಲಿನ್ನೂ
ದೇವರ ಮನೆಕಡೆ ಪೋಗುತ ನಿಂದಿಹ
ಜಯವಿಜಯರಿಗೊಂದಿಸಿ ಮುನ್ನು ೪

ದೇವರ ದರ್ಶನಕಾಜ್ಞೆಯ ಕೇಳುತ
ದೇವರ ಗೃಹದೊಳು ಪೋಗುತಲಿ
ಮಾಯಾ ಪತಿಯನು ಮನದೊಳು ಧ್ಯಾನಿಸಿ
ವಂದನೆ ಮಾಡುತ ಬೇಗದಲಿ ೫

ದೇವರ ಮನೆಯನು ಸಾರಿಸಿ ಶಂಖಚಕ್ರವುಗದೆ
ಪದುಮನ್ನಾಕುತಲಿ
ಗಜವರದನ ಕೊಂಡಾಡುತ ಮುದದಿ
ಗಜೇಂದ್ರ ಮೋಕ್ಷನ ಸ್ಮರಿಸುತಲಿ ೬

ಗೋವೃಂದದ ಕಡೆ ಪೋಗುತ ಶ್ರೀ–
ಗೋವಿಂದನ ಸ್ಮರಿಸುತ ನಿತ್ಯದಲಿ
ಗೋಪೀ ಬಾಲನ ಗೋಕುಲವಾಸನ
ಗೋವ್ಗಳ ಮಧ್ಯದಿ ಸ್ಮರಿಸುತಲಿ ೭

ಬಾಲಕೃಷ್ಣನ ಲೀಲೆಯ ಪೊಗಳುತ
ಬಾಲಲೀಲೆಗಳ ಕೇಳುತಲಿ
ಪುರಾಣವ ಪೇಳುವ ದ್ವಿಜರಿಗೆ
ವೃದ್ಧರಿಗೆರಗುತ ಪ್ರತಿನಿತ್ಯದಲಿ ೮

ಕಾಲಕಾಲಕೆ ನಿನ್ನ ಮಹಿಮೆಯ
ತೋರಿಸಲಹುದು ಸರ್ವವ್ಯಾಪಕ
ಮಾಯಾದೇವಿಯರಮಣ ಶ್ರೀಪತೆ
ಕಾಯೊ ಶ್ರೀಹರಿವಾಸುದೇವನೆ ಅ.ಪ

ವಾಸುದೇವನೆ ನಿನ್ನ ಸೋಸಿಲಿ ಭಜಿಪರ
ಕ್ಲೇಶಗಳ್ಹರಿಸಿ ಸಂತೋಷವಿತ್ತು
ದೋಷದೂರನ ನಾಮ
ಆಸೆಯಿಂದ ಭಜಿಪರಸಂಗವನೂ
ನೀಡೆನುತ ಬಿನ್ನೈಸುವೆನೂ
ಎನ್ನೊಡೆಯ ನೀನೆಂದೆನುತ
ಅಡಿಗಳಿಗೆರಗುವೆನೂ
ಧೃಡಭಕುತಿ ನಿನ್ನೊಳಗಿರಿಸಿ
ರಕ್ಷಿಪುದೆಂದು ಬೇಡುವೆನೂ
ನುಡಿನುಡಿಗೆ ನಿನ್ನಯ ನುಡಿಗಳನು
ನುಡಿವಂಥ ಭಕ್ತರ
ಅಡಿಗಳಾಶ್ರಯ ಕೊಟ್ಟು ಕಾಯ್ವುದು
ಬಡವನೆನ್ನಲಿ ಬೇಡ ಎನ್ನನು
ಬಡವರಾಧಾರಿ ಶ್ರೀಹರಿ ೧

ಶಂಖ ಚಕ್ರವು ಪದ್ಮಗದೆಯು ಹೊಳೆಹೊಳೆಯುತ್ತ
ಬಿಂಕದಿಂದಲಿ ನಿಂತು ನೋಡುತಲಿ
ಮಂಕುಮತಿಗಳನ್ನು ಶಂಕೆಯೊಳಗೆ ತಳ್ಳಿನೋಡುತ್ತ
ನಿನ್ನಯ ಸದ್ಭಕ್ತರ ಶಂಕೆಗಳೆಲ್ಲವನು
ಕ್ಷಿಪ್ರದಿ ಕಳೆಯುತ್ತ ಶ್ರೀಹರಿ ನಿನ್ನ ಪಾದ
ಪಂಕಜಗಳೆ ಚಿಂತಿಸುವರಿಗೆ ಹರುಷ ನೀಡುತ್ತ
ಮಧು ವೈರಿ ನಿನ್ನಯ ವಿಧವಿಧದ ಲೀಲೆಗಳ ತೋರುತ್ತ
ಉದಯ ಭಾಸ್ಕರನಂತೆ ಪೊಳೆಯುತ್ತ
ಮುದದಿ ಸಿರದಿ ಕಿರೀಟ ಹೊಳೆಯುತ್ತ
ಸದಮಲಾತ್ಮಕ ಸತ್ಯಮೂರುತಿ ೨

ಶುಭವಸ್ತ್ರವನುಟ್ಟು ಸದ್ದಿಲ್ಲದಲೆ ಬಂದು
ಹೃದ್ಗೋಚರನಾಗು ಪದ್ಮನಾಭ
ಉದ್ಧರಿಸೆನ್ನನು ಉದ್ಧವಸಖನೆಂದು ನಂಬಿರುವೆ
ಮನ್ಮನದ ಭಯಗಳವದ್ದು ಬಿಸುಡುತ ಸಲಹೊ
ನರಹರಿಯೆ ಮಮಸ್ವಾಮಿ ನಿನ್ನಯ ಪದ್ಮ-
ಪಾದಕೆ ನಮಿಪೆ ಶ್ರೀಹರಿಯೆ
ಮೋಹಕ ಬಂಧವ ಬಿಡಿಸಿರಕ್ಷಿಸುತೆನ್ನ ಸಲಹು
ಮಾಯಾಪತಿಯೆ ಬಹು ವಿಧದಿ ಪ್ರಾರ್ಥಿಪೆ
ತೋಯಜಾಕ್ಷನೆ ತೋರು ನಿನ್ನಯ
ಚಾರು ಚರಣಕೆ ಬಾಗಿ ನಮಿಸುವೆ
ಕಾಯ್ವುದೆನ್ನನು ಕಮಲನಾಭವಿಠ್ಠಲನೆ
ಶ್ರೀಹರಿ ವಾಸುದೇವನೆ ೩

## ೯೫

ಮನ್ನಿಸೈ ಹರಿ ಪನ್ನಗೇಂದ್ರಶಯನ ಪ

ಘನ್ನವಾದ ಪಾಪವನ್ನು ಮಾಡಿ ಜಗದಿ
ನಿನ್ನ ನಾಮ ಮರದೆ ಸನ್ನುತಾಂಗ ಸಲಹೊ ಅ.ಪ

ಜ್ಞಾನ ಶೂನ್ಯವಾಗಿ ನಾನಾ ವಿಷಯಗಳಲಿ
ನಾನು ನನ್ನದೆಂಬ ಹೀನ ಮಮತೆಯಿಂದ
ದಾನವಾರಿ ನಿನ್ನ ಧ್ಯಾನಿಸದಲೆ ಕಾಲ
ಸಾನುರಾಗದಿಂದ ಶ್ವಾನನಂತೆ ಕಳೆದೆ ೧

ರೋಗಹರನೆ ಭವದ ರೋಗವೈದ್ಯನೆಂದು
ಬಾಗಿ ನಿನ್ನನುತಿಪೆ ನಾಗಾರಿವಾಹನ
ಯೋಗಿವಂದ್ಯನೆ ಚನ್ನಾಗಿ ನಿನ್ನ ಸ್ತುತಿಪ
ಭಾಗವತರ ಸಂಗ ದೇವ ಪಾಲಿಸಯ್ಯ ೨

ರಕ್ಷಿಸೆಮ್ಮ ಬಿಡದೆ ಲಕ್ಷ್ಮಿರಮಣದೇವ
ಕುಕ್ಷಿಯೊಳಗೆ ಜಗವ ರಕ್ಷಿಸುತ್ತ ಪೊರೆವ

ನಂದಕಂದನ ಲೀಲೆಯಿಂದ ಹಗಲಿರುಳು ಮು–
ಕುಂದನ ಕುಣಿಸುವರೊ ದಣಿಯುವರೊ ೨
ಆರು ಮಂದಿಗಳ ಗೆದ್ದು ಹೃದಯದಲ್ಲಿ ಶ್ರೀ–
ಮಾಧವನನು ಕಾಂಬರ
ಶ್ರೀಧರನಂಘ್ರಿಗಳಾದರದಿಂ ಭಜಿಸಲು
ಸಾಧು ಗುರುಗಳು ಇವರು ಸುಂದರರು ೩

ಸುರಮುನಿವರ ಪ್ರಿಯನ ಭಕ್ತರಿಗೆಲ್ಲ
ವರಗಳ ಕೊಡುತಿಹನ
ಪರಮಪಾವನ ಮೂರುತಿಯನೆ ಕೊಂಡಾಡುತ
ದುರಿತಗಳಳಿಯುವರ ಪಾವನರ ೪

ಕರೆದು ಭಕ್ತರ ಸಲಹುವ ಕರುಣದೊಳು ಮೂ–
ರ್ಜಗದೊಡೆಯನ ಪಾಡುವ
ಪರಮ ಗುರುಗಳ ಮುಖ್ಯ ಕಾರಣವು ಪಡೆದವರು ಶ್ರೀ–
ಕಮಲನಾಭ ವಿಠ್ಠಲನೆನ್ನುವರು ೫

## ೧೦೯

ಬೆಳಗಾಗಲು ಅರಘಳಿಗೆಯು ಇರುತಿರೆ
ಸ್ಮರಿಸುವೆ ವಿಶ್ವಮೂರುತಿಯನ್ನು
ಬೆಳಗಾಗಲು ಹರಿಧ್ಯಾನವ ಮಾಡುತ
ಬಹಿರ ಭೂಮಿಗ್ಹೋಗುತ ಮುನ್ನು ೧

ಕಲಿ ಮೊದಲಾಗಿಹ ದೈತ್ಯರನೆಲ್ಲಾ ವಿ–
ಸರ್ಜನೆ ಮಾಡುತ ಮತ್ತಿನ್ನೂ
ದಂತ ಧಾವನೆಯ ಮಾಡುತ ಶ್ರೀ ಮಾ–
ಧವನನು ಸ್ಮರಿಸುವೆ ನಾನಿನ್ನೂ ೨

ಕಂಬು ಚಕ್ರಧಾರಿ ಶ್ರೀ ಶೌರಿ
ನಂಬುವರಾಧಾರಿ
ಶಂಬರಾರಿಪಿತ ನಂಬಿದೆ ನಿನ ಪಾದ
ಶಂಭುವಂದಿತ ಪಾಲಿಸಿಂದು ಸ್ಮರಿಸಲು ಮನ ೭

ತೊಳೆದು ತೊಳೆದು ವಿಷಯ ವಾಸನೆಯನ್ನು
ಹಲವು ವಿಧದಿ ತೊಳೆದು
ಕಲುಷದೂರನ ನಾಮ ಸ್ಮರಣೆಯ ಮಾಡಲು
ಮರುತ ಮತದ ಸಂಗ ದೊರೆವುದು ತವಕದಿ ೮

ಕಳವಳಿಸದೆ ಮನವು ನಿಶ್ಚಲದಲಿ
ಥಳ ಥಳ ಥಳ ಹೊಳೆಯೆ
ಕಮಲನಾಭ ವಿಠ್ಠಲವಲಿದು ಪಾಲಿಸುವನು
ಹಲವು ಬಗೆಯಲಿ ಹಂಬಲಿಸದೆ ಮನ ೯

## ೧೦೮

ದಾಸರ ದೂಷಿಪರೊ ಕುಜನರು ಹರಿ–
ದಾಸರ ನಿಂದಿಪರೊ ಪ

ಏಸೇಸು ಜನುಮದ ದೋಷರಾಶಿಗಳೆಲ್ಲ
ನಾಶವಗೈವ ಶ್ರೀಕೇಶವನನುಗರ ಅ.ಪ

ಮಂದಮತಿಗಳೆಲ್ಲರೂ ಸಜ್ಜನರ
ನಿಂದನೆಯೊಳಗಿಹರೊ
ಮುಂದಿನ ಬವಣೆಗಳೊಂದೆಣಿಸದಲೆ ಮು–
ಕುಂದನ ಭಕುತರ ಸಂದಣಿ ಸೇವಿಪ ೧

ಇಂದಿರೇಶನ ಗುಣವ ಪಾಡುತಲಿ ಆ–
ನಂದದೊಳೋಲ್ಯಾಡುವ

ಸೂಕ್ಷ್ಮ ಸ್ಥೂಲದೊಳು ಪ್ರತ್ಯಕ್ಷನಾದ ಹರಿ ಉ–
ಪೇಕ್ಷಿಸದಲೆ ಕಾಯೋ ಪಕ್ಷಿವಾಹನ ದೇವ ೩

ಕಡಲೊಡೆಯನೆ ದೇವ ಮೃಡನ ಸಖವೆ ಕಾಯೊ
ಅಡಿಗಡಿಗೆ ಸ್ತುತಿಸಿ ಬಿಡದೆ ಮುಗಿವೆ ಕಯ್ಯ
ಎಡಬಲದಲಿ ಶ್ರೀ ಭೂಮಡದೇರಿಂದ ಮೆರೆವ
ಉಡುಪ ಮುಖನೆ ಕಾಯೋ ಕಡಲೊಡೆಯನೆ ರಂಗ ೪

ಕಮಲಪತ್ರದಳಾಕ್ಷ ಕಮಲಜೋದ್ಭವೆ ಪ್ರಿಯ
ಕಮಲಸಂಭವ ಜನಕ ಕಮನೀಯ ಸ್ವರೂಪ
ಕಮಲನೇತ್ರೆರ ರಸಕಮಲಪುಷ್ಪಮಾಲಾ ಹೃ–
ತ್ಕಮಲದೋಳು ಶೋಭಿಪ ಕಮಲನಾಭ ವಿಠ್ಠಲ ೫

## ೯೬

ಯಾಕೆ ಕರುಣ ಬಾರದ್ದರಿಯೆ
ಲೋಕನಾಯಕ ನಿನಗೆ ಸರಿಯೆ ಪ

ವ್ಯಾಕುಲದಲಿ ಮುಳುಗಿ ಬಹಳ
ಶೋಕಪಡುವ ಜನರ ಕಂಡು ಅ.ಪ

ತಂದೆ ತಾಯಿ ಬಂಧು ಬಳಗ
ಇಂದು ಮುಂದು ಗತಿ ನೀನೆಂದು
ಪೊಂದಿ ನಿನ್ನ ಭಜಿಸದಿರುವ
ಮಂದ ಮತಿಗಳನ್ನೆ ಕಂಡು ೧

ಕಾಮ ಕ್ರೋಧ ಲೋಭ ಮೋಹ
ಮದ ಮತ್ಸರದಿ ಮುಳುಗಿ ಮುಳುಗಿ
ಕಾಮಜನಕ ನಿನ್ನ ಮರೆತ
ತಾಮಸ ಜನರುಗಳ ಕಂಡು ೨

ಜ್ಞಾನಿಗಳನೆ ಕಂಡು ಪರಮ
ಸಾನುರಾಗದಿಂದ ಪೊರೆವೆ
ಜ್ಞಾನ ಶೂನ್ಯರಾದ ಪರಮ ಅ-
ಜ್ಞಾನಿ ಜನರುಗಳನೆ ಕಂಡು ೩

ಪರಮಪುರಷ ನಿನ್ನ ಮಹಿಮೆ
ನಿರುತ ಧ್ಯಾನಿಸುವವರ ಸಂಗ
ಕರುಣದಿಂದ ಪಾಲಿಸಯ್ಯ
ಪರಮ ಕರುಣಾನಿಧಿಯೆ ದೇವ ೪

ನೊಂದೆ ಭವದ ಬಂಧನದೊಳು
ತಂದೆ ಕಮಲನಾಭ ವಿಠ್ಠಲ
ಬಂಧನಗಳ ಬಿಡಿಸಿ ಸಲಹೊ
ಮುಂದೆ ಶ್ರಮವ ಹರಿಸೊ ಬೇಗ ೫

## ೯೭

ಯಾಕೆ ನಿರ್ದಯನಾದೆ ಲೋಕೇಶ ಪ್ರಭುವೆ
ಸಾಕಲಾರದೆ ಎನ್ನ ನೂಕಿ ಭವದೊಳಗೆ ಪ

ನಿನ್ನ ನಾಮಸ್ಮರಣೆ ಮಾಡದಲೆ ಹಗಲಿರುಳು
ಅನ್ಯ ವಿಷಯಗಳಿಂದ ನೊಂದು ಬಳಲಿದೆನೊ
ನಿನ್ನ ಧ್ಯಾನವ ಮಾಳ್ಪಚ್ಚಿನ್ನ ಭಕ್ತರೊಳಿರಿಸಿ
ಚನ್ನಾಗಿ ಸಲಹೊ ಪ್ರಸನ್ನ ಮಾಧವನೆ ೧

ಘನ್ನ ಮಹಿಮನೆ ಆಪನ್ನ ಜನರನು ಪೊರೆದೆ
ಸನ್ನುತಾಂಗನೆ ದೇವ ಸರ್ವವ್ಯಾಪಕನೆ
ಪನ್ನ ಗಾರಿವಾಹನ ಪ್ರಸನ್ನ ಶ್ರೀಹರಿ ಶೌರಿ
ಎನ್ನ ಕಡೆಹಾಯಿಸಯ್ಯ ಜೀಯ ೨

ಕಾಮಕ್ರೋಧದಿಂದ ಜನಿಸಿದ
ಲೋಭಮೋಹ ಲೋಭದಿಂದ
ಮದಮತ್ಸರ ಷಡ್ವಿಧ ತಾಪಗಳಿಂದ
ಹದಗೆಟ್ಟಿರೆ ಮನ ಮುದದಿ ಹರಿಧ್ಯಾನದಿ ೧

ದುರ್ಜನ ಸಂಗದೊಳು ಸೇರುತ ಮನ
ವರ್ಜಿಸಿ ಹರಿ ಚರಿತ
ಅರ್ಜುನ ಸಖ ಸರ್ವೇಶನ ನಾಮವು
ಲಜ್ಜೆಯಿಲ್ಲದೆ ಸ್ಮರಿಸುತ ನಲಿಯಲು ಮನ ೨

ಜನನ ಮರಣ ಕ್ಲೇಶದಿ ದುಃಖದಿ ಮನ
ಮರಳಿ ಮರಳಿ ಪಾಪದಿ ಎಣಿಕೆ ಇಲ್ಲದ
ದೋಷದೊಳಗೆ ಮುಸುಕಿದ ಮನ
ನಳಿನನಾಭನ ಪಾದಸ್ಮರಣೆ ಮಾಡಲು ನಿತ್ಯ ೩

ಇಂದಿರೇಶನ ಧ್ಯಾನವ ಮಾಡಲು ಮನ
ಪೊಂದಿದ ಮಲಿನವನು ಛಂದದಿ ಹರಿದಾಸರ
ವೃಂದವ ಕೂಡಿ ಮಂದೋರದ್ಧರ ಗೋ_
ವಿಂದನೆನ್ನಲು ಮನ ೪

ನಿಚ್ಚ ಭಕುತಿಯಿಂದ ಶ್ರೀ ಹರಿಪಾದ
ಅರ್ಜಿಸಿಮುದದಿಂದ
ರುಕ್ಮಿಣಿಯರಸನ ಸತ್ಯಸಂಕಲ್ಪನ
ಮೆಚ್ಚಿಸಿ ಮುಕುತಿಯ ನೈದಲು ಈಮನ ೫

ಮಧ್ವಮತದಿ ಜನಿಸಿ ನಿರಂತರ
ಮಧ್ವರಾಯರ ಭಜಿಸಿ
ಸದ್ವೈಷ್ಣವರ ಸಂಗದೊಳಾಡುತ
ಲಜ್ಜೆತೊರೆದು ಕಾಲಗೆಜ್ಜೆ ಕಟ್ಟಲುಮನ ೬

ಅಕ್ಷಯ ಫಲಪ್ರದ ಪಕ್ಷಿವಾಹನ ಕೃಷ್ಣ
ಕುಕ್ಷಿಯೊಳು ಜಗವನಿಂಬಿಟ್ಟ ಶ್ರೀ ಹರಿಯೆ
ರಕ್ಷ ಶಿಕ್ಷಕ ಜಗದ್ರಕ್ಷ ಪಾಂಡವ ಪಕ್ಷ
ಈಕ್ಷಿಸಿ ಎನ್ನನುದ್ಧರಿಸಿ ಸಲಹದಲೆ ೩

ಪರಿಪರಿಯ ಕಷ್ಟಗಳ ಪರಿಹರಿಸಿ ಭವದೊಳಗೆ
ದುರಿತದೂರನೆ ಕಾಯೊ ಶರಣ ಜನರ
ಪರಿಸರನೊಡೆಯ ನಳನಾಮ ಸಂವತ್ಸರದಿ
ಕರೆಕರೆಯ ಕಷ್ಟಗಳ ಬಿಡಿಸಿ ಸಲಹದಲೆ ೪

ಕನಕಗರ್ಭನ ಪಿತನೆ ಕಮಲನಾಭ ವಿಠ್ಠಲ
ಮಿನಗುತಿಹ ದಿವ್ಯ ಸೌಂದರ್ಯ ಮೂರುತಿಯೆ
ಸನಕಾದಿ ಮುನಿವಂದ್ಯ ಕ್ಷಣ ಬಿಡದೆ ಸ್ಮರಿಸುವರ
ಇನಕುಲೇಂದ್ರನೆ ದೇವ ಬಿಡದೆ ಸಲಹದಲೆ ೫

## ೯೮

ರಕ್ಷಿಸಿ ಪೊರೆಯೊ ದೇವನೆ ಪಕ್ಷಿವಾಹನನೆ
ಸೂಕ್ಷ್ಮ ಸ್ಥೂಲದಿ ವ್ಯಾಪ್ತನೆ ಪ

ಲಕ್ಷ್ಮಿರಮಣ ಪುರುಷೋತ್ತಮ ಪುರುಷನೆ
ಕುಕ್ಷಿಯೊಳಗೆ ಜಗ ರಕ್ಷಿಸಿ ಪೊರೆವನೆ
ಅಕ್ಷರೇಢ್ಯ ಕಮಲೇಕ್ಷಣ ಮಾಧವ
ರಕ್ಷ ಶಿಕ್ಷಕ ಜಗದ್ರಕ್ಷಕ ಹರಿಯೆ ಅ.ಪ

ವಿಶ್ವರೂಪನೆ ಶ್ರೀಹರಿ ವಿಶ್ವವ್ಯಾಪಕನೆ
ವಿಶ್ವತೋ ಮುಖನೆ ಶ್ರೀಶನೆ
ವಿಶ್ವನಾಟಕನೆ ದೇವನೆ
ವಿಶ್ವೋದ್ಧಾರಕನೆ ವಿಶ್ವಮಯನೆ ಶ್ರೀ ವಿಶ್ವನೆ
ವಿಶ್ವರೂಪ ತಾಯಿಗೆ ಬಾಯೊಳು ತೋರ್ದ

ತೃಣ ಘನದೊಳಿಹನು ಹರಿ ಎನುತ ಚಿಂತಿಸಿ ಮನದಿ
ಪ್ರಣವ ಪ್ರತಿಪಾದ್ಯನಂಘ್ರಿಯ ಭಜಿಸದನಕ ೧

ಕಪಟನಾಟಕ ಸೂತ್ರಧಾರಿ ಶ್ರೀ ಹರಿಯ ಗುಣ
ಅಪರಿಮಿತ ಮಹಿಮೆಗಳ ಭಜಿಸಿ ಹಿಗ್ಗುತಲಿ
ಚಪಲ ಬುದ್ಧಿಗಳಿಂದ ತಪಿಸಿ ಕಂಗೆಡದೆ ಮನ
ಅಪರೂಪ ಹರಿನಾಮ ಜಪ ಮಾಡದನಕ ೨

ದಾನಧರ್ಮಗಳಿಂದ ಧನ್ಯನಾದೆನು ಎನಲು
ಹಾನಿಯಾಗೋದು ಆಯು ಪ್ರತಿ ನಿಮಿಷದಿ
ಸ್ನಾನ ಜಪತಪದೊಳಗೆ ಯಾರೆನಗೆ ಸರಿ ಎನದೆ
ಮೌನದಿಂದ್ಧರಿ ನಾಮ ಧ್ಯಾನಿಸುವತನಕ ೩

ಕ್ಲೇಶ ಆನಂದಗಳು ಈಶನಾಜ್ಞೆ ಇದೆಂದು
ವಾಸುದೇವನೆ ಜಗತ್ಪ್ರೇರಕನು ಎಂದು
ಶ್ವಾಸ ಬಿಡುವ ಶಕ್ತಿ ಲೇಸು ತನಗಿಲ್ಲ ಸ-
ರ್ವೇಶ ನಿನ್ನಧೀನವೆಂದರಿವ ತನಕ ೪

ತೀರ್ಥಯಾತ್ರೆಗಳಿಂದ ಗಾತ್ರ ಶೋಷಣೆಯಾಕೆ
ಪಾರ್ಥಸಖನಂಘ್ರಿಗಳ ಕೀರ್ತಿಸುತ ಮನದಿ
ರಾತ್ರಿ ಹಗಲು ಕಮಲನಾಭ ವಿಠ್ಠಲನ ಶ್ರೀ
ಮೂರ್ತಿಯನೆ ನೆನೆನೆನೆದು ಸುಖಿಯಾಗೊ ಮನವೆ ೫

## ೧೦೭

ತೊಳೆಯಲಿ ಬೇಕಿದನು ಮನುಜ ಪ

ಭವಕೂಪದಿ ಬಿದ್ದು ತೊಳಲಿ ಬಳಲಿ ಬಳಲಿ
ಮಲಿನವಾಗಿಹ ಮನ ಹರಿಧ್ಯಾನ ಜಲದಲಿ ಅ.ಪ

ವಿಶ್ವರೂಪ ಮೈದುನನಿಗೆ ತೋರಿದ
ವಿಶ್ವರೂಪ ಸಭೆಯೊಳು ಭಕ್ತರಿಗೆ ತೋರ್ದ
ವಿಶ್ವವ್ಯಾಪಕ ವಿಶ್ವ ಮೂರುತಿಯೆ ೧

ಹಿಂದಿನ ಕರ್ಮಫಲದಲಿ ಬಂದು ಈ ಭವದಿ
ಕಂದಿ ಕುಂದಿದೆನೋ ವ್ಯಥೆಯಲಿ
ಬಂಧ ಮೋಚಕನೆನುತಲಿ ಬಂದೆರಗುತಲಿ
ತಂದೆ ನೀ ಪೊರೆಯಬೇಕೆನುತಲಿ
ಮಂದರೋದ್ಧರ ಗೋವಿಂದ ನಿನ್ನಯ ಪಾದ
ದ್ವಂದ್ವಕೆ ನಮಿಸುವೆ ಬಂಧನ ಬಿಡಿಸೆಂದು
ಇಂದು ಮುಂದು ಎಂದೆಂದಿಗೂ ನೀ ಗತಿ
ಎಂದು ನಂಬಿದೆನೋ ಇಂದಿರೆ ರಮಣ ೨

ಶ್ರಮವ ಪರಿಹರಿಸೊ ಶ್ರೀಶನೇ ಶ್ರೀನಿಕೇತನನೆ
ಕಮಲ ಸಂಭವನ ತಾತನೆ
ಕಮಲ ಜಾತೆಯ ಪ್ರೀಯನೆ ಕಮಲ ಲೋಚನನೆ
ಕಮಲ ಪೊಕ್ಕಳಲಿ ಪಡೆದನೆ
ಕಮಲ ಭವೇಂದ್ರಾದ್ಯಮರರು ಪೊಗಳಲು
ಕಮಲನಾಭ ವಿಠ್ಠಲ ವಿಠ್ಠಲನೆಂದು
ಕಮಲಪುಷ್ಪ ಮಾಲಾಲಂಕೃತ ಶೋಭಿತ
ಕಮಲದಳಾಕ್ಷನೆ ಕಮನೀಯರೂಪ ೩

## ೯೯

ರಕ್ಷಿಸೆನ್ನ ಶ್ರೀಶನೆ ಲಕ್ಷ್ಮಿರಮಣದೇವ ಜಗದ್ರಕ್ಷ
ಕಮಲಾಕ್ಷ ಶ್ರೀಹರಿ ಪ

ನೊಂದೆನೊ ಭವಬಂಧದೊಳಗೆ ಸಿಂಧುಶಯನ
ಪೊರೆಯೊ ಜಗದ್ವಂದ್ಯ ಪಾದಕೆರಗಿ ನಮಿಸುವೆ ೧

ಮಾಧವ ನೀನಿದನಾರೋಗಣೆ ಮಾಡು
ಶ್ರೀ ರಮಣಿಯ ಪ್ರಿಯ ಶ್ರೀನಿವಾಸನೆ ಬೇಗ ೧

ನಾನಾ ವಿಧದ ಫಲ ಹಾಲು ಸಕ್ಕರೆ ಬೆಣ್ಣೆ
ನಾರಾಯಣ ನಿನಗೆ
ಬಾಲೆ ಲಕುಮಿ ಪರಮಾದರದಿಂದಲಿ
ಸೇವೆಗೆ ಪರಮಾನ್ನವನರ್ಪಿಸುವಳು ೨

ತನುವೆಂಬೊ ತಟ್ಟೆಯೊಳಿರಿಸಿ ಫಲವ ನಿ–
ರ್ಮಲಮನವೆಂಬ ವಸ್ತ್ರವನ್ನೊದಿಸಿ
ಸನ್ಮತವೆಂಬ ಸಾರಣೆಮಾಡಿ ನಮ್ಮ
ಗುರುಕರುಣದ ರಂಗವಲಿಯನ್ಹಾಕುವೆ ೩

ನವವಿಧ ಭಕುತಿಯ ನಳನಳಿಸುವ ವೀಳ್ಯ
ಚಲುವ ಶ್ರೀ ಹರಿ ನಿನಗೆ
ಸವಿನಯ ನುಡಿಗಳ ಮಂತ್ರ ಪುಷ್ಪಗಳು
ಸನಕಾದಿವಂದ್ಯ ಸರ್ವೇಶ ಶ್ರೀ ಕೃಷ್ಣ ೪

ಕ್ಷೀರ ಸಾಗರವಾಸಿ ಶ್ರೀ ಭೂರಮಣನೆ
ಮಾರಜನಕ ಹರಿಯೆ
ಕಾರುಣ್ಯಸಾಗರ ಕಮಲನಾಭ ವಿಠ್ಠಲ
ಪಾರುಗಾಣಿಸೊ ಭವಸಾಗರದಿಂದಲಿ ೫

## ಲೋಕನೀತಿ

### ೧೦೬

ಏನು ಮಾಡಿದರೇನು ಹಾನಿಯಾಗದು ಪಾಪ
ಶ್ರೀನಿಕೇತನನ ದಿವ್ಯನಾಮ ನೆನೆಮನವೆ ಪ

ಕ್ಷಣ ಪದಕಮಲಗಳ ಸ್ಮರಿಸಿ ಮನದೊಳಗೆ ಪ್ರತಿ
ಕ್ಷಣಕ್ಷಣದಿ ಹರಿ ಮಹಿಮೆ ಭಜಿಸಿ ಭಕ್ತಿಯಲಿ

ಕುಂದ ಕುಸುಮ ಪುನ್ನಾಗ ಕೇತಕಿಪುಷ್ಪ ಕರವೀರ ಬಕುಳ
ಪುಷ್ಪಗಳ ತಂದು
ಮಂದರೋದ್ಧರಗೆ ಶಾವಂತಿ ಪುಷ್ಪದ ವನಮಾಲೆಯನು
ಮಂದಾರಮಲ್ಲಿಗೆ ಜಾಜಿ ಸಂಪಿಗೆ ವನಮಾಲೆಯನು
ಸುಂದರ ಸುರಹೊನ್ನೆ ಹಳದಿ ಸೇವಂತಿಗೆ ಸರಗಳನು
ಚಂದದ ಇರುವಂತಿ ದುಂಡುಮಲ್ಲಿಗೆ ಪಚ್ಚೆತೆನೆಗಳನು
ಮುಂದಿರುವ ಪಾದದಿ ಪಾರಿಜಾತದ ಪುಷ್ಪ ಮಾಲೆಯನು
ಬಂದು ಮುಸುಕುವ ದುಂಬಿ ಸ್ವರಗಳು ಸಣ್ಣ ಮಲ್ಲಿಗೆ
ಇರುವಂತಿ ಪುಷ್ಪದಿ
ಚಂದದಲಿ ಮನ್ಮಥನ ಪಿತನಿಗೆ ಸಂಭ್ರಮದಿ
ಅರ್ಪಿಸುವ ಸಮಯದಿ ೧೧

ಗಂಧಾಕ್ಷತೆ ಪುಷ್ಪ ತುಲಸಿ ಮಾಲೆಗಳಿಂದ
ಮದ್ದಲೆ ಭೇರಿ ಮೃದಂಗ ತಾಳಗಳಿಂದಲಿ
ಸಿಂಧುಶಯನಗೆ ಪೀತಾಂಬರಗಳ ತಂದು ಅರ್ಪಿಸುತ
ಮಂದರೋದ್ಧರನ ಪೂಜೆಯ ಮಾಡಿ ಹರಿಗುಣ ಪಾಡುತ್ತ
ಸುಂದರ ಜಾಗಟೆ ಶಂಖಗಂಟೆಗಳ ಧ್ವನಿ ಮಾಡಿ ಹರುಷಿಸುತ
ಚಂದದ ಕಾಲ್ಗೆಜ್ಜೆ ತಂಬೂರಿ ತಂತಿಯ ಸ್ವರಗಳಿಂದ ನಲಿಯುತ್ತ
ಇಂದಿರೇಶನ ಚಂದ ಗುಣಗಳ ನಿಂದು ಕೀರ್ತಿಸಿ ಪಾಡಿ ಪೊಗಳುತ್ತ
ಬಂದು ರಕ್ಷಿಸು ರಕ್ಷಿಸೆನುತಲಿ ಸುಂದರ ಶ್ರೀಕೃಷ್ಣ ಮೂರ್ತಿಗೆ
ಬಿಂದು ಮಾಧವ ಹರಿಗೆ ತ್ವರಿತದಿ ಮಂಗಳಾರತಿ
ಮಾಳ್ಪ ಸಮಯದಿ ೧೨

ಮಂಡಲಂಗಳ ಮಾಡಿ ರಂಗವಲ್ಲಿಗಳ್ಹಾಕಿ
ಚಂದದ ಹಪ್ಪಳ ಸಂಡಿಗಾಂಬೋಡೆಗಳ
ಪುಂಡರೀಕಾಕ್ಷ ಪುರುಷೋತ್ತಮಗೆ ಪಾಲ್ಮೊಸರು ಬೆಣ್ಣೆಗಳ
ಮಂಡಿಗೆಯು ಬೂಂದಿಲಾಡು ಚಿರೋಟಿ ಪಂಚ ಭಕ್ಷಗಳ
ಪಂಡಿತರೊಡೆಯಗೆ ಚಿತ್ರಾನ್ನದಧ್ಯಾನ್ನ ಶಾಲ್ಯಾನ್ನ ಸೂಪಗಳ
ತಂಡತಂಡದ ಪಾಯಸ ಹಾಲು ಸಕ್ಕರೆ ಎಳನೀರು
ತಿಳಿನೀರು ತಾಂಬೂಲಗಳ

ತಂಬೂರಿಯ ಮೀಟುತ ತಾಳಗಳ
ಇಂಬಾಗಿಹ ತಂತ್ರಿ ವಾದ್ಯಗಳು
ಕಂಬುಕಂಠನ ವೈಭವಗಳ ಪೊಗಳುತ
ಸಂಭ್ರಮ ಪಡುತಿಹವು ೯

ಕಾಲಲಿ ಗೆಜ್ಜೆಯ ಧ್ವನಿಗಳ ಮಾಡುತ
ತಾಳದ ಧ್ವನಿಗೆ ನರ್ತಿಸುತಿರುತಿಹ
ಸಾಲು ಸಾಲಾಗಿಹ ಹರಿದಾಸರು
ಮೇಲಾಗಿ ನಡೆದಿಹರು ೧೦

ಮಲ್ಲಿಗೆ ಜಾಜಿ ಸಂಪಿಗೆ ಹೂಗಳು
ಚಲ್ಲಿಹರೆಲ್ಲೆಡೆ ಘಮಘಮಿಸುವುದು
ಫುಲ್ಲನಾಭನ ಮನೆಗೆ ಪೋಗಲು
ಉಲ್ಲಾಸವು ಜನಕೆ ೧೧

ವೇದಶಾಸ್ತ್ರ ಪುರಾಣ ಪ್ರವಚನ
ಮೋದದಿ ಕಲಿಯುವ ಬ್ರಹ್ಮಚಾರಿಗಳು
ಸಾಧುಗಳಿಂದ ಕಲಿಯುತಲಿರುತಿಹ ವಿ–
ನೋದವ ನೋಡಿದರು ೧೨

ಗೋಶಾಲೆಯಲಿಹ ಗೋವ್ಗಳಿಗೆಲ್ಲ
ಆಸೆಯಿಂದಲಂಕರಿಸುತಲಿಹರು
ಸೋಸಿಲಿ ಮುತ್ತು ರತ್ನದ ಕುಚ್ಚು ವಿ–
ಲಾಸದಿ ತೋರುವದು ೧೩

ಜಯ ಶ್ರೀ ಕೃಷ್ಣ ಜಯ ಶ್ರೀ ರಾಮ
ಜಯ ಜಯವೆನ್ನುತ ಪೊಗಳುತಲಿಹರು
ಜಯ ಶ್ರೀಕೃಷ್ಣ ಜಯ ಜಯವೆನ್ನುತ
ಜಯ ಪೊಗಳುವ ಭಟರು ೧೪

ಸುಂದರಾಂಗ ಹರಿಯೆ ಭಕ್ತವೃಂದ ಪೊರೆದು
ಕಾಯ್ವ ದೇವ ಸಿಂಧುಶಯನ ಶ್ರೀ ಮುಕುಂದನೆ ೨

ಪಾಲಿಸೆನ್ನ ಪವನನಯ್ಯ ಪಾದಕೆರಗಿ ಮುಗಿವೆಕಯ್ಯ
ಲೋಲಲೋಚನೆಯರ ಪ್ರಿಯನೆ ೩

ರಂಗನೆ ಉತ್ತುಂಗ ಮಹಿಮ ಮಂಗಳರೂಪ
ಪಾಂಡುರಂಗ ಕೃಪಾಪಾಂಗ ಶ್ರೀಹರಿ ೪

ಪಾಹಿ ಪಾಹಿ ಪಂಕಜಾಕ್ಷಿ ಪಾಹಿ ಲಕ್ಷ್ಮೀರಮಣ ಶ್ರೀಶ
ಪಾಹಿ ಕಮಲನಾಭ ವಿಠ್ಠಲನೆ ೫

## ೧೦೦

ರಕ್ಷಿಸೋ ಶ್ರೀಶ ಶ್ರೀ ಶ್ರೀನಿವಾಸ
ಅಕ್ಷಯ ಗುಣಪೂರ್ಣ ಪಕ್ಷಿವಾಹನ ದೇವ
ಅಕ್ಷರೇಶಾತ್ಮಕ ಮೋಕ್ಷ ದಾತನೆ ಹರಿ ಪ

ರಕ್ಷಿಸೀಕ್ಷಣ ಲಕ್ಷ್ಮೀರಮಣ
ಈಕ್ಷಿಸೀಗಲೆ ರಕ್ಷಿಸೆಮ್ಮನು
ಕುಕ್ಷಿಯೊಳು ಜಗ ರಕ್ಷಿಸುವ ಹರಿ
ಸೂಕ್ಷ್ಮ ಸ್ಥೂಲದೊಳಿರುವ ದೇವ ಅ.ಪ

ಇಂದಿರೆರಮಣ ಗಜೇಂದ್ರವರದ ಹರಿ
ಮಂದಹಾಸದಿ ಭಕ್ತವೃಂದವ ಪಾಲಿಪ
ನಂದಕಂದನೆ ಬಂದು ರಕ್ಷಿಸು
ಇಂದಿರಾ ಭೂದೇವಿ ರಮಣನೆ
ಸುಂದರಾಂಗನೆ ಸುಮನ ಸರ ಹೃ-
ನ್ಮಂದಿರದಿ ಶೋಭಿಸುವ ದೇವ ೧

ಅಂಬುಜಾಕ್ಷನೆ ನಿನ್ನ ನಂಬಿದೆನೊ ಈ ಭವದ
ಬಂಧ ತಪ್ಪಿಸಿ ಕಾಯೊ ಇಂದಿರೇಶ
ಹಿಂದು ಮುಂದ್ಯಾರಿಲ್ಲವೆಂದು ನಂಬಿದೆ ನಿನ್ನ
ಛಂದದಿಂದ ಸಲಹೊ ಮಹೇಂದ್ರತೀರ ನಿವಾಸ ೨

ಸುಂದರಾಂಗನೆ ದೇವ ವಂದಿಸುವೆ ತವಪಾದ
ದ್ವಂದ್ವ ಭಜಕರ ಸಂಗ ಬಂದುನೀಡೈ
ಇಂದಿರಾರಮಣನೆ ನಂದಗೋಪನ ಕುವರ
ಬಂದು ಭಕುತರ ಪೊರೆವ ಆನಂದ ಮೂರುತಿ ಕೃಷ್ಣ ೩

ಶರಣಜನರನು ಪೊರೆಯೆ ತ್ವರಿತದಲಿ ಬಂದು ಈ
ಗಿರಿಯ ಮಧ್ಯದಿನಿಂದೆ ಮಧುಸೂದನ
ಶರಣುಶರಣೆಂದು ನಿನ್ನಡಿಗೆರಗುವ ಜನರ
ದುರಿತವೆಲ್ಲವ ಕಳೆದು ಪೊರೆವ ದಯಾನಿಧಿ ಕೃಷ್ಣ ೪

ಕನಕಗರ್ಭನ ಪಿತನೆ ಕಡುಲೋಭವನೆ ಬಿಟ್ಟು
ದೃಢವಾದ ಅಭಯವನು ದಯಪಾಲಿಸೊ
ಪೊಡವಿಗೊಡೆಯನೆ ದೇವ ಕಮಲನಾಭವಿಠ್ಠಲ
ಬಿಡದೆ ನಿನ್ನನು ಭಜಿಪ ಧೃಢ ಮನವ ನೀಡೈ ೫

## ೧೦೫

ಸ್ವೀಕರಿಸೈ ಕರುಣಾಕರ ಶ್ರೀವರ
ಲೋಕವಂದಿತ ಪ್ರಭುವೆ ಪ

ಮಾಕಮಲಾಸನ ನಾಕಪಾಲವಂದ್ಯ
ಮಾತುಳಾಂತಕ ಮಧುಸೂದನ ಶ್ರೀಹರಿ ಅ.ಪ

ಮಾವು ಮಾದಳ ದ್ರಾಕ್ಷ ಬಾಳೆ ಕಿತ್ತಳೆ
ಮೊದಲಾದ ಫಲಗಳೆಲ್ಲ

ನಂದನಕಂದ ಮುಕುಂದ ಹರೇ ಕೃಷ್ಣ
ಕಂದರ್ಪ ಜನಕನೆ ಕರುಣಾನಿಧೆ ಹರಿ
ಮಂದರೋದ್ಧರ ಮದನ ಜನಕ
ಸುಂದರಾಂಗ ಶ್ರೀಸುಮನಸರ ಪ್ರಿಯ
ಬಂಧಮೋಚಕ ಭವವಿದೂರನೆ
ಸಿಂಧುಶಯನ ಸರ್ವೇಶ ಶ್ರೀಹರಿ ೨

ಕನಕ ಗರ್ಭನ ಪಿತ ಕರುಣಿಸೊ ನಿನ್ನಧ್ಯಾನ
ಕನಸುಮನಸಲಿ ನಿನ್ನ ಸ್ಮರಣೆ ಎನಗಿತ್ತು
ಕನಲಿಕೆಯ ಕಳೆದೆಮ್ಮ ಕ್ಷಣ ಬೆಂ-
ಬಿಡದೆ ಕಾಪಾಡೆನ್ನುತ ಪ್ರಾರ್ಥಿಪೆ
ಕಮಲನಾಭವಿಠ್ಠಲನೆ ಕರುಣದಿ
ಕಮಲ ಮುಖಿಯೊಡಗೂಡಿ ಹರುಷದಿ ೩

## ೧೦೧

ರಾಮಚಂದ್ರನೆ ನಿನ್ನ ನಾಮಮೃತವು ಎನ್ನ
ನಾಲಿಗೆಯೊಳು ನಿಲಿಸು ಪ

ದಾನವಾಂತಕ ನಿನ್ನ ಧ್ಯಾನ ಬಿಡದೆ ಇತ್ತು
ದೀನ ರಕ್ಷಕ ಹರಿ ಜಾನಕಿ ರಮಣನೆ ಅ.ಪ

ಕ್ಷೀರವಾರಿಧಿ ಶಯನ ಶ್ರೀ ಹರಿಯನು
ಸ್ಮರಿಸುತ ಧ್ಯಾನವ ಮಾಡಿ ಭಕುತಿಲಿ
ನಾರದ ಹರ ಬ್ರಹ್ಮಾದಿ ಋಷಿ ಗಂಧರ್ವರು
ಸುರರೆಲ್ಲರು ಕೂಡಿ
ಮಾರಮಣನ ಕೊಂಡಾಡುತ ಸ್ತೋತ್ರವ ಮಾಡಿ
ಪಾರುಮಾಡು ಜಗದೀಶನೆ ಎನುತಲಿ ತವಕದಿ
ಶ್ರೀ ಭೂರಮಣನು ದೀನರ ನುಡಿಗಳ
ಕೇಳುತ ಆಲೋಚಿಸುತಲಿ ಬೇಗದಿ

## ೧೦೩

ಸಲಹೊ ಶ್ರೀಹರಿಯೆ ಎನ್ನ ಮೊರೆಯ ಚಿತ್ತೈಸಿ
ಉರಗಾದ್ರಿವಾಸ ಶ್ರೀಹರಿ ಕೇಶಿಧ್ವಂಸಿ ಪ

ಸಾರ ಶೃಂಗಾರ ಯದುವೀರ ಸಲಹೆನ್ನ
ಮಾರನ ಜನಕ ಮಧುವೈರಿ ಮೋಹನ್ನ ೧

ಅಪ್ಪ ತಿಮ್ಮಪ್ಪ ಎನ್ನ ತಪ್ಪನೆಣಿಸದಲೆ
ಸರ್ಪಶಯನ ಸರ್ವ ಶ್ರೇಷ್ಠ ಸಲಹೆನ್ನ ೨

ರಂಗಉತ್ತುಂಗ ಅಂತರಂಗದಿ ಒಲಿದು
ಮಂಗಳಕರ ಪಾಂಡುರಂಗ ಸಲಹೆನ್ನ ೩

ಬಾರಿಬಾರಿಗೆ ನಿನ್ನ ಹಾರೈಸುತಿರುವೆ
ಸಾರಸಾಕ್ಷನೆ ಸಾರ್ವಭೌಮ ಸಲಹೆನ್ನ ೪

ಕಮಲ ಸಂಭವನಯ್ಯ ವಿಮಲಸ್ವರೂಪ
ಕಮಲನಾಭ ವಿಠ್ಠಲ ಪೊರೆ ಎನ್ನದಾತ ೫

## ೧೦೪

ಸಾರಿದೆನೊ ನಿನ್ನ ಶ್ರೀನಿವಾಸ
ಪಾರುಗಾಣಿಸೊ ಎನ್ನ ಉದ್ಧರಿಸೊ ಶ್ರೀಶ ಪ

ವಾರಿಜಾಕ್ಷನೆ ನಿನ್ನ ಚಾರುಚರಣದ ಸ್ಮರಣೆ
ಬಾರಿ ಬಾರಿಗೆ ಮಾಳ್ಪ ಭಾಗ್ಯವೀಯೊ
ಸಾರಸಾಕ್ಷನೆ ಸಂಸಾರ ದು:ಖದಿ ಎನ್ನ
ಸೇರದಂದದಿ ಮಾಡೋ ಸರ್ವವಂದಿತ ಕೃಷ್ಣ ೧

ಭೂನಾಥನ ಮನೆಯೊಳಗವತರಿಸುವೆ
ಎನ್ನುತವರಿಗೆಲ್ಲಾಭಯವ ನೀಡಿದ ೧

ದಶರಥನುದರದಿ ಜನಿಸಲು ನಾಲ್ವರು ಅಂದು ಯಾಗಕೆ
ಕೌಶಿಕನಲ್ಲಿ ವಿದ್ಯೆಗಳನ್ನು ಕಲಿಯುತ ಬಂದು
ಶಶಿಮುಖಿ ಜಾನಕಿ ಕರಪಿಡಿದನು ತಾನಂದು ಅಯೋಧ್ಯದಿ
ಎಸೆವ ಸಿಂಹಾಸನವೇರುವ ಸಮಯದಿ ಬಂದು
ರಸಕಸಿ ಮಾಡಲು ಕೈಕೇಯಿಯು ತಾ
ಶಶಿಮುಖಿ ಸೀತೆಯ ಒಡಗೂಡುತಲಿ
ಬಿಸಿಲು ಗಾಳಿಮಳೆಯೊಳು ವನಚರಿಸುತ
ಸತಿಯು ಬೇಡೆ ಮಾಯಮೃಗವ ಬೆನ್ನಟ್ಟಿದ ೨

ಶಶಿಮುಖಿ ಸೀತೆಯ ದಶಶಿರನೊಯ್ಯಲು ಕೇಳಿ
ದಶರಥಸುತ ಅರಸುತ ಬಲು ಶೋಕವ ತಾಳಿ ಚಿಂತಿಸಿ
ಎಸೆವ ಗಿರಿ ಗುಹೆಗಳ ಹುಡುಕಲು ಮಾರುತಿ ನೋಡಿ ಮುದ್ರಿಕೆ
ವಸುಧೆ ತನಯಳಿಗರ್ಪಿಸೆ ಆಕೆಯು ಮುದ ತಾಳಿ
ವೀರ ಮಾರುತಿ ಚೂಡಾಮಣಿ ಕೊಡಲು
ಶ್ರೀ ರಘುವೀರನು ಸೇತುವೆ ಕಟ್ಟುತ
ಕ್ರೂರ ಖಳರನು ಸಂಹರಿಸಿದ ಕಮಲ–
ನಾಭ ವಿಠ್ಠಲ ಅಯೋಧ್ಯದಿ ಮೆರೆಯುವ ೩

## ೧೦೨

ಲಕ್ಷ್ಮೀರಮಣನೆ ರಕ್ಷಿಸೆನ್ನನು
ಪಕ್ಷಿವಾಹನ ಅಕ್ಷರ ಪುರುಷ ಅಧೋಕ್ಷಜ ಹರಿ ಪ

ಇಂದಿರೇಶ ನೊಂದೆ ಭವದಿ ಮಂದ ಬಿಡಿಸಿ ಸಲಹೋ ದೇವ
ಇಂದು ಮುಂದು ಎನಗೆ ನೀ ಗತಿ ಎಂದು ನಂಬಿದೆ
ಮಂದರಧರ ಗೋವಿಂದ ಮುಕುಂದ ೧

ಪರಮ ಪುರುಷ ಪುಣ್ಯಚರಿತ
ಗರುಡಗಮನ ವಾಸುದೇವ
ನಿರುತ ನಿನ್ನ ಭಜಿಪ ಭಕ್ತರ ಸ್ಮರಣೆ ಪಾಲಿಸೊ
ಪರಮಪುರುಷ ಹರಿ ಶರಧಿಶಯನ ೨

ದೇಶದೇಶ ತಿರುಗಿ ಬಹಳ ಬೇಸರದಲೆ ಬಳಲಿದವರ
ಕ್ಲೇಶಗಳನೆ ಕಳೆದು ಪರಮೋಲ್ಲಾಸ ನೀಡಿದ
ಸಾಸಿರನಾಮದ ಒಡೆಯನೆ ವೆಂಕಟ ೩

ಕ್ಷೀರವಾರಿಧಿ ಶಯನದೇವ ಮಾರಪಿತ ಮಹಾನುಭಾವ
ಘೋರತರ ಸಂಸಾರ ಶರಧಿ ಪಾರುಗಾಣಿಸೋ
ಪರಿಸರ ನೊಡೆಯನೆ ಉರಗಶಯನ ೪

ಶಂಖ ಚಕ್ರಧಾರಿ ಶ್ರೀಹರಿ ಪಂಕಜಾಕ್ಷರೊಳು ವಿಹಾರಿ
ಬಿಂಕಮಾಡದೆ ಪೊರೆಯೊ ಶೌರಿ ಶಂಕರಾನುತ
ಪಂಕಜಲೋಚನ ವೆಂಕಟರಮಣ ೫

ಕಪಟ ಸೂತ್ರಧಾರಿ ಚಪಲ ಬುದ್ಧಿಯ ಬಿಡಿಸೊ ಶೌರೀ
ಅಪರಿಮಿತ ಮಹಿಮೆಗಳ ತೋರಿ ನಟಿಸಿ ಮೆರೆವ
ಸಟೆಯಲ್ಲವೊ ನಾರದ ಮುನಿ ಸೇವಿತ ೬

ಕಮಲಾಪತೆ ಪ್ರಿಯ ಜೀಯ ಕಮಲಸಂಭವ ಜನಕದೇವ
ಕಮಲನಾಭ ವಿಠ್ಠಲ ಕಾಯೋ ಶ್ರಮವ ಹರಿಸೊ
ಸುಮನಸರೊಡೆಯನೆ ಸುರಮುನಿ ಸೇವಿತ ೭

ಧರಣಿಸುತೆಯಳ ತಂದು ಪರಮ ಸಂಭ್ರಮದಿಂದ
ಮೆರೆವದೇವನ ಸ್ಮರಿಸುತ
ನರರೂಪದಿಂದ ದಶರಥನ ಪುರದಲಿ ನಿಂತ
ಪರಮಾತ್ಮನಿಗೆ ನಮಿಸುತ
ಸುರರು ಸ್ತುತಿಸಲು ಪರಮಹರುಷದಿಂದಾಲಿಸುತ
ಹರಿಯ ಮೆಚ್ಚಿಪ ನಮ್ಮ ಗುರುಪವಮಾನ ಶ್ರೀ ೧

ಅಂದು ಆ ಬಕನ ಭಯದಿಂದ ಸಜ್ಜನರೆಲ್ಲ
ಕುಂದಿರಲು ಭಯವ ಹರಿಸಿ
ಅಂಧಕನ ಸುತನ ಬಂಧಿಸುತ ರಣದೊಳಗೆ ಯದು-
ನಂದನಗೆ ಪ್ರೀತಿ ಪಡಿಸಿ
ಕೊಂದು ಬಿಸುಡಲು ಜರಾಸಂಧನನು ವಸುದೇವ
ಕಂದ ನೋಡುತಲಿ ಸುಖಿಸಿ
ಇಂದಿರಾರಮಣ ಮುಕುಂದನನು ಪೂಜಿಸುವ
ಸುಂದರ ಭೀಮ ನಿಸ್ಸೀಮನಹುದೆಂದು ಶ್ರೀ ೨

ಪತಿತ ಸಂಕರದಿಂದ ಮತವೆಲ್ಲ ಕೆಡಲು ಶ್ರೀ-
ಪತಿಯ ಧ್ಯಾನವು ಮಾಡುತ
ಯತಿ ಶಿರೋಮಣಿಯಾಗಿ ಶ್ರುತಿ ಸ್ಮೃತಿಗಳಣಿ ಮಾಡಿ
ಹಿತವ ಜನರಿಗೆ ತೋರುತ
ಎಸೆವ ಘನಗಿರಿಯಲ್ಲಿ ಅಸದಳ ಹನುಮರೆಂ-
ದೆಸೆದು ಮಿಗೆ ಶೋಭಿಸುತಲಿ
ವಾರಿ ದಡದಲಿ ಕಮಲನಾಭ ವಿಠ್ಠಲನ ಸ್ಮರಿಸಿ
ಧೀರ ಹನುಮಂತನಪಾರ ಮಹಿಮನೆಂದು
ವನಗಿರಿಯ ಗುಹೆಗಳಲಿ ಹನುಮಂತನೆಂದೆನುತ
ಎಣಿಸಲಳವಲ್ಲವೋ ಘನಪರಾಕ್ರಮಿ ಮುಖ್ಯ ೩

ತೀರ್ಥ ಕ್ಷೇತ್ರಗಳನು ಚರಿಸುತಲೆ ಶ್ರೀ ಹರಿಯಗುಣ ಸ-
ತ್ಪಾತ್ರರಿಂದನವರತ ತಿಳಿಯುತಲೆ
ಶ್ರೋತ್ರಿಯನ ಸಂಗದೊಳು ನಲಿಯುತ್ತಾ
ಮನನಲಿದು ನಿನ್ನಯ
ಕೀರ್ತನೆಗಳನುದಿನದಿ ಕೀರ್ತಿಸುತ
ಪಾರ್ಥಸಾರಥೆ ನಿನ್ನ ಪೊಗಳುತ
ರಾತ್ರಿ ಹಗಲೆಡಬಿಡದೆ ಸ್ತುತಿಪರ
ಗಾತ್ರಮರೆಯುತಲವರ ಸೇವಿಪ
ಸಾರ್ಥಕದ ಸೇವೆಯನೆ ನೀಡೈ ೧

ಗೋಕುಲಾಪತಿ ಹರಿಯೆ ಗೋವಿಂದ ನೀ ಕಡಿಯೋ ಬಂಧ
ನೂಕಿ ಉದ್ಧರಿಸೆನ್ನ ಭವದಿಂದ
ಕಾಕುಮತಿಗಳ ಬಿಡಿಸು ದಯದಿಂದ ನೀ ಪೊರೆಯದಿರಲು
ಯಾತಕೀ ನರದೇಹ ಮುಕುಂದ
ಮಾತುಮಾತಿಗೆ ನಿನ್ನ ಸ್ಮರಿಸದ
ಮಾತುಗಳ ಫಲವೇನು ಕೇಶವ
ಮಾತುಳಾಂತಕ ಮದನ ಜನಕ
ಮಾಧವ ಮುರಮರ್ದನ ಹರೇ ೨

ಕರುಣಿಗಳೊಳು ದೇವನಿನಗೆಣೆಯೆ ದಯ ಮಾಡು ಹರಿಯೆ
ಕರಿಯ ಪೊರೆದವನಲ್ಲೆ ನರಹರಿಯೆ
ಕರೆಕರೆಯ ಸಂಸಾರ ಇದು ಖರೆಯ ಇದರೊಳಗೆ ಬಳಲಿದೆ
ಕರೆದು ರಕ್ಷಿಪುದೆಂದು ಮೊರೆ ಇಡುವೆ
ಕಮಲ ಮುಖಿ ಶ್ರೀ ಭೂಮಿ ಸಹಿತದಿ
ಕಮಲನಾಭ ವಿಠ್ಠಲನೆ ಭಕುತರ
ಮಮತೆಯಲಿ ಕೈ ಪಿಡಿದು ಪೊರೆಯುವ
ಮನ್ಮಥನ ಪಿತ ಮನ್ನಿಸುತ ಪೊರೆ ೩

## ೬೩

ಮರೆಯದೆ ಸಲಹೊ ಮಾರುತೀಶ ಎನ್ನ
ಶರಣೆಂಬೆನು ನಿನ್ನ ಪ

ಶರಣಾಗತರನು ಬಿಡದೆ ಪೊರೆವ ಘನ್ನ-
ಗಿರಿ ಅಂಜನೆತನಯ ಅ.ಪ

ವನನದಿಗಿರಿಗುಹೆಗಳಲಿ ನಿನ್ನ ರೂಪ
ತೋರುವುದೈ ಭೂಪ
ಶರಧಿ ಲಂಘಿಸಿ ರಾವಣನಿಗೆ ತಾಪ
ಪುಟ್ಟಿಸಿದೆಯೊ ರಘುಪ-
ನಡಿಗಳ ಬಿಡದೆ ಸೇವಿಸುವರ ಪಾಪ
ಮಾಡುವಿ ನಿರ್ಲೇಪ
ಸಡಗರದಲಿ ನಿನ್ನೊಡೆಯನ ತೋರಪ್ಪ
ಘನಗಿರಿ ಹನುಮಪ್ಪ ೧

ಊರಿನಲಿ ಊರ್‍ಗೊರಗು ನಿನ್ನ ಮೂರ್ತಿ
ಎಷ್ಟ್ವೂಳಲಿ ಕೀರ್ತಿ
ಪಾಡುತ ಪೊಗಳ್ವರು ನಿನ್ನಯ ಸತ್ಕೀರ್ತಿ
ವರ್ಣಿಸುವುದೆ ಅರ್ಥಿ
ಪಾಮರನೊಮ್ಮೆ ಪಾಡಲು ನಿನ್ನ ವಾರ್ತೆ
ಪರಿಹಾರವೋ ಭೀತಿ
ನಾಡೊಳು ನಿನ್ನ ಭಜಿಸುವವರ ಸಂಗ
ನೀಡು ಕೃಪಾಪಾಂಗ ೨

ಕಡಲ ಶಯನನ ಅಡಿಗಳ ಸೇವಿಸುತ
ಕಡುಹರುಷವ ಪಡುತ
ಬಿಡದೆ ನಿನ್ನಯ ಸೇವಕರಿವರೆನುತ
ಶ್ರೀಶಗೆ ಪೇಳುತ್ತ

ರಂಗನ ಮೂರ್ತಿಯ ಕಂಗಳಿಂದಲಿ ನೋಡಿ
ಭಂಗಗಳಳಿಯುವ ಹರಿದಾಸರ
ಸಂಗದೊಳಿರಿಸು ಉತ್ತುಂಗ ಮಹಿಮಪಾಂಡು-
ರಂಗನೆ ಈ ಭವ ಭಂಗ ಬಿಡಿಸೆನ್ನದೆ ೪

ಇಂದಿರೇಶನ ಪಾದ ಪೊಂದಿ ಭವದಘ
ವೃಂದವ ಕಳೆಯುವನೆಂದೆನ್ನುತ
ಬಂಧಕ ಮೋಚಕನೆಂದರಿಯದೆ ಭವ
ಬಂಧನದೊಳು ಸಿಕ್ಕಿ ಬಳಲಿ ಬಾಯ್ಬಿಡುತಲಿ ೫

ಯಾತಕೀ ಪರಿ ಮೋಹ ಮಾತುಳಾಂತಕ ಕೃಷ್ಣ
ಮಾತು ಮಾತಿಗೆ ಹರಿ ಹರಿ ಎನ್ನದೆ
ಸೋತು ಬಂದೆನೊ ದೇವ ಮಾತರಿಶ್ವನಪ್ರಿಯ
ಕೋತಿ ಬುದ್ಧಿಯ ಬಿಡಿಸೆಂದು ತುತಿಸದಲೆ ೬

ಕಮಲ ಪತ್ರಾಕ್ಷ ಶ್ರೀ ಕಮಲಜಾತೆಯ ಪ್ರಿಯ
ಕಮಲನಾಭ ವಿಠ್ಠಲ ವಿಠ್ಠಲ ಹರೇ
ಸುಮನಸರೊಡೆಯ ಶ್ರೀ ಭ್ರಮರಕುಂತಳೆ ಪ್ರಿಯ
ಶ್ರಮ ಪರಿಹರಿಸೆಂದು ನಮಿಸಿ ಸ್ತುತಿಸುವೆನು ೭

## ೮೮

ದಯದಿ ವರಗಳ ನೀಡು ಮಮಸ್ವಾಮಿ ಸರ್ವಂತರ್ಯಾಮಿ
ನಯದಿ ಬೇಡುವೆ ಭಕುತಜನ ಪ್ರೇಮಿ ಮಮ ಸರ್ವಸ್ವಾಮಿ ಪ

ಸವಿನಯದಿ ಪ್ರಾರ್ಥಿಸುತ ಬೇಡುವೆ
ಸುಮನರಸರ ಪ್ರಿಯ ಚಿತ್ಸುಖಪ್ರದ
ಅಮಿತ ವಿಕ್ರಮ ಅಪ್ರಮೇಯನೆ
ರಮೆಯರಮಣನೆ ರಕ್ಷಿಸೆನ್ನನು ಅ.ಪ

ಕೊಡಿಸುವಿ ಮುಕ್ತಿಯ ಧೃಡಭಕ್ತರಿಗೆ ಸತತ
ರಾಮರ ಸ್ಮರಿಸುತ್ತ
ಕಮಲನಾಭ ವಿಠ್ಠಲನನು ಸೇವಿಸುತ
ಭಕ್ತರ ಸಲಹುತ್ತ ೩

## ೬೪

ಯಂತ್ರೋದ್ಧಾರಕ ರಾಯರ ಸ್ಮರಣೆಯ ಮಾಡಿ
ಅಂತರಾತ್ಮನ ದಾಸರ ಪ

ಸಂತತ ಮನದಿ ನಿಶ್ಚಿಂತೆಯೊಳ್ ಸ್ಮರಿಸಲು
ಸಂತಾಪಗಳ ಕಳೆದು ಚಿಂತಿತಾರ್ಥವನೀವ ಅ.ಪ

ಶರಧಿಯ ನೆರೆದಾಟಿದ ಕಾಲುವೆಯಂತೆ
ನಲಿದು ಲಂಕೆಯ ಸಾರಿದ
ಬಲಶಾಲಿ ಲಂಕಿಣಿಯು ಪುರವ ಕಾಯುವ ಶ್ರಮ
ಹರಿಸಿ ಸೂಕ್ಷ್ಮದ ರೂಪ ಧರಿಸಿ ಪುರವ ಪೊಕ್ಕು
ಪರಿಪರಿ ಕೋಟೆಗಳಿರವನೆ ಕಾಣುತ
ಕರಿ ಹಯ ರಥ ಶಾಲೆಗಳ ಪರಿಕಿಸುತ
ಖಳನರಮನೆ ಪೊಕ್ಕರು ಫಲವಿಲ್ಲದೆ
ಕಡೆಗೆ ಅಶೋಕ ವನದೊಳು ಚರಿಸಿದ ೧

ವನದ ಮಧ್ಯದೊಳಿರಲು ರಕ್ಕಸ ಬಹು
ಘನತೆಯಿಂದಲಿ ಬರಲು
ಬಣಗು ದೈತ್ಯನ ತೃಣಕೆಣೆಮಾಡಿ ನುಡಿಯಲು
ಪವನ ತನಯ ನೋಡಿ ಮನದಿ ಸ್ತೋತ್ರವ ಮಾಡಿ
ಮನದೊಳು ಶ್ರೀ ರಘುವರನನು ಧ್ಯಾನಿಸಿ
ಘನ ಮುದ್ರಿಕೆ ಮುಂದಿಡಲಾ ಜಾನಕಿ
ನಯನಂಗಳ ಕಂಬನಿಗರೆಯುತ
ಮುಂದಿಹ ಹನುಮನೊಳಿಂತೆನೆ ಲಾಲಿಸಿದ ೨

ಅಗಣಿತ ಮಹಿಮನೆ ನಿಗಮಗೋಚರ ಕೃಷ್ಣ
ಖಗವಾಹನ ಕಂಸಾರಿಯೆ ದೇವ
ಹಗಲು ಇರುಳು ನಿನ್ನ ಬಗೆಬಗೆ ಸ್ತುತಿಪರ
ಪಾದಗಳು ಸೇವಿಪ ಪರಮಲಾಭವನು ೪

ಕರೆ ಕರೆಗೊಳಿಸದೆ ಕಡಲಶಯನನೆ ಎನ್ನ
ತೊಡರುಗಳನೆ ಬಿಡಿಸೆಂದು ಮೊರೆ ಇಡುವೆ
ಮಡುವಿನೊಳ್ ಗಜವನುದ್ಧರಿಸಿ ರಕ್ಷಿಸಿದಂಥ
ಕಮಲನಾಭ ವಿಠ್ಠಲನೆ ನಿನ್ನ ಸ್ಮರಣೆ ೫

## ೮೭

ಕರೆ ಕರೆ ಭವದೊಳು ಮುಳುಗಿರುವೆ
ದುರಿತದೂರನೆ ದುಃಖ ತರ ತರ ವ್ಯಥೆಯಲಿ ಪ

ಅಗಣಿತ ಮಹಿಮನೆ ಸುಗುಣಗಳನುದಿನ
ಬಗೆ ಬಗೆ ಸ್ಮರಿಸುವ ಬಗೆ ಮರೆದು
ಹಗಲಿರುಳೆನ್ನದೆ ನಿಗಮವೇದ್ಯನ ನಾಮ
ಬಗೆ ಬಗೆ ಪೊಗಳಿ ಕೊಂಡಾಡಿ ಸ್ತುತಿಸದಲೆ ೧

ಜನುಮ ಜನುಮದಲಿ ಜನಿಸಿ ಬರುವ ದುಃಖ
ಕೊನೆಗಾಣದಾಗಿದೆ ಕರುಣಾನಿಧೆ
ಅನಿಮಿಷರೊಡೆಯ ಶ್ರೀ ಘನ ಮಹಿಮನ ನಾಮ
ಮನದಣಿ ಪೊಗಳಿ ಕೊಂಡಾಡಿ ಸ್ತುತಿಸದಲೆ ೨

ನಾನು ನನ್ನದು ಎಂಬ ಹೀನವೃತ್ತಿಗಳಿಂದ
ಹಾನಿಯಾಯಿತು ಆಯು ಶ್ರೀನಿಧಿಯೆ
ಜ್ಞಾನಿಗಳೊಡನಾಡಿ ಮೌನದಿಂದಿರದಲೆ
ಶ್ವಾನಸೂಕರನಂತೆ ತಿರುಗಿ ಬಾಯ್ಬಿಡುತಲಿ ೩

ಯಾವ ರಾಯರ ದೂತನೋ ಪೇಳಯ್ಯ ಬಲು
ಸಾವಧಾನದಿ ಮಾತನು
ಶ್ರೀರಾಮಚಂದ್ರ ನಿನ್ನ ಸೇರಿ ಮಿತ್ರತ್ವಮಾಡೆ
ಕಾರಣವೇನುಂಟು ಸಾವಧಾನದಿ ಪೇಳು
ಯಾರನುಮತಿಯಿಂದೀ ಪುರ ಪೊಕ್ಕೆಯೊ
ಯಾರಿಗಾಗಿ ಈ ವಾನರ ರೂಪವು
ಪೋರನಂತೆ ಕಾಣುವಿ ನಿನ್ನ ವಚನವು
ಬಾರದು ಮನಕೆಂದೆನಲು ಮಾತಾಡಿದ ೩

ಜನಕ ಜಾತೆಯೆ ಲಾಲಿಸು ದೈತ್ಯರ ಸದೆ
ಬಡಿಯುವನೆಂದು ಭಾವಿಸು
ಇನಕುಲ ತಿಲಕನ ಚರಣಸೇವೆಯು ಮಾಡೆ
ಜಲಜಾಕ್ಷನಾಜ್ಞದಿಂದ ಭುವಿಯೊಳು ವಾನರ–
ಕುಲದೊಳಗವತರಿಸುವ ಶತ ಸಂಖ್ಯೆಯೊಳಿರುತಿರೆ
ಗಿರಿವನಚರಿಸುವ ಸಮಯದಿ
ಜಲಜಾಕ್ಷಿಯನರಸುತ ರಾಘವಬರೆ
ಚರಣಾಂಬುಜಗಳಿಗೆರಗಿದೆವೆಂದೆನಲು ೪

ಜಲಜಾಕ್ಷಿ ನಿಮ್ಮ ಕಾಣದೆ ಮನದೊಳಗೊಂದು
ಘನವಾದ ಚಿಂತೆ ತಾಳಿದೆ
ಜನಕ ಜಾತೆಯ ಪಾದಾಂಬುಜವ ಕಾಣದೆ ಮರಳಿ
ಪುರವ ಸಾರುವದೆಂತು ರವಿಸುತನಾಜ್ಞೆ ಮೀರ–
ಲರಿಯದೆ ಈ ಉಪವನದೊಳಗರಸುವ
ಸಮಯದಿ ಶ್ರೀವರನಿಯಮಿಸಿ ಪೇಳಿದ
ಪರಿಯನು ತಿಳಿಯುತ ಪರಮಾನಂದದಿ
ರಘುವರನ್ವಾರ್ತೆಯ ಲಗುಬಗೆ ಪೇಳಿದ ೫

ಕುರುಹು ಕೊಡಮ್ಮ ಜಾನಕಿ ಮನಸಿನ ಚಿಂತೆ
ಬಿಡುಬೇಗ ಭದ್ರದಾಯಕಿ
ಕ್ಷಣದೊಳ್ ಶ್ರೀರಾಮನೊಳು ಇನಿತೆಲ್ಲವನು ಪೇಳಿ

ಪರಮ ಕೃಪಾಳು ಹರಿ ಪರಮ ಭಕ್ತರನೆಲ್ಲ
ಕರೆದು ಏಕಾಂತದಲಿ ಸರಸವಾಕ್ಯದಲಿ
ಇರಲಿ ಈ ನರನ ವಾಕ್ಯದ ಜಾಣತನವನು
ಸುರ ಲೋಕದವರು ಸ್ತುತಿ ಮಾಡಲೆಂದೆನಲು ೮

ಹೀಗೆ ಭಕ್ತರ ಪೊರೆದೆ ಭಾಗವತ ಜನಪ್ರಿಯ
ಬಾಗಿ ನಮಿಸುತಲಿ ವಂದನೆ ಮಾಡುವೆ
ನಾಗಶಯನನೆ ನಿನ್ನ ಮಹಿಮೆಗೆಣೆಗಾಣೆನೊ
ಬೇಗ ಪಾಲಿಸು ಕಮಲನಾಭ ವಿಠ್ಠಲನೆ ೯

## ೮೭

ಇಷ್ಟಾದರು ದಯಮಾಡು ಪಂಡರಿನಾಥ
ವಿಠ್ಠಲ ನಿನ್ನ ಪಾದ ಮುಟ್ಟಿ ಪ್ರಾರ್ಥಿಪೆನು ಪ

ದಾನಧರ್ಮವು ಮಾಡಬೇಕೆಂದು ಮನವಿರೆ
ದಾನವಾಂತಕ ಕೃಷ್ಣ ಧನವಿಲ್ಲವಯ್ಯ
ಗಾನಲೋಲನೆ ಭಕ್ತಪಾಲ ನಿನ್ನಯ ಪಾದ
ಧ್ಯಾನವ ಮಾಳ್ಪರ ಪಾದಧ್ಯಾನ ಕೊಡಿಸುದೇವ ೧

ತೀರ್ಥಯಾತ್ರೆಗಳಿಂದ ಪಾರ್ಥಸಾರಥಿ ಕೃಷ್ಣ-
ಮೂರ್ತಿ ಸೇವಿಸಲಸಮರ್ಥನಾಗಿರುವೆ
ಮಾತು ಮಾತಿಗೆ ಕೃಷ್ಣಗೋವಿಂದ ಮಾಧವ
ಶ್ರೀಪತಿ ಶ್ರೀಧರ ಸಲಹೆಂಬ ಸ್ಮರಣೆ ೨

ಜ್ಞಾನಿಗಳೊಡನಾಡಿ ಶ್ರೀನಿವಾಸನೆ ನಿನ್ನ
ನಾನಾಲೀಲೆಗಳ ಧ್ಯಾನಿಸಲಿಲ್ಲ ಹರಿಯೆ
ಜ್ಞಾನಿಗಳರಸ ಭಕ್ತರ ಸುರಧೇನು
ಅಜ್ಞಾನಿಗಳಳಿದು ಸುಜ್ಞಾನಜನರ ಸಂಘ ೩

ಕ್ಷಣದಿ ರಕ್ಕಸರನೆಲ್ಲ ನೆಲಸಮ ಮಾಳ್ಪೆನೆಂಬೀ
ಅಣುಗನಿಗಪ್ಪಣೆಯನು ಪಾಲಿಸೆನಲು
ಅನುಮತಿನೀಡಿದ ಅವನಿಜೆಗೊಂದಿಸಿ
ಕ್ಷಣದೊಳು ವನಭಂಗವ ಮಾಡಿದ ನುಡಿ ಕೇ-
ಳಿದ ರಾವಣನ ಪುರವ ಅನಲನಿಗಾಹುತಿ ಇತ್ತ ೬

ಜಯ ಜಯ ಜಯ ಹನುಮಂತ ಜಯ ಜಯ ಬಲವಂತ
ಜಯ ಶ್ರೀರಾಮರ ಪ್ರಿಯದೂತ
ಜಯ ಜಯ ಜಯವೆಂದು ಸನಕಾದಿಗಳು ಪೊಗಳೆ
ಅನಲ ಸಖನ ಸೂನುವನು ಸ್ತೋತ್ರದಿಂದ ಪಾಡೆ
ಕಮಲಜಾದಿ ಸುರಗಣ ತಲೆದೂಗೆ ಶ್ರೀ
ಕಮಲನಾಭ ವಿಠ್ಠಲನನು ಪಾಡುತ
ಅಮಿತ ಪರಾಕ್ರಮವಂತನ ಪೊಗಳುತ
ನಮಿಸಿ ಶ್ರೀರಾಮರ ಗುಣಗಳ ಪೊಗಳುವ ೭

## ೬೫

ಲಾಲಿ ಲಾಲಿ ಹನುಮ ಲಾಲಿ ಬಲಭೀಮ
ಲಾಲಿ ಲಾಲಿ ಮಧ್ವರಾಯ ಗುರುವರ್ಯ ಪ

ತ್ರೇತೆಯಲಿ ರಘುಪತಿಯ ಸೇವೆ ಸಲಿಸಿದವನೆ
ಸೀತೆಯನು ಕಂಡು ರಕ್ಕಸರ ಗೆಲಿದವನೆ
ದೂತರಾವಣಗೆ ನೀತಿಗಳ ಕಲಿಸಿದವನೆ
ಭೀತಿಯಿಲ್ಲದೆ ಲಂಕಾಪುರವ ದಹಿಸಿದವನೆ ೧

ದ್ವಾಪರದಿ ಶ್ರೀ ಕೃಷ್ಣನನು ಪೂಜಿಸಿದವನೆ
ಪಾಪಿ ದುರ್ಯೋಧನಾದಿಗಳ ಗೆಲಿದವನೆ
ಕೋಪದಲಿ ಜರಾಸಂಧನನು ಸೀಳಿದವನೆ
ಶ್ರೀಪತಿಯ ಸೇವೆಯಲಿ ನಿಸ್ಸೀಮನೆನಿಸಿದವನೆ ೨

ಪೂರ್ವಕಾಲದೊಳೊಬ್ಬ ರಾಜಶೇಖರ ತನ್ನ
ಮೋಜಿನಿಂದಲೆ ನಿನ್ನ ಸ್ಮರಣೆ ಮರೆತು
ಮೂರ್ಜಗತ್ಪತಿಯ ಪೂಜಿಸದೆ ಕಾಲವ ಕಳೆಯೆ
ಆ ಜವನ ದೂತರೆಳೆ ತಂದರೈ ಹರಿಯೆ ೨

ಅಂದು ಯಮ ಭಟರುಗಳ ಬಂಧನದೊಳಿರೆ ನೃಪನು
ಚಂದದಿಂ ಪಾಪಕರ್ಮಗಳ ನೋಡೆ
ತುಂಬಿದ ಪಾಪವೆ ಬಹಳವಾಗುತಿರಲು
ಇಂದಿರೇಶನ ಪೂಜೆ ಒಂದೆ ದಿನವೆನಲು ೩

ಘುಡು ಘುಡಿಸಿ ಯಮಧರ್ಮ ಕಡುಕೋಪವ ತಾಳಿ
ಬಿಡದೆ ಇವನಿಗೆ ಶಿಕ್ಷೆ ಕೊಡಿರಿ ಎಂದೆನಲು
ನುಡಿದರಾ ಭಟರುಗಳು ಮೊದಲು ಯಾವದು ಎನಲು
ಮೊದಲು ಪುಣ್ಯವು ಎಂದು ನುಡಿದನಾ ನೃಪನು ೪

ತಕ್ಷಣವೆ ವಿಷ್ಣುದೂತರು ಬಂದು ನೃಪವರನ
ಚಿತ್ತಜನಯ್ಯನಿಹ ಉತ್ತಮ ಸ್ಥಳಕೆ
ಸತ್ಯವಂತರು ಬಹಳ ಕೀರ್ತಿಸುತ ಶ್ರೀಹರಿಯ
ಮತ್ತೆ ವೈಕುಂಠದಲಿ ಮೆರೆಸಿದರು ಕ್ಷಣದಿ ೫

ಒಡನೆ ಪುಣ್ಯವು ಮುಗಿಯೆ ನಡಿ ನರಕಕೆಂದೆನಲು
ಒಡೆದು ಎದೆ ನಡುಗಿ ಕಳವಳಿಸಿ ನೃಪನು
ನುಡಿದ ಹೀಗೆನುತ ಘರ್ಜಿಸುತ ಯಮದೂತರಿಗೆ
ಬಿಡಿರಿ ನಿಮ್ಮಯ ಸತ್ಯ ನಿಜವಲ್ಲವೆನುತ ೬

ನಾರಾಯಣನ ನೋಡಿದವರಿಗೆ ನರಕ ಭಯ
ನಾರದರೆ ಈ ರೀತಿ ಸಾರಿ ಡಂಗುರವ
ಹೀಗೆನಲು ನುಡಿಕೇಳಿ ಸಾರಿ ಪೇಳಿದರಾಗ
ದೇವ ದೇವನೆ ಇದಕೆ ಉಪಾಯವೇನೆನಲು ೭

ಬಂಧನ ಕಳೆಯುತ ಮುಂದೆ ಗತಿಯು ತೋರಿ
ತಂದೆ ವೆಂಕಟೇಶ ವಿಠ್ಠಲ ಭಕುತರ
ಸಂದಣಿ ಪೊರೆಯುವರೆಂಬ ಬಿರುದು ದೇವ ೨

ಆಶಾಪಾಶಗಳಿಗೊಳಗಾಗಿಹ ಮನ-
ದಾಸೆ ಪೂರೈಸುತ ನೀ ಸಲಹೈ ಗುರು
ವಾಸುದೇವ ವಿಠ್ಠಲ ಹರಿ ಭಕುತರ
ದಾಸ್ಯವ ಕೊಟ್ಟು ಉಲ್ಲಾಸ ಒದಗಿಸುತ ೩

ಮೊದಲೆ ನಿನ್ನಯಪಾದ ಹೃದಯದಿ ಭಜಿಸದೆ
ಒದಗಿದ ಪಾಪದಿ ಹೆದರುತಲಿದೆ ಮನ
ಪದುಮಜಾಂಡ ಸೃಜಿಸಿದ ಪರಮಾತ್ಮನಿ-
ಗದ್ಭುತವೇ ಪಾಮರರನು ಪೊರೆವುದು ೪

ಮಣಿದು ಬಿನ್ನೈಸುವೆ ಪವನಮತವ ತೋರಿ
ಬಿನಗು ಬುದ್ಧಿಗಳ ಗಮನಕೆ ತಾರದೆ
ಕಮಲನಾಭ ವಿಠ್ಠಲ ತವ ಕರುಣದಿ
ಮನದ ಕ್ಲೇಶಗಳ ಕಳೆದು ಉದ್ಧರಿಸುತ ೫

## ೮೫

## ಆತ್ಮನಿವೇದನೆ

ಅಪಮೃತ್ಯು ಪರಿಹರಿಸೊ ಶ್ರೀ ವೆಂಕಟೇಶ
ಅಪರಾಧವೆಣಿಸದಲೆ ಉದ್ಧರಿಸೊ ಶ್ರೀಶಾ ಪ

ಅಪರಾಧ ಸಹಸ್ರಗಳ ಮಾಡುತನುದಿನದಿ
ಅಪರಿಮಿತ ಮಹಿಮ ನಿನ್ನನ್ನು ಸ್ಮರಿಸದೆ
ಚಪಲ ಬುದ್ಧಿಗಳಿಂದ ತಪಿಸಿದೆನೊ ಭವದೊಳಗೆ
ಗುಪಿತದಿಂ ಸಲಹಯ್ಯ ಪಿತನೆ ಕೈ ಮುಗಿವೆ ೧

ಮಧ್ವಮತದವರನುದ್ಧರಿಸಿ ಮೆರೆದವನೆ
ಶ್ರದ್ಧೆಯಿಂದಲಿ ಹರಿಯ ಭಜಿಪ ಗುರುವರನೆ
ಮುದ್ದು ಕಮಲನಾಭ ವಿಠ್ಠಲನೊಲಿಸಿದವನೆ
ಶುದ್ಧ ಮೂರುತಿ ಉಡುಪಿ ಕೃಷ್ಣನರ್ಚಿಸಿದವನೆ ೩

## ೬೬

ಲಾಲಿ ಲಾಲಿ ಹನುಮ ಲಾಲಿ ಬಲಭೀಮ
ಲಾಲಿ ಲಾಲಿ ಲಾಲಿ ಗುರು ಮಧ್ವನಾಮ ಪ

ತ್ರೇತೆಯಲಿ ಸಾಗರವ ದಾಟಿ ನಿಮಿಷದಲಿ
ಸೀತೆಗುಂಗರ ಕೊಟ್ಟು ಕುಶಲ ತಿಳಿಸುತಲಿ
ದೂತರಾವಣಗೆ ಶೌರ್‍ಯಗಳ ತೋರುತಲಿ
ಸೀತೆಯ ಕ್ಷೇಮ ರಘುನಾಥಗರುಹುತಲಿ ೧

ದ್ವಾಪರದಿ ಕೃಷ್ಣನಿಗೆ ಪರಮಾಪ್ತನಾಗಿ
ದ್ರೌಪದಿಯ ವಚನವನು ಸಲಿಸಬೇಕಾಗಿ
ಕೋಪದಲಿ ಖಳನ ಸೀಳುತ ತೃಪ್ತನಾಗಿ
ಈ ಪರಿಯಲಿ ಹರಿಗೆ ಅರ್ಪಿಸುತ ಚನ್ನಾಗಿ ೨

ಮಧ್ವಮತವನುದ್ಧರಿಸಬೇಕೆನುತ
ಶ್ರದ್ಧೆಯಲಿ ಕೃಷ್ಣನ್ನ ಸೇವಿಸುತ ಸತತ
ಮುದ್ದು ಕಮಲನಾಭ ವಿಠ್ಠಲನ ಸ್ಮರಿಸುತ್ತ
ಸದ್ಗ್ರಂಥ ರಚಿಸಿ ಬದರಿಯಲಿ ವಾಸಿಸುತ ೩

## ೬೭

ಹನುಮ ಭೀಮ ಮಧ್ವಮುನಿಯೆ ರಕ್ಷಿಸೆನ್ನ
ಅನುದಿನವು ಶ್ರೀ ಹರಿಯ ಸ್ಮರಣೆ ಮರೆಯದಂತೆ ಪ

ತಂದೆ ತಾಯಿ ನೀನೆಂದು ನಂಬಿದೆನೊ
ಬಂಧ ಬಿಡಿಸಿ ಕಾಯೋ ತಂದೆ ಹನುಮವೀರ ೧

ದುರುಳ ದೈತ್ಯನಾದ ಜರೆಯ ಸುತನ ಸೀಳಿ
ಕರುಣಿ ಕೃಷ್ಣನಂಘ್ರಿ ನಿರುತ ಭಜಿಪ ವೀರ ೨

ಸದ್ವೈಷ್ಣವರನೆಲ್ಲ ಉದ್ಧರಿಸಿ ಜಗದಿ
ಮುದ್ದು ಕಮಲನಾಭ ವಿಠ್ಠಲನಂಘ್ರಿ ಭಜಿಪ ೩

## ಭಾರತೀದೇವಿ

### ೬೮

ಭಾರತಾದೇವಿಯರ ಪಾದ
ಚಾರು ಚರಣಕೆರಗುವೆ ಪ

ವಾರಿಜಾಕ್ಷಿ ನಿನ್ನ ಮಹಿಮೆ
ಬಾರಿ ಬಾರಿ ಪೊಗಳುವೆ ಅ.ಪ

ಸುಂದರಾಂಗಿ ಶುಭಕರಾಂಗಿ
ಬಂದು ಎನ್ನ ಪಾಲಿಸು
ಇಂದಿರೇಶನನ್ನು ಸದಾ ಆ-
ನಂದದಿಂದ ಭಜಿಸಲು ೧

ಬಾರಿ ಬಾರಿ ನಿನ್ನ ಸ್ತುತಿಪೆ
ಮಾರುತನರ್ಧಾಂಗಿಯೆ
ಸಾರಿ ಸಾರಿ ಶ್ರೀರಮಣನ
ಸಾರ ಕೃಪೆಯ ಕರುಣಿಸು ೨

ಕರುಣಿಸಮ್ಮ ನಿನ್ನ ಪತಿಯ
ಸ್ಮರಣೆ ನಿರುತ ಮರೆಯದೆ
ಕರುಣಾಕರನೆ ಕಮಲನಾಭ
ವಿಠಲನಂಘ್ರಿ ಧ್ಯಾನವೀಯೆ ೩

ಸಿರಿವೆಂಕಟೇಶನ್ನ ಸ್ಮರಿಸಿ ಬಹು
ಪರಿಯಿಂದ ಪಾಡಿ ಕೊಂಡಾಡಿ ಸ್ತುತಿಸಿ
ಗಿರಿಯ ವೆಂಕಟನನ್ನು ಭಜಿಸಿ ನಮ್ಮ
ಉರಗಾದ್ರಿವಾಸ ವಿಠ್ಠಲದಾಸರೆನಿಸಿ ೨

ಸದ್ವೈಷ್ಣವರ ಸುರಧೇನು ಸರ್ವ
ರುದ್ಧಾರವಾಗಲು ಜನಿಸಿದರಿನ್ನು
ಬುದ್ಧಿ ಶಿಷ್ಯರಿಗೊರೆದರಿನ್ನು ತಂದೆ
ಮುದ್ದು ಮೋಹನ್ನ ವಿಠ್ಠಲದಾಸರನ್ನು ೩

ಸುಂದರ ಮೂರ್ತಿಯ ತಂದು ದುರ್ಗ
ಮಂದಿರದಲಿ ಸ್ಥಾಪಿಸಿದರೊ ಅಂದು
ಛಂದದಿ ಸೇವಿಸಿರೆಂದು ಶಿಷ್ಯ
ಮಂಡಲಿಗಳಿಗೆ ಬೋಧಿಸಿದರೆಂತೆಂದು ೪

ಕಳವಳ ಪಡುತಿಹೆನಲ್ಲ ಕಾಲ
ಕಳೆದು ಹೋಗುತಲಿದೆ ಅರಿವು ಬರಲಿಲ್ಲ
ಪರಮ ಭಕ್ತರ ಪರಿಯನೆಲ್ಲ ತಿಳಿವ
ಕಮಲನಾಭ ವಿಠ್ಠಲನಲ್ಲದಿಲ್ಲ ೫

## ೮೪

ಸ್ಮರಿಸುವರ ಪಾಲಿಪ
ಬಿರುದು ಭಕುತರ ಪೊರೆವ ಕರುಣಿಯೆ

ಪ

ಪರಿಪರಿವಿಧದಲಿ ಪರಿತಪಿಸುವರನು
ಕರವಿಡಿದುದ್ಧರಿಸುತ ಸಂತೈಸುವ
ಉರಗಾದ್ರಿವಾಸ ವಿಠ್ಠಲ ಸಂತೈಸು
ಚರಣಕಮಲಗಳಿಗೆರಗಿ ಬಿನ್ನೈಸುವೆ ೧
ಮಂದಮತಿಯು ನಾನೆಂದು ವಂದಿಪರ

ಬೆಣ್ಣೆ ಕಾಯಿಸಿದ ತುಪ್ಪ ಪಾಯಸ ಹಣ್ಣುಗಳು
ವಿಧ ವಿಧದಲಿರಿಸುತ
ಬೆಣ್ಣೆಗಳ್ಳ ಶ್ರೀ ಕೃಷ್ಣಮೂರ್ತಿಗೆ ಇನ್ನು
ಸಮರ್ಪಿಸುತಿರುವ ಸಮಯದಿ ೧೩

ಉತ್ತತ್ತಿ ಜೇನು ಅಂಜೂರ ಖರ್ಜೂರವು
ಕತ್ತರಿಸಿದ ಕಬ್ಬು ಬಾದಾಮಿಯು
ಮತ್ತೆ ಮಾವಿನ ಬಾಳೆ ಫಲಗಳನು ಹರಿಗೆ ಅರ್ಪಿಸುತ
ಉತ್ತಮ ಗೋಕ್ಷೀರದಧಿಘೃತ ಪಂಚಾಮೃತಗಳ ಅರ್ಪಿಸುತ
ಸುತ್ತ ಹರಿದಾಸರುಗಳೆಲ್ಲರು ಪಾಡಿ ಪೊಗಳ್ವರು ನರ್ತಿಸುತ
ಎತ್ತಿ ಚಾಮರಗಳನು ಪಿಡಿದಿಹರು ಹರುಷದಿ ಕೀರ್ತಿಸುತ
ನೃತ್ಯಗಾಯನದಿಂದ ಶ್ರೀ ಪುರುಷೋತ್ತಮನ
ಕೊಂಡಾಡಿ ಪೊಗಳುತ್ತ
ಸ್ತೋತ್ರಗಳ ಮಾಡುವರ ಸಂಗದೊಳಿದ್ದು ಮೈ
ಮರೆತಿರುವ ಸಮಯದಿ ೧೪

ಧೂಪಾರತಿಯ ಮಾಡಿ ಗೋಪಾಲ ಕೃಷ್ಣಗೆ ಏಕಾರತಿಯ
ಮಾಡಿ ಹರುಷದಲಿ
ಗೋಪಾಲ ಕೃಷ್ಣಗೆ ಮತ್ಸ್ಯಕೂರ್ಮವರಹದಾರತಿಯ
ಭೂಪನರಸಿಂಹಗೆ ವಾಮನ ಭಾರ್ಗವ
ಶ್ರೀರಾಮ ನಾಮದಾರತಿಯ
ಗೋಪಾಂಗನಾಲೋಲ ಶ್ರೀ ಕೃಷ್ಣ ಬುಧ ಕಲ್ಕಿ
ಮೊದಲಾದ ಮಂಗಳಾರತಿಯ
ಗೋಪಿಕುವರಗೆ ಕದಲಾರತಿ ಕುಂಭಾರತಿ ಕರ್ಪೂರದಾರತಿಯ
ಪಾಪಹರನಿಗೆ ತೇರಿನಾರತಿ ನಾನಾಬಗೆ ಮಂಗಳಾರತಿಗಳು
ಶ್ರೀಪತಿಯ ಪ್ರಾರ್ಥಿಸುತ ಬೇಡುತ ಮೌನದಿಂ
ಕುಳಿತಿರುವ ಸಮಯದಿ ೧೫

ಕುಂದ ಮಂದಾರ ಮಂಟಪದ ಮಧ್ಯದಿ ಹೊಸ ಚಂದದ
ತೂಗೊ ಮಂಚವ ರಚಿಸಿ

ಮುತ್ತು ರತ್ನ ಕೆತ್ತಿದ ಗೋಪುರ
ಸುತ್ತ ನಿಲುವು ಕನ್ನಡಿಗಳು ಹೊಳೆಯೆ
ಜತ್ತಾಗಿ ದ್ವಾರಪಾಲಕರು
ಸಿಸ್ತಿಲಿ ನಿಂತಿರಲು ೩

ದ್ವಾರದೆಡಬಲದಲ್ಲಿ ನಿಂತಿಹ
ಶ್ರೀರಮಣನ ವಾಹನಗಜತುರಗ
ಬಾರಿಬಾರಿಗೆ ಹರಿ ಸ್ಮರಣೆಗಳು
ಭೋರಿಡುತಿರುತಿಹವು ४

ಮೇಲಿನ ಕೇರಿಲಿ ಬಾಲರ ತೊಟ್ಟಿಲು
ಹಾಲುಮೊಸರಿನ ಮಂತಣೆಗಳನು
ಲೀಲೆಯಿಂದಲಿ ಪಾಡುತ ಹರಿಗುಣ
ಲಾಲಿ ಪಾಡುವರು ೫

ಕನಕಮಯ ದುಪ್ಪರಿಗೆಯ ಮೇಲೆ
ಮಿನಗುವ ಪಗಡೆ ದಾಳವನಾಡ್ವರು
ಸುಮನಸ ವಂದ್ಯನ ಗುಣಗಳ ಪಾಡುತ
ದಿನಗಳ ಕಳೆಯುವರು ೬

ಆನೆಕುದುರೆ ಒಂಟೆಯ ಸಾಲು
ಮೇನೆ ಪಲ್ಲಕ್ಕಿಯ ಸಂದಣಿಯು
ಶ್ರೀನಿಧಿಯ ಅರಮನೆ ದ್ವಾರದಿ
ಮೌನದಿ ನಿಂತಿಹವೊ ೭

ತಾಳ ಮದ್ದಳೆ ಕೊಂಬು ಕಹಳೆ
ಮೇಳ ವಾದ್ಯಗಳೆಲ್ಲ ಹರಿಯ
ಓಲೈಸುತ ನಿಂತಿಹವು ಆಜ್ಞೆಯ
ಆಲಿಸಿ ಕೇಳುತಲಿ ೮

## ರುದ್ರದೇವರು

### ೬೯

ಯಾರಿಗಾಗಿ ಈ ಪರಿ ವೈರಾಗ್ಯವು
ವೀರ ವೈಷ್ಣವ ಭಕ್ತಾಗ್ರಣಿಯೆ ಪ

ಮಾರಹರನೆ ಮನ್ಮಥನ ವೈರಿಯೆ ಮನ–
ಸಾರ ಶ್ರೀರಾಮ ನಾಮವ ಜಪಿಸುವದಿದು ಅ.ಪ

ಮುತ್ತು ಮಾಣಿಕ್ಯದ ಕಿರೀಟವು ಧರಿಸದೆ
ನೆತ್ತಿಲಿ ಕೆಂಜೆಡೆ ಸುತ್ತಿಹುದು
ಹಸ್ತದಿ ಶಂಖು ಚಕ್ರಗದೆ ಪದುಮವು ಬಿಟ್ಟು
ಉತ್ತಮ ಡಮರು ತ್ರಿಶೂಲ ಪಿಡಿವುದಿದು ೧

ನೊಸಲಲಿ ಕಸ್ತೂರಿ ತಿಲಕವನಿಡದಲೆ
ಭಸುಮವ ಲೇಪಿಸುವುದು ತರವೆ
ಕುಸುಮಲೋಚನೆ ಪ್ರಿಯ ಸಖನಾಗಿರುತಿರೆ
ಎಸೆವ ಕಪಾಲ ಪಿಡಿದು ಬೇಡುವದಿದು ೨

ದುಂಡು ಮುತ್ತಿನ ಹಾರ ಪದಕಗಳಿರುತಿರೆ
ರುಂಡಮಾಲೆಯ ಕೊರಳೊಳು ತರವೆ
ತಂಡ ತಂಡ ಪರಮಾನ್ನ ಭಕ್ಷಗಳಿರೆ
ಉಂಡು ತೇಗದೇ ವಿಷಪಾನ ಮಾಡುವದಿದು ೩

ಭರ್ಜರಿ ಪೀತಾಂಬರ ಉಡುವುದು ಬಿಟ್ಟು
ಕರಿಯ ಚರ್ಮನುಡುವುದು ತರವೆ
ಪರಿ ಪರಿ ರತ್ನಾಭರಣಗಳಿರುತಿರೆ
ಉರಗಗಳಿಂದಲಂಕೃತನಾಗಿರುವದು ೪

ಭೃತ್ಯರು ಸೇವೆಗೆ ಬೇಕಾದವರಿರೆ
ಮತ್ತೆ ಪಿಶಾಚ ಗಣಗಳೇತಕೆ
ಹಸ್ತಿ ತುರಗ ಪಲ್ಲಕ್ಕಿ ಪುಷ್ಪಕವಿರೆ
ಎತ್ತನೇರಿ ಚರಿಸುವುದುಚಿತವೆ ಶಂಭೊ ೫

ತಾಳ ತಂಬೂರಿ ಪಿಡಿದವರ ಗೆಜ್ಜೆ
ತಾಳ ಮೇಳದಿ ನರ್ತಿಸಿ ನಲಿದವರ
ವ್ಯಾಳ ಶಯನನ ಭಕ್ತರಿವರ ಸಂಜೆ
ವೇಳೆ ಹರಿಭಜನೆ ಮಾಡಿ ನಲಿದವರ ೪

ಮಡದಿ ಮಕ್ಕಳು ಬಂಧು ಜನರ ಕೂಡಿ
ಕಡು ಸಂಭ್ರಮದಿ ಹರಿಭಜನೆ ಮಾಡ್ದವರ
ಕಡಲ ಶಯನನ ಭಕ್ತರಿವರು ಭಾಗ್ಯ
ಬಡತನ ಸಮವೆಂದು ತಿಳಿಯ ಹೇಳ್ದವರ ೫

ಹರಿಗುಣ ಕೀರ್ತಿಸಿದವರ ನರ
ಹರಿಯ ಮಹಿಮೆಗಳ ಶಿಷ್ಯರಿಗೊರೆದವರ
ಹರಿಯೆ ಸರ್ವೋತ್ತಮನೆಂದವರ ನಮ್ಮ
ಉರುಗಾದ್ರಿವಾಸ ವಿಠ್ಠಲನ ನಂಬಿದವರ ೬

ಮಮತೆಯ ಬಿಡಬೇಕೆಂದವರ ದೇಹ
ಮಮತೆಯ ಬಿಡುತ ಹರಿಪುರ ಸೇರಿದವರ
ಕಮಲಾಕ್ಷನ ಭಕ್ತರಿವರ ನಮ್ಮ
ಕಮಲನಾಭನ ವಿಠ್ಠಲನ ನಂಬಿದವರ ೭

## ೮೩

ಸ್ಮರಿಸಿ ಬೇಡುವೆ ಗುರುವರರ ಪಾದ–
ಸರಸಿಜ ಸ್ಮರಿಪರಘುಪರಿಹರಿಸುವರ ಪ

ಇಂದಿರೇಶನ ಮಹಿಮೆ ಬಲ್ಲ ಭಕ್ತ
ಸಂದಣಿಯೊಳು ಇವರಿಗೆ ಸಮರಿಲ್ಲ
ತಂದೆ ವೆಂಕಟೇಶ ವಿಠ್ಠಲನೆಂದು
ಸಂಭ್ರಮ ಪಡುವ ಶಿಷ್ಯರಿಗೆಣೆಯಿಲ್ಲ ೧

ಸಿರದಲಿ ಗಂಗೆಯು ಸ್ಥಿರವಾಗಿರುತಿರೆ
ಪರ್ವತರಾಜಕುವರಿಯೇತಕೆ
ಅರಮನೆ ವಾಸಕೆ ಯೋಗ್ಯವಾಗಿರುತಿರೆ
ಗಿರಿ ಕೈಲಾಸ ಪರ್ವತದಿ ವಾಸಿಸುವದು ೬

ಭಕ್ತರು ಭಕುತಿಲಿ ಪಾಡಿ ಕೊಂಡಾಡಲು
ನೃತ್ಯವ ಮಾಡುತ ಹರುಷದಲಿ
ಕರ್ತೃ ಶ್ರೀ ಕಮಲನಾಭ ವಿಠ್ಠಲನೆಂದು
ಪತ್ನಿಗೆ ಉಪದೇಶ ಮಾಡುವದಿದು ೭

## ಪಾರ್ವತಿದೇವಿ

## ೭೦

ಗಿರಿಜೆ ನೀ ಒಲಿಯುವರೇ ಪರಶಿವನು ತಕ್ಕ
ವರನೆಂದು ಮೆರೆಯುವರೆ ಪ

ಪರಮ ವೈಷ್ಣವ ಭಕ್ತಾಗ್ರಣಿಯಾದ ಶಿವನಿಗೆ
ಇರುತಿಹ ಕೊರತೆಗಳರಿಯದೆ ಗರುವದಲಿ ಅ.ಪ

ಮನ್ಮಥನ ವೈರಿಗೆ ವಾಸಕೆ ಯೋಗ್ಯ
ಮನೆಯಿಲ್ಲದಿರುವಾತಗೆ
ಮನೆಯು ಮಶಾಣವೆನ್ನುತ ಪೇಳುತಿಹರಿನ್ನು
ಸುಮನಸರೊಡಯನೆ ಸಖನಂತೆ ಇದು ಕೇಳು
ಮನಸಿನ ಅಭಿಮಾನಿ ಶಿವನು
ಘನತರದ ವಿಷಪಾನಗೈದನು
ಮನದಿ ಶ್ರೀ ರಘುವರನ ಸ್ಮರಿಸುತ
ವೃಷಭ ವಾಹನವೇರಿ ಚರಿಪಗೆ ೧

ರುಂಡಮಾಲೆಯ ಧರಿಸಿದ ಕೊರಳೊಳಗೆ ಸರ್ಪ
ದಂಡೆ ಅಲಂಕರಿಸಿರುವ

ಆರಿಗುಸುರಲೇನು ಮಾಡಿದ
ಕಾರ್ಯವು ಮುಂದಿನ್ನೂ
ಆನಂದಮಯ ವಿಠ್ಠಲದಾಸರ ಕೂಡಿ
ಆದರುಸುವುದಿನ್ನೂ ಮುನ್ನೂ ೪

ಕಮಲನಾಭ ವಿಠ್ಠಲನೊಲುಮೆಯು
ಸುಲಭದಿ ಪಡೆವುದಕೆ
ನಮಿಸಿ ತಂದೆ ವೆಂಕಟೇಶ ವಿಠ್ಠಲ ದಾ–
ಸರಿಗೆ ನಮಿಸಿ ಬೇಡಿ ಅನುದಿನ ಪ್ರಾರ್ಥಿಸುತ ೫

## ೮೨

ಸ್ಮರಿಸಿ ಬದುಕಿರೊ ಗುರುವರರಾ ನರ–
ಹರಿಸ್ಮರಣೆ ಮರೆಯದಲೆ ಕೀರ್ತಿಸಿ ನಲಿದವರ ಪ

ದಾಸದೀಕ್ಷೆಯ ವಹಿಸಿದವರ ಹರಿ
ದಾಸರ ಕೂಡಿ ನರ್ತಿಸಿ ನಲಿದವರ
ಶ್ರೀಶನ ಮಹಿಮೆ ಬಲ್ಲವರ
ಭವ ಪಾಶಗಳಳಿವ ಸನ್ಮಾರ್ಗಬೋಧಕರ ೧

ಬಡತನದಲಿ ಬಳಲಿದವರ ಭಾಗ್ಯ
ಬಿಡದೆ ಬಂದೊದಗೆ ಹಿಗ್ಗದೆ ತಗ್ಗಿದವರ
ಮೃಡಸಖನೊಲುಮೆ ಪಡೆದವರ
ಬಹು ಸಡಗರದಲಿ ಹರಿ ಭಜನೆ ಮಾಡ್ದವರ ೨

ಪಂಕಜಾಕ್ಷನ ಪೊಗಳಿದವರ ತಂದೆ
ವೆಂಕಟೇಶ ವಿಠ್ಠಲ ದಾಸರಿವರ
ಬಿಂಕದಿ ಹರಿಯ ಮರೆತವರ ಗರ್ವ
ಬಿಂಕಗಳಳಿಯ ಸನ್ಮಾರ್ಗಕೆಳದವರ ೩

ಮಂಡೆಯೊಳಗೆ ಚಲುವ ಗಂಗೆಯ ಧರಿಸಿಹ
ಚಂದ್ರಶೇಖರ ಶಿವನೆಂದು ಕರೆಸಿಕೊಂಬ
ಕೆಂಡಗಣ್ಣಿನ ಕ್ರೂರರೂಪನ
ಕಂಡು ಹರುಷದಿ ಹಿಗ್ಗಿ ನಲಿಯುವಿ
ಮಂಡೆಯಲಿ ಕೆಂಜಡೆಯ ಸುತ್ತಿಹ
ಹಿಂಡು ವಿಷ ಸರ್ಪಗಳಲಂಕೃತನಿಗೆ ೨

ಕರಿಚರ್ಮಾಂಬರನುಡುವ ಕೈಯಲ್ಲಿ ಕಪಾಲ
ತಿರಿದುಂಡು ಹರುಷಿಸುವ
ಪರಿ ಪರಿ ದೈತ್ಯ ಪಿಶಾಚಯಕ್ಷರ ಕೂಡಿ
ಚರಿಸುತ್ತ ಕುಣಿಯುತ್ತ ಗೊರವನಂತಿರುತಿಹ
ಪರಮ ವೈರಾಗ್ಯವನು ಧರಿಸಿ
ಫಣೆಯ ಗಣ್ಣನು ಬಳಿದು ಭಸುಮವ
ಚರಿಸುವನು ರುಷಿವರರ ತೆರದಲಿ
ಎಣಿಸಿ ಮಣಿಗಳ ಒಲಿಸಿ ಹರಿಯನು ೩

ರಾಮಮಂತ್ರವ ಜಪಿಸಿ ರಮಣಿಗೆ ದಿವ್ಯ
ರಾಮಚರಿತೆಯ ಬೋಧಿಸಿ
ಕಾಮಹರನು ಕೈಲಾಸಪತಿಯು ಮತ್ತೆ
ಕಾಮದೇವನು ಎಂಬ ನಾಮಸ್ಮರಿಸುವ
ಆ ಮಹಾಗಣಪತಿಯು ಪುತ್ರನು
ವೀರಭಕ್ತನು ಸುತನು ಶಿವನಿಗೆ
ಪ್ರೇಮದಲಿ ಷಣ್ಮುಖನು ಸುತನೆಂ–
ದೀ ಮಹಾಮಹಿಮೆಗಳು ತಿಳಿಯದೆ ೪

ಸುಂದರಾಂಗಿ ನಿನ್ನಯ ಚಲುವಿಕೆಗೆ ತಕ್ಕ
ಚಂದದ ವರನೇ ಕೇಳು
ಮಂದರೋದ್ಧರ ಶ್ರೀ ಮುಕುಂದನ ಭಜಿಸಲು
ಚಂದದ ವರಗಳ ಕುಂದದೆ ಕರುಣಿಪ
ಕಂದುಗೊರಳನು ಶಿವನು ಕಮಲ

ಕಮಲನಾಭ ವಿಠ್ಠಲನು ಪೂಜಿಸಿ
ವಿಮಲಸುಕೀರ್ತಿಯ ಪಡೆದವರ
ಶ್ರಮಜೀವಿಗಳಿಗೆ ದಣಿಸದೆ ಮುಂ-
ದಣಘನ ಸನ್ಮಾರ್ಗವ ಬೋಧಿಪರ
ನವನವ ಲೀಲೆಗಳಿಂದೊಪ್ಪುವ
ಹರಿ ಗುಣಗಳನ್ನು ಕೊಂಡಾಡುವರ
ನಮಿಸಿಬೇಡುವೆ ಉರುಗಾದ್ರಿವಾಸ ವಿ-
ಠ್ಠಲದಾಸರು ಎಂದೆನಿಸುವರ ೩

## ೮೧

ವಂದಿಪೆ ತವ ಪಾದಕೆ ಭವದ
ಬಂಧನ ಕಳೆವುದಕೆ ಪ

ಹಿಂದೆ ಮುಂದೆ ಎಂದೆಂದಿಗು ಎನ್ನಯ
ಕುಂದುಗಳೆಣಿಸದೆ ಕರುಣಿಪುದೆನ್ನುತ ಅ.ಪ

ಅಪರಾಧಿಯು ಎಂದು ತಿಳಿದರು
ಗುಪಿತದಿ ಸಲಹುವದು
ಅಪಮೃತ್ಯುವು ಪರಿಹಾರಕೆ ನಿಮ್ಮಯ
ಉಪದೇಶದ ಮಂತ್ರವೆ ಪರಮೌಷಧಿ ೧

ಕಾಯಕ್ಲೇಶದಿಂದ ಮನಸಿನ
ಹೇಯ ವ್ಯಥೆಗಳಿಂದ
ಕಾಯಜ ಪಿತನಂಘ್ರಿಯ ಸೇವಿಸದಲೆ
ಆಯಾಸದಿ ಮನ ಕಳವಳಗೊಳುತಿದೆ ೨

ದೇಹದಿ ಬಾಂಧವರು ಅವರು
ಆರು ಮಂದಿ ಇಹರು
ಮಾಯಾ ಪಾಶಾದಿ ಬಂಧಕ ಪಡಿಸುತ
ಹಾಯಲೀಸರೊ ಹರಿ ಅಂಘ್ರಿಗಳಲಿ ೩

ನಾಭ ವಿಠ್ಠಲನ ಭಜಿಪ ಸಂತತ
ಮಂದಗಮನೆಯ ಇಂದುಧರನಿಗೆ
ಚಂದದಲಿ ವನಮಾಲೆ ಹಾಕುತ ೫

೭೧

ಬಾರೆ ಪಾರ್ವತಿ ಸಾರೆ ಸುಖವ
ತೋರೆ ನಿನ ದಯವ ಪ

ಬಾರಿ ಬಾರಿಗು ಪ್ರಾರ್ಥಿಸುವೆನೆ
ಸಾರಸಾಕ್ಷಿಯೆ ಸರ್ಪವೇಣಿಯೆ ಅ.ಪ

ದಕ್ಷಕುವರಿಯೆ ಈಕ್ಷಿಸೆನ್ನನು-
ಪೇಕ್ಷೆ ಮಾಡದಲೆ
ಅಕ್ಷಿತ್ರಯನ ಸತಿಯೆ ಭಕ್ತರ
ಕಷ್ಟ ಬಿಡಿಸುತಲಿ
ಸೂಕ್ಷ್ಮ ಮತಿಯನಿತ್ತು ಕೃಷ್ಣನ
ಸ್ತೋತ್ರಗಾನದಲಿ ಅ-
ಪೇಕ್ಷೆಯೊದಗುವ ಮನವ ಪಾಲಿಸು
ರಕ್ಷಿಸೀಗಲೆ ಭಕ್ತವತ್ಸಲೆ ೧

ಮಂದಗಮನೆ ಮತ್ತೊಂದು ಪೇಳುವೆ
ನಂದಿವಾಹನನಾ
ಮುಂದೆ ಸ್ತುತಿಪ ಭಕ್ತವೃಂದ ವಿ-
ದೆಂದು ಪೇಳಿದೆ ನಾ
ಸುಂದರ ಶ್ರೀ ಹರಿಯ ಸೇವೆಗೆ
ಪೊಂದಿಸೆನ್ನ ಮನ
ಚಂದದಿಂದ ಪ್ರಾರ್ಥಿಸುವೆನೆ
ಸುಂದರಾಂಗಿಯೆ ನಿನ್ನನನುದಿನ ೨

ಕಮಲನೇತ್ರೆಯೆ ವಿಮಲ ಸದ್ಗುಣಗುಣಿಯೆ ಪಾರ್ವತಿ
ಕಮಲಸಂಭವ ಭವಸುರಾರ್ಚಿತನ

ಕರುಣದಿ ಸಲಹುವರು ಶಿಷ್ಯರ ಮನ
ವರಿತು ವರಗಳನೀವರು
ವರ ಕಮಲನಾಭವಿಠ್ಠಲನ ಧ್ಯಾನಿಪ
ಉರಗಾದ್ರಿವಾಸ ವಿಠ್ಠಲದಾಸರನೆ ನಂಬು ೭

## ೮೦

ತ್ವರದಿ ಭಜಿಪೆ ನಮ್ಮ ಗುರುಪಾದಾಂಬುಜ
ಕೆರಗುತಲನುದಿನ ಭಕುತಿಯಲಿ ಪ

ನೆರೆನಂಬಿದವರ ಬಿಡದೆ ಪೊರೆವರೆಂಬ
ಉರುತರ ಕೀರ್ತಿಯ ಸ್ಮರಿಸುತಲಿ ಅ.ಪ

ನೊಂದು ಮನದಿ ಭವ ಬಂಧನದಿ ಬಳಲುವ
ಮಂದಿಗಳನು ಉದ್ಧರಿಸುವರ
ಮಂದಮತಿಗಳಾದರು ನಿಂದಿಸದಲೆ
ಮುಂದಕೆ ಕರೆದಾದರಿಸುವರ
ಬಂಧು ಬಳಗ ಸರ್ವಬಾಂಧವರಿವರೆಂದು
ಒಂದೆ ಮನದಿ ಸ್ಮರಿಸುವ ಜನರ
ಕುಂದುಗಳೆಣಿಸದೆ ಕಂದನ ತೆರದೊಳು
ಮುಂದಕೆ ಕರೆದಾದರಿಸುವರ ೧

ಗುಪ್ತದಿಂದ ಶ್ರೀಹರಿನಾಮಾಮೃತ
ತೃಪ್ತಿಲಿ ಪಾನವ ಮಾಡಿಹರ
ನೃತ್ಯಗಾಯನ ಕಲಾನರ್ತನದಿಂ ಪುರು–
ಷೋತ್ತಮನನು ಮೆಚ್ಚಿಸುತಿಹರ
ಸರ್ಪಶಯನ ಸರ್ವೋತ್ತಮನನು
ಸರ್ವತ್ರದಲಿ ಧ್ಯಾನಿಸುತಿಹರ
ಮತ್ತರಾದ ಮನುಜರ ಮನವರಿತು ಉ–
ನ್ಮತ್ತತೆಯನು ಪರಿಹರಿಸುವರ ೨

ಸ್ಮರಿಸುವ ಮತಿ ಹೃ-
ತ್ಕಮಲದೊಳಗೆ ನಿಲಿಸುವಂತೆ
ಮಾಡು ಸದ್ಗತಿ
ಕಮಲನಾಭ ವಿಠ್ಠಲ ಕೊಡುವ
ನೆನುತ ಕೀರುತಿ ೩

## ನದೀಸ್ತೋತ್ರವು

### ೭೨

ಕೃಷ್ಣ ಗೋದಾವರೀ ನಂದಿನೀ ನಳಿನೀ ಹೇಮಾವತಿ
ಹರಿದ್ವತೀ ಕಾವೇರೀ ಕಪಿಲಾ ಸಿಂಧು ಸರಯು
ನೇತ್ರಾವತಿ ಕುಮದ್ವತೀ ಭಾಗೀರಥೀ ಭೋಗವತಿ
ಜಾಹ್ನವೀ ಜಯಮಂಗಲಿ ತ್ರಿಜಗತ್ಪಾವನೀ ವಿಷ್ಣು
ಪಾದೋದ್ಭವೆ ದೇವಿ ಕೃಷ್ಣವೇಣಿ ಅಘನಾಶಿನೀ
ಗಂಗಾ ಯಮುನಾ ತ್ರಿವೇಣೀ ದಕ್ಷಿಣ ಪಿನಾಕಿನೀ
ನರ್ಮದಾ ಸಾವಿತ್ರೀ ಗಾಯತ್ರೀ ಸರಸ್ವತೀ ಸೀತಾ
ಮಾಲತೀ ಚಮಲಾಪಹ ವಾರಾಹೀ ವೈಷ್ಣವೀ ಸುಜ್ಯೋತಿ
ಶಿವಗಂಗಾ ಪಂಚಗಂಗೀ ತ್ರಿಪದಗಾಮಿನೀ ಬ್ರಹ್ಮಪುತ್ರಾ
ತುಂಗಭದ್ರಾ ಭೀಮರಥೀ ಗೋಮತೀ ಶರಾವತೀ
ಸ್ವಾಮಿ ಪುಷ್ಕರಿಣೀ ವರಹ ಪುಷ್ಕರಿಣಿ ಪಾಂಡುತೀರ್ಥ
ಪಾಪನಾಶಿನೀ ಆಕಾಶಗಂಗಾಧವಳ ಗಂಗಾ ಶಾಲ್ಮಲೀ
ಲೋಕಪಾವನೀ ಕುಮಾರ ತೀರ್ಥ ವಿಷ್ಣುತೀರ್ಥ
ನಾರಾಯಣತೀರ್ಥ ಕೌಮೋದಕೀ ಕಪಿಲತೀರ್ಥ
ಅಲಕನಂದ ವರದಾ ಪಶ್ಚಿಮವಾಹಿನೀ ಸಿಂಧು
ನದಿ ಶೋಣನದಿ ಚಂದ್ರಭಾಗ ಅರ್ಕಾವತೀ ಸುವರ್ಣ-
ಮುಖರೀ ಗೋಗರ್ಭ ಶಿಂಶಾಕಾಗಿನೀ ಮಂದಾಕಿನೀ
ಪ್ರಾತಃಕಾಲೇ ಪಠೇನ್ನಿತ್ಯಂ ದುಃಖದಾರಿದ್ರನಾಶನಂ
ಸ್ಮರಾಮಿ ನಿತ್ಯಂ ಭವದುಃಖ ದೂರಾ
ಶ್ರಿ ಕಮಲನಾಭ ವಿಠ್ಠಲೋ ವಿಜಯತೇ ಶುಭಂ

ಉದಯ ಕಾಲದಲಿವರ ಧ್ಯಾನವ ಮಾಡೆ
ಮದಗರ್ವ ಪರಿಹರವು
ಮುದದಿಂದ ಮೂರು ವೇಳೆಗಳಲ್ಲಿ ಸ್ಮರಿಸಲು
ಹೃದಯ ತಾಪವ ಕಳೆವರು ಗುರುವರರು ೧

ದೇಶದೇಶವ ತಿರುಗಿ ತನುಮನಗಳ
ಬೇಸರಗೊಳಿಸಲೇಕೆ
ಪೋಷಿಪ ಗುರುಗಳಪಾದ ನಂಬಿದ ಮೇಲೆ
ವಾಸುದೇವನೆ ನಲಿವ ಮುಂದೊಲಿವ ೨

ವೇದವಾದಿಗಳೆಲ್ಲರೂ ವಾದವ ಮಾಡಿ
ಮಾಧವನನು ಕಾಣಿರೊ
ಮೋದತೀರ್ಥರ ಮತಬೋಧನೆ ಮಾಡುವ
ಸಾಧು ಗುರುಗಳನೆ ಕೂಡು ಸಂಶಯಬಿಡು ೩

ಚಿತ್ತದಿ ಸ್ಮರಿಸುವರು ಹರಿ ಮಹಿಮೆಯ
ಭಕ್ತಿಲಿ ನಲಿಯುವರು
ಚಿತ್ರಗಾಯನ ನೃತ್ಯಗಾನಗಳಿಂ ಪುರು-
ಷೋತ್ತಮನನೊಲಿಸುವರು ಹರುಷಿತರು ೪

ಕತ್ತಲೆ ಮನೆಗಳಲ್ಲಿ ಅಡಗಿಹ ವಸ್ತು
ಲಕ್ಷಪರಿಮಿತಿ ಇದ್ದರು
ಹಸ್ತದಿ ಜ್ಯೋತಿಯನೆತ್ತಿ ತೋರುವ ಪರಿ
ಭಕ್ತರ ಸಲಹುವರು ಗುರುವರರು ೫

ಸರಸೀಜಾಕ್ಷನ ನಾಮವು ಹಗಲಿರುಳು
ಬಿಡದೆ ಧ್ಯಾನಿಸುತಿರ್ಪರು
ಸಿರಿನಾರಾಯಣನನ್ನು ಸ್ಮರಿಸುತ್ತ ಮನದೊಳು
ಪರಮಸಂಭ್ರಮ ಪಡುವರು ಗುರುವರರು ೬

ಕಂತುಪಿತನ ಪಾದ ಚಿಂತನೆ ಮಾಡುವ
ಅಂತರಂಗದ ಭಕ್ತರೊಡನೆ ಮೆರೆವ ದಿವ್ಯ ೧

ಬೆಟ್ಟದೊಡೆಯನ ಪೂಜಿಸಿ ಭಕುತರ ಮನ
ದಿಷ್ಟಗಳನು ಸಲ್ಲಿಸಿ
ಸೃಷ್ಟಿಕರ್ತನ ಗುಣ ಸ್ವಚ್ಛ ತಿಳಿದು ಸರ್ವ
ಕಷ್ಟಗಳ್ಹರಿಸಿ ಸಂತುಷ್ಟಿಪಡಿಸುವಂಥ ೨

ಸರಿಯುಂಟೆ ಧರೆಯೊಳಗೆ ಗುರುಗಳ ಪೋಲ್ವ
ನರರುಂಟೆ ಭುವಿಯೊಳಗೆ
ಸಿರಿ ಉರಗಾದ್ರಿವಸ ವಿಠ್ಠಲದಾಸರ ಕೂಡಿ
ವರಗಳ ಕೊಡುವಂಥ ಪರಮ ಸಾತ್ವಿಕರಾದ ೩

ಪರಮ ಮಂಗಳ ಮೂರ್ತಿಯ ರೂಪವ ಹಗ
ಲಿರುಳು ಧ್ಯಾನವ ಮಾಳ್ಪರ
ಪರಮ ಗುರುಗಳ ಪರಮ ಪ್ರೀತಿಯ ಪಡೆದಂಥ
ಉರಗಾದ್ರಿವಾಸ ವಿಠ್ಠಲದಾಸರೆಂಬಂಥ ೪

ಕರುಣದಿ ಸಲಹುವರು ಭಕ್ತರನೆಲ್ಲ
ಕರೆದು ಬೋಧನೆ ಮಾಳ್ಪರು
ವರ ಕಮಲನಾಭ ವಿಠ್ಠಲನ ಭಜಿಸುತ್ತ
ಸಿರಿ ಶ್ರೀನಿವಾಸನ ನಿರುತ ಪೂಜಿಸುವಂಥ ೫

## ೭೯

ಚಿಂತೆಯಾತಕೆ ಮನವೆ ಗುರುಗಳ ಪಾದ
ಚಿಂತನೆಯನು ಮಾಡದೆ ಪ

ಸಂತತ ಬಿಡದಲೆ ಚಿಂತನೆ ಮಾಳ್ಪರ
ಅಂತರಂಗವ ತಿಳಿವರು ಗುರುವರರು ಅ.ಪ

## ರಾಘವೇಂದ್ರಯತಿ

### ೭೩

ಗುರುರಾಯರ ಮಹಿಮೆ ಕೇಳಿರಿ ನಮ್ಮ
ಗುರುರಾಯರ ಮಹಿಮೆ ಪ

ಪರಮ ಭಕುತಿಯಿಂದ ಸ್ಮರಿಸುವ ಸುಜನರ
ದುರಿತಗಳ್ಹರಿಸಿ ಸದ್ಗತಿ ಪಥವ ತೋರುವ ಅ.ಪ

ಇಂದಿರೇಶನ ಮಹಿಮೆ ಪೊಗಳುವ ಭಕ್ತ
ಸಂದಣಿ ಪೊರೆಯುವರ
ಹಿಂದಿನ ಅಘಗಳನೊಂದೂ ನೋಡದೆ ಶ್ರೀ-
ಮುಕುಂದನ ಭಜಕರ ಸಂಗಡ ನೀಡುವ ದಿವ್ಯ ೧

ದೇಶ ದೇಶದೊಳಿವರ ಮಹಿಮೆಗಳ ಉ-
ಲ್ಲಾಸದಿ ಪೊಗಳುವರ
ದಾಸರೆಂತೆಂದು ಸಂತೋಷದಿ ಸೇವಿಪ
ಮೀಸಲ ಮನದವರ ಪೋಷಿಸುತಿರುವಂಥ ೨

ಹಲವು ಸಾಧನವೇತಕೆ ತನುಮನವ ಶ್ರೀ-
ಹರಿಗೆ ಸಮರ್ಪಿಸಿರಲು
ಕುಲಕೋಟಿ ಪಾವನ ಮಾಳ್ಪ ಶ್ರೀ ಗುರುಗಳ
ಚರಣ ಸೇವಕರೆಂದು ಸಿರಬಾಗಿ ನುತಿಸಿರೊ ೩

ನಿದ್ರೆ ಮಾಡುವ ಬಾಲೆಯ ಕರಗಳಿಗೆ ಶ್ರೀ-
ಮುದ್ರಾಧಾರಣ ಮಾಡಿಹ
ಸಜ್ಜನರಿಗಿವರ ಭಯ ವಜ್ರಕವಚವು ಸತ್ಯ
ಹೃದ್ಗೃಹದಲಿ ರಾಮಭದ್ರ ಮೂರುತಿ ಕಾಂಬ ೪

ಕನಸುಮನಸಿನಲಿವರು ದರ್ಶನವಿತ್ತು
ಸವಿನಯ ತೋರುವರ
ಕನಲಿಕೆ ಕಳೆದು ಶ್ರೀ ಕಮಲನಾಭ ವಿಠ್ಠಲ
ನೊಲುಮೆಯ ಪಡೆದ ಮಂತ್ರಾಲಯ ನಿಲಯ ೫

## ೭೪

ಮಹಿಮೆ ನೋಡಿರೈ ರಾಯರ
ಮಹಿಮೆ ಪಾಡಿರೈ ಪ

ಜಲಜನಾಭನೊಲುಮೆ ಪಡೆದು
ಇಳೆಯೊಳು ಪ್ರಖ್ಯಾತರಾದ ಅ.ಪ

ರಾಘವೇಂದ್ರ ಯತಿಗಳೆಂದು
ಬಾಗಿ ನಮಿಸುವವರ ಮನದ
ರಾಗ ದ್ವೇಷಾದಿಗಳ ಕಳೆದು
ನೀಗಿಸುವರೊ ಭವದ ಬಂಧ ೧

ತಾಳ ತಂಬೂರಿಪಿಡಿದು
ಭೋಗಶಯನನನ್ನು ಭಜಿಸಿ
ಕೂಗಿ ಪಾಡುತಿರಲು ನಲಿದು
ಬೇಗ ಪಾಲಿಸುತಲಿ ನಲಿವ ೨

ದೇಶದೇಶದವರು ಬಹಳ
ಕ್ಲೇಶಪಡುತ ಬರಲು ಅವರ
ಕ್ಲೇಶಗಳನು ಕಳೆದು ಪರಮ ಉ–
ಲ್ಲಾಸ ನೀಡಿ ಪೊರೆಯುವಂಥ ೩

ಸೀತಾಪತಿಯ ಪೂಜಿಸುತಲಿ
ಖ್ಯಾತರಾದ ಯತಿಗಳನ್ನು

ಮಂದಮತಿಗಳಾದ ಜನಕೆ
ಮುಂದೆ ಗತಿಯ ಪಥವ ತೋರಿ
ಬಂಧನಂಗಳನ್ನೆ ತರಿದು
ತಂದೆ ಕಾಯೊ ಇಂದಿರೇಶ ೩

ಬೊಕ್ಕಸದ ದ್ರವ್ಯ ಜನರು
ವೆಚ್ಚಮಾಡುತಿರುಹ ತೆರದಿ
ಮೆಚ್ಚಿ ಬಂದ ಜನರ ಮನದ
ಇಚ್ಛೆ ಪೂರ್ತಿಗೊಳಿಸಿ ಪೊರೆದೆ ೪

ಅಂತರಂಗದೊಳಗೆ ನಿನ್ನ
ಚಿಂತೆ ಮರೆಯದಂತೆ ಕೊಟ್ಟು
ಅಂತರಾತ್ಮ ಕಮಲನಾಭ
ವಿಠ್ಠಲ ಸಂತೈಸಿ ಕಾಯೊ ೫

- ಅಸ್ವತಂತ್ರ ಜೀವಾಂತರ್ಗತ ಶ್ರಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಉರಗಾದ್ರಿವಾಸ ವಿಠ್ಠಲಾಭಿನ್ನ ಶ್ರಿ ಗುರುವಾಸುದೇವ ವಿಠ್ಠಲಾ ಭಿನ್ನ ಶ್ರೀ ತಂದೆ ವೆಂಕಟೇಶ ವಿಠ್ಠಲಾತ್ಮಕ ಶ್ರೀ ಕಮಲನಾಭ ವಿಠ್ಠಲಾಯ: ನಮ:
- ಶ್ರೀ ಕಮಲನಾಭ ವಿಠ್ಠಲ ದಾಸರಾದ ಜೀವೂಬಾಯಿ ಅವರು ರಚಿಸಿದ ಮೊತ್ತ ಮೊದಲ ಹಾಡು.

## ೭೮

ಗುರುಗಳ ನೆರೆ ನಂಬಿರೊ ಪರಿಪಾಲಿಪ
ಗುರುಗಳ ನೆರೆ ನಂಬಿರೊ ಪ

ಪರಿ ಪರಿ ಅಘದೊಳು ತೊಳಲುವ ಮನು
ಜರ ಬವಣೆಗಳರಿತು ಸಜ್ಜನರ ಪಾಲಿಸುವಂಥ ಅ.ಪ

ಚಿಂತೆಯೆಲ್ಲವು ನೀಗಿಸಿ ಮನಸಿಗೆ ಬಹು
ಸಂತೋಷವನು ಸೂಚಿಸಿ

ಪ್ರೀತಿಯಿಂದ ಸೇವಿಸುವರ
ಪಾತಕಗಳ ಕಳೆದು ಪೊರೆವ ೪

ಗಳದಿ ಹೊಳೆವ ತುಳಸಿ ಮಾಲೆ
ಹೊಳೆವ ನಗೆಯ ಮುಖದ ಭಾವ
ಕಮಲನಾಭ ವಿಠ್ಠಲನೊಲಿಸಿ
ಹಲವು ವಿಧದಿ ಪೂಜಿಸುವರು ೫

೭೫

ರಾಘವೇಂದ್ರ ರಾಯರಡಿಗೆ ಬಾಗಿ ನಮಿಸಿರೊ
ನೀಗಿ ಭವದ ಬಂಧದಿಂದ ಮುಕ್ತರಾಗಿರೊ ಪ

ಶಂಕೆಯಿಲ್ಲದೆ ವರಗಳ ಕೊಟ್ಟು ಚಿಂತೆ ಹರಿಸುವರ
ಕಂತುಪಿತನ ಭಕ್ತರಿಗೆ ನಿರಂತರ ಸಂತಸ ನೀಡುವರ
ಪಂಕಜನಾಭನ ಕಿಂಕರರ ಭಯ
ಚಿಂತೆಯ ನೀಗುವರ
ಶಂಖ ಕರ್ನರಿವರೆನ್ನುತ ಅಭಯದ ಕಂಕಣ ಕಟ್ಟಿಹರ ೧

ಹಾಟಕಶ್ಯಪುತ್ರನು ವಿನಯದಿ ಪ್ರಾರ್ಥಿಸಿ ಪೂಜಿಸಿದ
ಮಾಟಮುಖದ ದೇವನ ಪಾದಾಂಬುಜ ಧ್ಯಾನಿಸಿ ಸೇವಿಸಿದ
ಕೋಟಲೆ ಭವದೊಳು ತಾಪವ ಪಡುವರ ಆಪದ ಪರಿಹರಿಸಿ ಭ-
ವಾಟವಿದಾಟಿಸಿ ಪೊರೆದ ಪ್ರಹ್ಲಾದರ ಉಲ್ಲಾಸದಿ ಭಜಿಸಿರಿ ೨

ವ್ಯಾಸರಾಯರೆಂದು ಜಗದಿ ಪ್ರಖ್ಯಾತಿ ಪಡೆದವರ
ದೇಶ ದೇಶದ ಭಕುತರ ಉಲ್ಲಾಸ ಕೊಡುವರ
ಶ್ರೀ ಸುಧೀಂದ್ರಾರ್ಯರ ಪುತ್ರರೆನಿಸಿಕೊಂಬರ
ಕ್ಲೇಶಗಳನೆ ಕಳೆವರೆಂಬ ಕೀರ್ತಿಪಡೆದರ ೩

ಕಂಗೊಳಿಪ ಕೋರೆಯಿಂದ
ಬಂದ ಭದ್ರೆಯ ತೀರದಿ

ತೋರಿದಳಾಗಲೆ ತನ್ನಯ ರಮಣಗೆ
ತೋರದಿರಲು ಮುಂದಿನ ಕಾರ್ಯ
ಭಾರಿ ಆಲೋಚನೆಯ ಮಾಡುತ ಮನದಲಿ
ಸಾರಿದ ತನ್ನ ವ್ಯಾಪಾರದ ಸ್ಥಳಕೆ ೮

ತೆರೆದು ನೋಡಲು ಆ ವಡವೆಯ ಕಾಣದೆ
ಮಿಗೆ ಚಿಂತೆಯು ತಾಳುತ ಮನದಿ
ನಗಧರನ ಬಹು ಬಗೆಯಲಿ ಪೊಗಳುತೆ
ತೆಗೆದ ಅಸ್ಥಿರ ರಾಜ್ಯದಿ ಮನವ ೯

ಕಳವಳ ಪಡುತಲಿ ಆ ಲಲನೆಯ ಸಹಿತದಿ
ತನುಮನ ಧನ ಹರಿಗರ್ಪಿಸುತಾ
ಕ್ಷಣ ಬಿಡದಲೆ ಹರಿ ಚರಣವ ಸ್ಮರಿಸುತ
ಕಮಲನಾಭ ವಿಠ್ಠಲನೆನ್ನುವ ಹರಿ ೧೦

## ೭೭

ಕರುಣದಿಂದ ಕಾಯೊ ಎನ್ನನು
ಉರಗಾದ್ರಿವಾಸ ವಿಠ್ಠಲ ದೇವ ಪ

ತಂದೆ ವೆಂಕಟೇಶ ವಿಠ್ಠಲ
ಬಂದು ಎನ್ನ ಹೃದಯದಲ್ಲಿ
ನಿಂದು ನಾಮ ನುಡಿಸಿ ಪೇಳ್ವ
ಚಂದ ಮನಕೆ ತಂದು ಕೊಡುತ ೧

ವಾಸುದೇವ ನಿನ್ನ ಮಹಿಮೆ
ತೋಷದಿಂದ ಭಜಿಸುವುದಕೆ
ದೋಷಗುಣಗಳನ್ನೆ ಕಳೆದು–
ಲ್ಲಾಸ ಮನಕೆ ಒದಗುವಂತೆ ೨

ಬಂದನು ಮಗನಿಗೆ ಮುಂಜಿಯೆಂದೆನುತಲಿ
ಚಂದದಿಂದಲಿ ಬೇಡಲು ಧಣಿಯ
ಬಂದೆಯಾತಕೆ ನಮ್ಮ ಚಂದದ ಬೀದಿಲಿ
ಹಿಂದಕೆ ತೆರಳೆನೆ ಬಂದನು ಬಾರಿ ಬಾರಿ ೨

ಹರಿಯೆಂದು ತಿಳಿಯದೆ ಜರಿಯುತ ನುಡಿಯಲು
ಮರಳಿ ಮರಳಿ ಯಾಚಿಸೆ ಬಿಡದೆ
ತೆರಳನು ಈ ವೃದ್ಧ ತೆರಳಿಪೆನೆನುತಲಿ
ಸರಸರ ತೆಗೆಯುತ ಸುರಿದನು ನಾಣ್ಯವ ೩

ನೋಡುತ ಶ್ರೀಹರಿ ಗಾಡದಿ ಕೈನೀಡೆ
ನೀಡಿದ ಸವೆದ ರೊಕ್ಕವ ನೋಡೀ
ಗಾಡನೆ ಬಂದು ನಾಯಕನ ಸತಿಯಳನು
ಬೇಡಿದ ಪುಣ್ಯವು ಬಾಹೋದೆನುತಲಿ ೪

ಏನು ನೀಡಲಿ ಎನಗೇನಿಹುದೆನ್ನಲು
ಮಾನಿನಿ ಮೂಗುತಿ ನೀಡೆಂದೆನಲು
ಶ್ರೀನಿಧಿಗರ್ಪಣೆ ಮಾನಿನಿ ಮಾಡಲು
ಜ್ಞಾನಿಗಳರಸನು ಗಾಡ ಹಿಂತಿರುಗುತ ೫

ಗಾಡನೆ ಮೂಗುತಿ ನೀಡುತ ದ್ರವ್ಯವ
ಬೇಡಲು ಬೇಗದಿ ನೀಡುತ ನುಡಿದನು
ನೋಡುತ ವಡವೆಯ ನೀಡಿದ ಭರಣಿಲಿ
ಓಡುತ ಬಂದು ನೋಡಿದ ಸತಿ ಮುಖವಾ ೬

ಮೂಗುತಿ ಎಲ್ಲೆನೆ ಬೇಗದಿ ನಡುಗುತ
ನಾಗವೇಣಿಯು ಪ್ರಾರ್ಥಿಸಿ ಹರಿಯ
ಆಗ ಕುಡಿವೆ ವಿಷವೆನ್ನುತ ಕರದಲಿ
ನಾಗವಿಷದ ಬಟ್ಟಲಿ ಇರಲು ೭

ಚಂದದಿಂದ ಮೆರೆವ ರಾಘ–
ವೇಂದ್ರ ರಾಯರ
ಕೊಂಡಾಡಿ ಪಾಡಿರೊ ಮನಕೆ
ಸಂಭ್ರಮ ನೀಡುವರು
ಪೊಂದಿದ ಪಾಪಗಳೆಲ್ಲವ ನೀಗಿಸಿ
ಚಂದದಿ ಸಲಹುವರು ೪

ಕರುಣದಿಂದ ಭಕ್ತರನೆಲ್ಲ
ಸಲಹುತಿರ್ಪರ
ಕಮಲನಾಭ ವಿಠ್ಠಲನಂಘ್ರಿ
ಭಜನೆ ಮಾಳ್ಪರ
ಕನಕಮಯದ ಮಂಟಪದಲಿ
ಮರೆಯುತಿರ್ಪರ
ಕರೆದು ಪ್ರಾರ್ಥಿಸುವವರ ಮನಕೆ
ಹರುಷ ತೋರ್ಪರ ೫

## ಗುರುಸ್ತುತಿ

### ೭೬

ದಾಸರ ಭಜಿಸುತ ಕ್ಲೇಶವ ಕಳೆಯಿರೊ
ವಾಸುದೇವನ ಭಕ್ತರಾದ ಶ್ರೀಪುರಂದರ ಪ

ಮೀಸಲ ಮನದಲಿ ಕೇಶವನಡಿಗಳ
ಆಸೆಲಿ ಪೂಜಿಪ ದಾಸರೊಳಗೆ ಶ್ರೇಷ್ಠ ಅ.ಪ

ಪುರಂದರ ಗಡದೊಳು ಹಿರಿಯನೆಂದೆನಿಸಿದ
ವರದಪ್ಪನಿಗೆ ವರಕುವರ ನೆಂದೆನಿಸಿದೀ
ಧರೆಯೊಳು ತನಗ್ಯಾರು ಸರಿಯಿಲ್ಲದಂತೆ ಮೆರೆಯೆ
ಸಿರಿಯರಸನು ಶೀಘ್ರದಲಿ ತಾನರಿಯುತ ೧

ನೊಸಲ ಕಸ್ತೂರಿ ತಿಲಕ ರಂಜಿಸುವ ಚಂ–
ಪಕವ ಪೋಲುವ ನಾಸಿಕ
ಎಸೆದು ಶೋಭಿಪ ಮೌಕ್ತಿಕ ಪೋಲುವ ದಂತ
ನಸುನಗುತಿಹ ಹಸನ್ಮುಖ ೬

ಶಶಿಯ ಧರಿಸಿದ ಅಸಮ ಭಕುತನು
ನಿಶಿಹಗಲು ತನ್ನ ಸತಿಗೆ ಬೆಸಸಿದ
ಅತಿಶಯದ ಮಹಿಮೆಯನೆ ಕೇಳುವ
ಮತಿಯ ಕೊಡು ಮನ್ಮಥನ ಪಿತನೆ ೭

ಚಿತ್ತದೊಳಗೆ ನಿನ್ನಯ ಪಾದಾಂಬುಜ
ಭಕ್ತಿಯಿಂದಲಿ ಕಾಂಬುವ
ಭಕ್ತಜನರ ವೃಂದವ ಕರುಣದಿ ಕಾಯ್ವ
ವಿಷ್ಣು ಮೂರುತಿ ಕೇಶವ ೮

ಎತ್ತನೋಡಿದರಿಲ್ಲ ನಿನ್ನ ಸಮ
ಉತ್ತಮರ ಕಾಣುವುದೆ ಮಿಥ್ಯವೊ
ಸತ್ಯವಿದು ಪುರುಷೋತ್ತಮನೆ ಎನ್ನ
ಚಿತ್ತದಲಿ ನಲಿನಲಿದು ಶ್ರೀಶ ೯

ಕಮಲಸಂಭವ ಪಿತನೆ ಪ್ರಾರ್ಥಿಸುವೆ ಶ್ರೀ–
ರಮೆಧರೆಯರಿಂ ಸೇವ್ಯನೆ
ಕ್ಷಣಬಿಡದಲೆ ನಿನ್ನನೆ ಚಿಂತನೆ ಮಾಳ್ಪ
ಸುಜನರಿಗೊಲಿಯುವನೆ ೧೦

ಶ್ರವಣ ಮನನಕೆ ಒಲಿವ ದೇವನೆ
ದಿನದಿನದಿ ನಿನ್ನ ಮಹಿಮೆ ತೋರು ಶ್ರೀ–
ಕಮಲನಾಭ ವಿಠ್ಠಲನೆ ಕರುಣದಿ
ಶ್ರಮವ ಹರಿಸುಸುಧಾಮ ಸಖನೆ ೧೧

ಸಿಂಧು ಶಯನಗೆ ಪೀತಾಂಬರದ್ವಾಸಿಗೆ ಹಾಸುತ್ತ
ಮುಂದೆ ಮುತ್ತಿನ ತಲೆದಿಂಬುಗಳನೆ ಇಟ್ಟು ಹರುಷಿಸುತ
ಮಾಧವಗೆ ಮುತ್ತಿನ ಹೂವಿನ ತಲೆದಿಂಬುಗಳನ್ನೆ ಇಡುತ
ಸುಂದರ ಶ್ರೀರಂಗಗೆ ಶಯ್ಯಾಗಾರ ಶೃಂಗರಿಸಿ
ಇಂದು ಮುಖಿ ಶ್ರೀಭೂದೇವೇರೊಡಗೂಡಿ
ಚಂದದಲಿ ಸೇವೆಗೊಳ್ಳುತ ಬಿಂದು ಮಾಧವ ಶ್ರೀ ಮುಕುಂದನ
ವಂದಿಸುತ ಬೇಡುತಿರುವ ಸಮಯದಿ ೧೬

ಈ ರೀತಿ ಪೂಜೆ ನೈವೇದ್ಯಗಳನು ಬ್ರಹ್ಮದೇವ
ಮಾಡುತ ಅರ್ಪಿಸುತಿರಲು
ಶ್ರೀ ರಮಾದೇವಿ ಸ್ವಹಸ್ತದಿ ಹರಿಗೆ ಅರ್ಪಿಸುತಿರೆ ಮುದದಿಂದ
ಹರಿಯನ್ನು ಪ್ರಾರ್ಥಿಸಿ ಕೀರ್ತನೆ ಗುಣಗಳಿಂದ
ಪರಿಪೂರ್ಣ ಕಾಮಗೆ ದಂಡಪ್ರಣಾಮ ವಂದನೆಗಳಿಂದ
ಪರಮ ಪುರುಷಗೆ ವರ ಮಂಗಳಾರತಿಗಳಿಂದ
ಹರಿಯೆ ರಕ್ಷಿಸು ರಕ್ಷಿಸು ರಕ್ಷಿಸೆನ್ನುತ ಮೊರೆಯ
ಹೊಕ್ಕೆನೊ ದುರಿತದೂರನೆ
ನಿರುತ ಭಕುತರ ಪೊರೆದೆ ಎನುತ ಹರುಷದಲಿ
ಪ್ರಾರ್ಥಿಸುವ ಸಮಯದಿ ೧೭

ರಕ್ಷ ಶಿಕ್ಷಕ ಹರಿಗೆ ಛತ್ರಿಚಾಮರ ದರ್ಪಣ ಸಮಸ್ತ ಸೇವೆಯ
ಮಾಡಿ ಹರುಷದಲಿ
ರಕ್ಷಿಸೆಂದೆನುತಲಿ ನೃತ್ಯಗೀತೆಗಳಿಂದ ಹರಿಯನ್ನು ಸೇವಿಸುತ
ಪಕ್ಷಿವಾಹನ ಪರಮಪುರಷ ಶ್ರೀಹರಿಯೆ ಸಲಹು ಸಲಹೆನುತ
ಅಕ್ಷರೇಢ್ಯನೆ ನಮಿಸಿ ಬೇಡುವೆನು ರಕ್ಷಿಸೆಂದೆನುತ
ಲಕ್ಷ್ಮೀಪತಿ ನೀನೊಲಿದು ಸಲಹಬೇಕೆಂದೆನುತ
ಮೋಕ್ಷದಾತನೆ ಕಮಲನಾಭ ವಿಠ್ಠಲನ
ದಯಕೆ ಪಾತ್ರನಾದೆನು
ಅಕ್ಷಯಫಲಪ್ರದ ರಕ್ಷಿಸೆನ್ನುತ ಪ್ರಾರ್ಥಿಸುತ ಕರ
ಮುಗಿಯುವ ಸಮಯದಿ ೧೮

ಸಾನುರಾಗದಿ ಕೇಳಿ ಸಂತ್ಯೈಪನ್ನಾ್ಯಗೆಂದು
ನಾರದರೆ ನೀವೆ ಈ ಕಾರ್ಯ ಮಾಡಬೇಕೆಂದೆನಲು
ನಾರದರು ಕೇಳಿ ನಸುನಕ್ಕು ನುಡಿದರು ಹೀಗೆ
ನೀವು ಮಾಡಿರುವ ಪ್ರತಿಜ್ಞೆ ಸಾಗಬೇಕಾದರೆ
ಮಾರಮಣನನ ಬೇಡಿಕೊಂಡರೆ ಕಾರ್ಯ
ಸಾನುರಾಗದಿ ನಡೆಸಿಕೊಡುವೆನೆಂದೆನಲು

## ಪದ್ಯ

ಬನ್ನಿರಿ ಗುರುಗಳೆ ನಿಮ್ಮ ದರ್ಶನದಿ
ಧನ್ಯನಾದೆನೆಂದೆನುತಾಗ
ಸನ್ನುತಾಂಗ ಶ್ರೀ ಕೃಷ್ಣನ್ನ ಕಾಣಲು
ಧನ್ಯರು ನಿಮ್ಮ ದರ್ಶನವೆನಗಾಯ್ತು

## ವಚನ

ಹೀಗೆ ಪೇಳಿದ ಗಾಲವರ ವಚನವನ್ನು ಕೇಳಿ
ನಾರದರು ಗಾಲವರ ಸಹಿತ ಅಲ್ಲಿಂದ ಹೊರಟು
ದ್ವಾರಕಾಪುರದ ಮಾರ್ಗವನು ಪಿಡಿದರಾಗ

## ಆರ‍್ಯ

ಹೀಗೆನ್ನುತಲವರಿಬ್ಬರು ಹೊರಟರು
ನಾಗಶಯನನ ನೋಡಲು ಬಯಸಿ
ಆಗ ಆ ಪುರ ಶೃಂಗಾರ ನೋಡುತ
ಬೇಗನೆ ಬರುತಿದ್ದರು ನಾರದರು ನಲಿದು ೧

ದ್ವಾರಕಾಪಟ್ಟಣವನಾಳುವ
ಶ್ರೀ ರಮೇಶನ ನೋಡಲು ತವಕದಿ
ಮಾರಮಣನ ಕೊಂಡಾಡುತ ಹರುಷದಿ
ದ್ವಾರಕೆ ಬರುತಿರಲು ೨

## ೮೯

ದಾಸರ ಮೊರೆ ಲಾಲಿಸೋ ವೆಂಕಟಾಚಲ
ವಾಸ ಬಿನ್ನಪ ಲಾಲಿಸೊ ಪ

ಲೇಸು ಭಕುತಿಯು ಮಾಡದಲೆ ಬಲು
ಘಾಸಿಯಾಗುತ ಮನದಿ ನೊಂದು
ದಾಸನಾಗದೆ ಕ್ಲೇಶಪಟ್ಟೆನೊ
ಈಸುದಿನಗಳ ಕಳೆದೆನೊ ವೃಥಾ ೧

ಎಳೆಯ ತಳಿರು ಪೋಲುವ ನಿನ್ನಯ ಪಾದ–
ಕ್ಕೆರಗದೆನ್ನಯ ಸಿರವು
ದಣಿಯನೋಡದೆ ನಿನ್ನನು ಮಹಾಪಾಪ
ಗಳನೆ ಮಾಡುತ ನೊಂದೆನು ೨

ಅನಿಮಿಷೇಶನೆ ನಿನ್ನ ಮಹಿಮೆಯ
ಕ್ಷಣಬಿಡದೆ ಧ್ಯಾನವನೆ ಮಾಡುವ
ಅನಲಸಖಿತನಯನಿಗೆ ನಮಿಸುವೆ
ಕ್ಷಣ ಬಿಡದೆ ಎನ್ನ ಪೊರೆವ ಕರುಣಿ ೩

ಕಟಿಯ ಕಾಂಚಿಯ ದಾಮವು ನವರತ್ನದ
ಸ್ಫಟಿಕ ಮುತ್ತಿನ ಹಾರವು
ಲಕುಮಿ ಧರಿಸಿದ ವಕ್ಷ ಕೌಸ್ತುಭಹಾರ
ಸ್ಫುಟದಿ ಶೋಭಿಪ ಉರವು ೪

ವಟುವಿನಂದದಿ ಪ್ರಕಟನಾಗುತ
ಕುಟಿಲ ದಿತಿಜರಿಗಖಿಳ ವಿಧ ಸಂ–
ಕಟಗಳನೆ ಸಂಘಟನೆ ಮಾಡುವ
ನಟನ ತೆರ ವಟಪತ್ರಶಾಯಿ ೫

## ೬೧

ಜಯ ಭಾರತೀಶ ಜಯ ಜಯ ಭಾರತೀಶ ಜಯ
ಜಯ ಭಾರತೀಶ ಜಯತು
ಜಯ ರಾಘವಾಂಘ್ರಿಪಾದ ಕಮಲ ಭೃಂಗನೆ ನಮಿಪೆ
ಜಯ ಭಾರತೀಶ ಜಯತು ಪ

ಜಯ ಭಾರತೀಶ ಜಯ
ಜಯ ಭೀಮ ಹನುಮನೆ
ಭಯವ ಪರಿಹರಿಸಿ ಪೊರೆಯೈ
ಜಯ ಮಧ್ವಮುನಿರಾಯ
ಗುರು ಮಧ್ವಮುನಿರಾಯ
ಗುರುವೆ ಪಾಲಿಸು ಜಯ ಜಯ ಅ.ಪ

ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು
ಸೀತೆಗುಂಗುರವನಿತ್ತು
ಮಾತೆಯಾಜ್ಞೆಯ ಕೊಂಡು
ಘಾತಿಸಿದೆ ರಕ್ಕಸರ
ದೂತ ರಾವಣನ ಕಂಡು
ಭೀತಿಯಿಲ್ಲದೆ ಜನಕ-
ಜಾತೆಯಳ ಕಳುಹೆನಲು
ಆತ ಕೋಪದಿಂದಲಿ ತನ್ನ
ದೂತರಿಂದಲಿ ವಾಲ-
ವಗ್ನಿಯಲಿ ದಹಿಸಿರೆನೆ
ಆ ಪುರವ ದಹಿಸಿ ಮೆರೆದೆ ೧

ದ್ವಾಪರದಿ ಶ್ರೀಕೃಷ್ಣನಂಘ್ರಿ ಸೇವಕನಾಗಿ
ಪಾಪಿ ಜರೆಸುತನ ಸೀಳಿ
ದ್ರೌಪದಿಯ ನುಡಿ ಕೇಳಿ

ಪಾಪಿ ಕೀಚಕನನ್ನು
ಕೋಪದಿಂ ಕೊಂದ ಮಹಿಮಾ
ಪಾಪಿ ದುರ್ಯೋಧನಾದಿಗಳ ಸಂಗಡ ಕಾದಿ
ಸೋತು ಓಡಲು ದುರುಳನು
ನೀತಿ ಬಿಡದಲೆ ಗದೆಯ
ಏಟಿನಿಂದವನ ತೊಡೆ
ಘಾತಿಸುತಲವನನಳಿದೆ ೨

ಮಧ್ವಮತದವರನುದ್ಧರಿಸ ಬೇಕೆಂದೆನುತ
ಮಧ್ಯಗೇಹರಲಿ ಜನಿಸಿ
ಶುದ್ಧ ಶಾಸ್ತ್ರಗಳನುದ್ಧರಿಸುತ ಜಗದೊಳಗೆ ಪ್ರ-
ಸಿದ್ಧನೆಂದೆನಿಸಿ ಮೆರೆದೆ
ಮುದ್ದು ಕೃಷ್ಣನ ಪೂಜೆ
ಶ್ರದ್ಧೆ ಬಿಡದಲೆ ಮಾಡಿ
ಉದ್ಧರಿಸಿ ಸಜ್ಜನರನು
ಮುದ್ದು ಕಮಲನಾಭ-
ವಿಠ್ಠಲಗರ್ಪಿತವೆಂದೆ
ಮಧ್ವಮುನಿರಾಯ ಜಯತು ೩

## ೬೨

ಪ್ರಾಣದೇವನೆ ನಿನ್ನ ಧ್ಯಾನಿಸದೆ ಮನದಿ ಬಲು
ಹೀನನಾದೆನೊ ಲೋಕದಿ ಪ

ದಾನವಾರಿಯ ಪಾದ ಧ್ಯಾನಮಾಡುವ ಮುಖ್ಯ-
ಪ್ರಾಣನೀನೆಂದು ಮನಸಾರ ಪೂಜಿಸದೆ ಶ್ರೀ ಅ.ಪ

ಶರಧಿ ಬಂಧಿಸಿ ದಶಶಿರನಳಿದ ಪಾದ
ಸ್ಮರಣೆ ಮಾಡುತಲಿ ನಿತ್ಯ

ಕೆಂಪಿನ ರಾಗುಟಿ ಜಡೆ ಬಂಗಾರವು
ಸಂಪಿಗೆ ಮಲ್ಲಿಗೆ ಸರಗಳ ಮುಡಿದು
ಸೊಂಪಿಲಿ ಶ್ರೀ ಹರಿಯೊಡನಾಡುತ ನಲಿಯುವ
ಸಂತಸ ತೋರಮ್ಮ ೧೧

ಇಂದಿರೆ ಶ್ರೀರಮೆ ಭಾರ್ಗವಿಯೆ
ನಂದತ್ರಯಾ ಸದಾಸುಶೀಲೆ
ಸುಗಂಧಿ ಸುಂದರಿ ಮಂದಗ ಮನೆಯೆ
ಚಂದದಿ ಬಾರಮ್ಮ ೧೨

ಸುತ್ತೆಲ್ಲ ಸುರಸ್ತ್ರೀಯರು ಮುತ್ತಿನ
ಛತ್ರ ಚಾಮರದರ್ಪಣ ಪಿಡಿದು
ನೃತ್ಯಗಾಯನ ಮಾಡುತ ಕರೆವರು
ಸತ್ವರ ಬಾರೆನುತ ೧೩

ಶ್ರಮ ಪರಿಹರಿಸೆನುತಲಿ ಬೇಡುವೆನು
ಮಮತೆಲಿ ಕರಗಳ ಮುಗಿಯುತ ಬೇಡಲು
ಕಮಲನಾಭ ವಿಠ್ಠಲನೊಡನೆ ಶ್ರೀ–
ಕಮಲೆಯು ಬರುತಿಹಳು ೧೪

## ೫೬

ಲಕ್ಷ್ಮೀ ಬಾರಮ್ಮ ಮುತ್ತೈದೆ ಬಾರಮ್ಮ ಪ

ಲಕ್ಷ್ಮೀರಮಣನ ವಕ್ಷಸ್ಥಳದಲಿ
ರಕ್ಷಿತಳಾದೆ ಸುಲಕ್ಷಣ ದೇವಿ ೧

ಗೆಜ್ಜೆಯ ಕಾಲಿನ ನಾದಗಳಿಂದಲಿ
ಸಜ್ಜನರಿಗೆ ನೀ ಅಭಯವ ಕೊಡುತಲಿ ೨

ಇಂದು ಸಿರಿ ಉರುಗಾದ್ರಿವಾಸ ವಿಠ್ಠಲ ಏಳು
ಇಂದಿರಾ ಪತಿ ತಂದೆ ವೆಂಕಟೇಶ ವಿಠ್ಠಲನೆ ೧

ಆನಂದಮಯ ಅಂತರಾತ್ಮ ವಿಠ್ಠಲ ಏಳು
ನವನೀತ ಧರ ತಾಂಡವ ಕೃಷ್ಣ ವಿಠ್ಠಲ ಏಳು
ಜಗವ ಮೋಹಿಪ ಜಯಾಪತಿ ವಿಠ್ಠಲ ಏಳು
ಸಮರ್‍ಯಾರೋ ನಿನಗಿನ್ನು ಶಾಂತೀಶ ವಿಠ್ಠಲ ಏಳಯ್ಯ ೨

ಗಂಗೆಯ ಪಡೆದ ಗಜವರದ ವಿಠ್ಠಲ ಏಳು
ಮಂಗಳ ಮಹಿಮ ಶೇಷಶಯನ ವಿಠ್ಠಲ ಏಳು
ಗರುಡನೇರುತ ಪೊರೆದ ಹರಿ ವಿಠ್ಠಲ ನೀ ಏಳು
ನಿರುತಪೊರೆ ಎಮ್ಮ ಧೃವವರದ ವಿಠ್ಠಲ ಏಳಯ್ಯ ೩

ಪರಿಪಾಲಿಪ ಗುರುವಾಸುದೇವ ವಿಠ್ಠಲ ಏಳು
ವರಪಾಲಿಪ ವರದ ಲಕ್ಷ್ಮೀಶ ವಿಠ್ಠಲ ಏಳು
ಪದ್ಮನಾಭ ಪ್ರದ್ಯುಮ್ನ ವಿಠ್ಠಲ ಏಳು
ಮುದ್ದುಮಖದ ವರದ ವೆಂಕಟೇಶ ವಿಠ್ಠಲನೇ ೪

ಸಜ್ಜನರ ಪ್ರಿಯ ಶ್ರೀ ಸುಜ್ಞಾನ ವಿಠ್ಠಲ ಏಳು
ಶಾಮಸುಂದರ ಕೃಷ್ಣ ಶ್ರೀನಾಥ ವಿಠ್ಠಲ ಏಳು
ಭಯಹಾರಿ ಭಾರತೀಶ ವಿಠ್ಠಲ ನೀ ಏಳು
ಪರಿಸರನೊಡೆಯ ಶ್ರೀ ವರಹ ವಿಠ್ಠಲನೆ ೫

ಜ್ಞಾನನಿಧಿ ಆನಂದಮಯ ವಿಠ್ಠಲ ನೀ ಏಳು
ಸಜ್ಜನ ಪ್ರಿಯ ಶ್ರೀಪ್ರಾಜ್ಞ ವಿಠ್ಠಲ ಏಳು
ಜಗನ್ಮೋಹನ ಜಗದ್ಭರಿತ ವಿಠ್ಠಲ ಏಳು
ವಿಶ್ವಮೂರುತಿ ವಿಜ್ಞಾನಮಯ ವಿಠ್ಠಲನೇ ೬

ವಿಷ್ಣುಮೂರುತಿ ಕ್ರಷ್ಣದ್ವೈಪಾಯನ ವಿಠ್ಠಲ ಏಳು
ಅಕ್ಷರೇಢ್ಯನೆ ಲಕ್ಷ್ಮೀಶ ವಿಠ್ಠಲ ಏಳು

ಕರದಲಿ ಕಂಕಣ ಹಾಸರ ಬಳೆಗಳು
ಬೆರಳಲಿ ಉಂಗುರ ಥಳಥಳಿಸುತಲಿ
ಗರುಡಗಮನ ನೊಡಗೂಡುತ ಬಾ ಬಾ
ಗರುವವು ಮಾಡದಲೆ ೫

ವಂಕಿನಾಗಮುರುಗಿ ಕರದಲಿ
ಬಿಂಕದಿ ಪಿಡಿದಿಹ ತಾವರೆ ಕುಸುಮವು
ಪಂಕಜಾಕ್ಷನೊಡಗೂಡುತ ಮನ
ಶಂಕೆಯು ಮಾಡದಲೆ ೬

ಕಠ್ಠಾಣಿಸರ ಪದಕಗಳ್ಹೊಳೆಯುತ
ಕಟ್ಟಿದ ಉಂಗುರಡ್ಡಿಕಿ ಶೋಭಿಸುತ
ಚಿತ್ತಜನಯ್ಯನನೊಡಗೂಡುತ ಬಾ
ಮತ್ತೆ ಹರುಷದಲಿ ೭

ಥಳಥಳಿಸುವ ಗಲ್ಲಕೆ ಅರಿಶಿನವು
ನಲಿಯುವ ಮೂಗುತಿ ಮುಖಿರ ಬುಲಾಕು
ಹೊಳೆವ ಮೀನು ಬಾವಲಿ ಚಳತುಂಬುಗಳ್ಹೊಳೆಯುತ
ಘಳಿಲನೆ ಬಾರಮ್ಮ ೮

ಕುರುಡಿ ಬಾವಲಿ ಬುಗುಡಿ ಚಂದ್ರ
ಮುರುವಿನ ಕಾಂತಿ ಮುಗುಳ್ನಗೆ ಮುಖವು
ಉರುಗಾದ್ರೀಶನ ಕರಪಿಡಿಯುತ ಬಾ
ಕರೆ ಕರೆ ಮಾಡದಲೆ ೯

ಫಣೆಯಲಿ ಕುಂಕುಮ ಬೈತಲೆ ಬಟ್ಟು
ಥಳಥಳಿಸುವ ಕಣ್ಣಿಗೆ ಕಪ್ಪಿಟ್ಟು
ಎಳೆಬಾಳೆಯ ಸುಳಿಯಂದದಿ ಬಳುಕುತ
ಘಳಿಲನೆ ಬಾರಮ್ಮ ೧೦

ಕಂಟಕಹಾರಿ ಶ್ರೀವೆಂಕಟೇಶ ವಿಠ್ಠಲ ಏಳು
ಸರಸೀಜಾಕ್ಷನೆ ಸಲಹೋ ಶ್ರೀರಮಣ ವಿಠ್ಠಲನೆ ೭

ದುರುಳರ ಮಡುಹಿದ ವರದ ವಿಠ್ಠಲ ಏಳು
ಕಂಜಾಕ್ಷ ಪನ್ನಗಶಯನ ವಿಠ್ಠಲ ಏಳು
ದಾರಿತೋರುವ ದಾಮೋದರ ವಿಠ್ಠಲ ನೀ ಏಳು
ಸರಸಿಜನಾಭನೆ ಪೊರೆ ಎನ್ನ ವಿಠ್ಠಲ ೮

ಕಂಜಾಕ್ಷ ಕಮಲನಾಥ ವಿಠ್ಠಲ ಏಳು
ಮುರಮರ್ದನನೆ ಏಳು ಮುರಳೀಧರ ವಿಠ್ಠಲ
ದಯದಿ ಪಾಲಿಪ ದಯಾನಿಧೆ ವಿಠ್ಠಲ ನೀ ಏಳು
ಅಚ್ಚುತ ಹರಿ ಕೃಷ್ಣ ಕ್ರೇತಜ್ಞ ವಿಠ್ಠಲ ೯

ಜ್ಞಾನಿಗಳರಸ ಆನಂದ ವಿಠ್ಠಲ ಏಳು
ಭಾಗವತಪ್ರಿಯ ಭಾರ್ಗವೀಶ ವಿಠ್ಠಲ ಏಳು
ಕರ್ತೃ ಶ್ರೀ ಪುರುಷೋತ್ತಮ ವಿಠ್ಠಲ ನೀ ಏಳು
ಮುರವೈರಿ ಮಧುರಾನಾಥ ವಿಠ್ಠಲನೆ ೧೦

ರಮೆಯರಸನೆ ರಮಾಧವ ವಿಠ್ಠಲ ನೀ ಏಳು
ಕರುಣಾಳು ಹರಿ ಕಾರುಣ್ಯ ವಿಠ್ಠಲ ಏಳು
ಎದುರಿಲ್ಲ ನಿನಗೆ ಯದುಪತಿ ನೀ ಏಳು
ಉದ್ಧರಿಸೆನ್ನ ಉದ್ಧವ ವರದ ವಿಠ್ಠಲನೆ ೧೧

ಗೋಪಿಕಾಲೋಲ ಗೋಪೀನಾಥ ವಿಠ್ಠಲ ಏಳು
ವೆಂಕಟೇಶ ವೈಕುಂಠಪತಿ ವಿಠ್ಠಲ ಏಳು
ಶ್ರೀನಿಕೇತನ ಶ್ರೀಕಾಂತ ವಿಠ್ಠಲ ಏಳು
ಧನ್ಯನಾದೆನೋ ದೇವ ಧನ್ವಂತ್ರಿವಿಠ್ಠಲ ೧೨

ಶ್ರೀಧರ ಪೊರೆ ವೇದವತೀಶ ವಿಠ್ಠಲ ಏಳು
ಸಾಧುಗಳರಸನೆ ಭಕ್ತವತ್ಸಲ ಏಳು
ಮೇಧಿನಿಯೊಳು ನಿನ್ನ ಪೋಲುವರ್ಯಾರಿಲ್ಲ
ಸಾದರದಿಂ ಕೇಳೋ ನೀ ಎನ್ನಸೊಲ್ಲ ೧೩

ರನ್ನ ಮಂಟಪದೊಳಗೆ ಚಿನ್ನದ ತೊಟ್ಟಿಲೊಳು
ಕನ್ನೆಯರು ತೂಗಿ ಪಾಡಿದರೊ ಗೋವಿಂದ
ಕರುಣಾಸಾಗರ ಕೃಷ್ಣ ಕಡು ನಿದ್ರೆ ಸಾಕೆಂದು
ಕಮಲಾಕ್ಷಿ ಸ್ತುತಿಸುವಳು ಕಮಲನಾಭವಿಠ್ಠಲ
ಏಳಯ್ಯ ಬೆಳಗಾಯಿತು ೧೪

## ೪೩

ಶ್ರೀಪುರುಷೋತ್ತಮ ಪಾಹಿ ಜಯಜಯಮು-
ರಾರೆ ನರಹರೆ ಸುರದೊರೆ ಪ

ಸಾರಸನಯನ ಶ್ರೀ ಮುಕುಂದ ಹರೆ ಶ್ರಿತಜನರಕ್ಷಕ
ಭಾನುಕೋಟಿ ಕಾಂತಿಸುಂದರ ಪ್ರಭೋ ನಮಿತ ಚರಣ
ಕಾಮಜನಕ ಕಮಲವದನ
ಶ್ರೀಮುಕುಂದ ಗರುಡಗಮನ
ಉರಗಶಯನ ನಮಿಪೆನಿನ್ನ
ಸುರರೊಡೆಯನೆ ತ್ವರದಿ ಬಾ ೧

ಚಂದದಿ ನಮಿಪೆ ಸುಂದರಾನನ ಮುನಿಹೃದಯಸದನ
ಇಂದಿರಾ ರಮಣ ಮುರಮರ್ಧನ ಚಂದ್ರವದನ
ಮಂದರಗಿರಿ ಎತ್ತಿದ ಬಲು
ಚಂದದಿಂದ ಸುರರ ಪೊರೆದ
ವಂದಿಪೆ ಗೋವಿಂದ ನಿನ್ನ
ಚಂದ ಪಾದಕ್ಕೆರಗಿ ನಮಿಪೆ ೨

ಕಮಲಾಂಬಿಕೆ ಪಿಡಿದಿಹ
ಕಮಲಪುಷ್ಪಮಾಲೆಯು ಹರುಷದಿ ಶ್ರೀ–
ಕಮಲನಾಭ ವಿಠ್ಠಲಗರ್ಪಿಸುತಲಿ
ಕಮಲ ಪತ್ರದಳಾಕ್ಷಗೆ ನಮಿಸಿ ಸ್ವ–
ರಮಣನ ಕರುಣಕೆ ಪಾತ್ರಳೆ ಸುಂದರಿ ೩

## ೫೫

ಲಕ್ಷ್ಮೀದೇವಿ ಕಮಲಾಕ್ಷಿ ತಾಯೆ
ಸೂಕ್ಷ್ಮಮತಿಯನಿತ್ತು ಪೊರೆದು ರಕ್ಷಿಪದೇವಿ ಪ

ಹರಿಯರಾಣಿ ಭುಜಗವೇಣಿ
ಪರಿಪರಿಯ ಕ್ಲೇಶಗಳಳಿವ
ದುರಿತದೂರನ ಕರಪಿಡಿಯುತ ಬಾ
ಪರಿ ಪರಿ ವೈಭವದಿ ೧

ವಂದಿಸುವೆ ನಿನ್ನ ಪದಕೆ
ಅಂಬುಜಾಕ್ಷಿ ಕರುಣವ ಮಾಡಿ
ಕಂಬು ಕಂಧರನೊಡಗೂಡುತ ಬಾ
ಸಂಭ್ರಮ ಸೂಸುತಲಿ ೨

ಗೆಜ್ಜೆ ಪೈಜನಿ ಪಾಡಗರುಳಿಯು
ಸಜ್ಜಾಗಿಹ ಕಾಲುಂಗುರ ಧ್ವನಿಯ
ಮೂರ್ಜಗದೊಡೆಯನ ಕರಪಿಡಿಯುತ ಬಾ
ಸಜ್ಜನ ರಕ್ಷಕಳೆ ೩

ನಡುವಿಗೆ ನವರತ್ನದ ಪಟ್ಟಿ
ಬಿಡಿಮುತ್ತುಗಳುದುರುವ ಪೀತಾಂಬರ
ಒಡನಡು ಬಳುಕುತ ಅಡಿ ಇಡು ಬಾ ನಿ–
ನ್ನೊಡೆಯನ ಕೂಡುತಲಿ ೪

ಕಾಮಿನಿ ರೂಪವ ಪ್ರೇಮದಿಂದಲಿ ನೀ ತಾಳುತಲಿ
ಕಾಮಜನಕನೆಂದರಿಯದೆ ಭ್ರಾಮಕರಾಗಿರಲು
ಕಾಳಿಫಣಿಯ ತುಳಿದು ಹರಿಯು
ಅಸುರರಟ್ಟಿ ಸದೆದು ನೂಕಿ
ಕಂಸ ಮರ್ಧನ ಕಮಲನಾಭ
ವಿಠ್ಠಲ ವಸುಧೆಯೊಳಗೆ ಮೆರೆದ ೩

## ೪೪

ಶ್ರೀಶ ಶ್ರೀಹಯವದನ ಮೂರ್ತಿಗೊಂದಿಸುವೆ
ಸಾಸಿರ ನಾಮದ ಒಡೆಯನೀನೆಂದು ಪ

ನಿನ್ನ ನೋಡುವ ಇಚ್ಛೆಯಿಂದ ನಿನ್ನದಾಸರು
ಇನ್ನು ಗಾವುದ ದೂರದಿಂದ ಬರುತಿಹರು
ನಿನ್ನ ಭಕ್ತರ ಕೂಡಿ ನಿನ್ನ ಸೇವೆಯ ಮಾಡಿ
ನಿನ್ನ ದರುಶನದಿಂದ ಧನ್ಯರಾಗುವರು ೧

ಹರಿದಾಸರೆಲ್ಲರೂ ಪರಮಸಂಭ್ರಮದಿಂದ
ಹರಿದಿನದ ಜಾಗರ ಹರಿ ಸ್ಮರಣೆಯಿಂದ
ಪರಮ ವೈಭವದಿ ತನ್ನ ಸ್ಮರಿಸುತಿಹ ಸುಜನರನು
ಕರುಣದಿಂದಲಿ ಕಾವ ಸಿರಿರಮಣನೆಂತೆಂದು ೨

ಆಪತ್ತು ತಾಪತ್ರಯಂಗಳೆಲ್ಲವು ನೀಗಿ
ಶ್ರೀಪತಿಯೆ ರಕ್ಷಿಸು ರಕ್ಷಿಸೆಂದೆನುತ
ಗೋಪತೀ ಕೃಷ್ಣನ್ನಪಾಡಿ ಪೊಗಳುವರನ್ನು
ಕಾಪಾಡುವನು ಸಕಲಪಾಪಗಳ ಹರಿಸಿ ೩

ಸೋದೆಯಲಿ ನೆಲೆಸಿರುವ ವಾದಿರಾಜರಿಗೊಲಿದು
ಆದರದಿ ಅವರಿತ್ತ ಸೇವೆ ಕೈಗೊಂಡು
ಶೋಭ ಕೃತುನಾಮ ಸಂವತ್ಸರದಿ ಸುಜನರಿಗೆ
ಶೋಭನಂಗಳನಿತ್ತು ನೀದಯದಿ ಪೊರೆವೆ ೪

## ೫೪

ರಕ್ಷಿಸೆವರ ಮಹಲಕ್ಷ್ಮೀ
ಅಕ್ಷಯಗುಣಪೂರ್ಣೆ ಪ

ಪಕ್ಷಿವಾಹನನ ವಕ್ಷಸ್ಥಳದಿ
ರಕ್ಷಿತಳಾದೆ ಸುಲಕ್ಷಣದೇವಿ ಅ.ಪ

ನಿಗಮವೇದ್ಯನ ಗುಣಗಳ ಪೊಗಳುತಲಿ
ಮಿಗೆ ಸಂತೋಷದಲಿ
ಅಗಣಿತಾಶ್ಚರ್ಯನ ಕೊಂಡಾಡುತಲಿ
ಬಗೆ ಬಗೆ ರೂಪದಲಿ
ಖಗವರ ವಾಹನ ನಗಧರನಿಗೆ ಪ-
ನ್ನಗ ವೇಣಿಯು ಬಗೆ ಬಗೆಯಿಂದರ್ಚಿಸಿ
ಹಗಲಿರುಳೆಡೆ ಬಿಡದಲೆ ಹರಿಯನು ಬಹು
ಬಗೆಯಲಿ ಸೇವಿಪಭಾಗ್ಯದ ನಿಧಿಯೆ ೧

ಇಂದಿರೆ ಶ್ರೀ ಭೂದುರ್ಗಾಂಭ್ರಣಿಯೇ ಸು-
ಗಂಧ ಸುಂದರಿಯೆ
ಇಂದು ಶೇಖರ ಮೋಹಿಪ ಮೋಹಿನಿಯ
ಸುಂದರವನೆ ಕಂಡು
ಚಂದಿರಮುಖಿ ಮುದದಿಂದಲಿ ಶ್ರೀಗೋ-
ವಿಂದನು ತಾಳಿದ ಮೋಹಿನಿ ರೂಪವ
ನೆಂದು ಮನದಿ ಆನಂದ ಪಡಲು ಸುರ
ವೃಂದವ ಸ್ತುತಿಸೆ ಮುಕುಂದನ ರಮಣಿಯೆ ೨

ಕಮಲಾನನೆ ಕಮಲಾಲಯೆ ಕಮಲಾಕ್ಷಿ
ಕಮಲೋದ್ಭವೆ ಕಮಲೆ
ಕಮಲಾಸನ ಪಿತನ ಸತಿಯೆ ಭಾರ್ಗವಿಯೆ

ಕಡು ಹರುಷದಿಂದಿತ್ತ ಕಡಲೆ ಹೂರಣ ಸವಿದು
ದೃಢ ಭಕ್ತರನು ಪೊರೆದೆ ಕಡುಹರುಷದಿ
ಮೃಡನ ಸಖ ನಿನ್ನಂಘ್ರಿ ಬಿಡದೆ ಧ್ಯಾನಿಪ ಭಾಗ್ಯ
ತಡೆಯದಲೆ ಪಾಲಿಸೈ ಕಮಲನಾಭ ವಿಠ್ಠಲ ೫

೪೫

ಸಚ್ಚಿದಾನಂದಾತ್ಮ ಶ್ರೀಪುರುಷೋತ್ತಮ ಶ್ರೀ ಮಾಧವ ಶೌರೇ
ಸತ್ಯ ಸಂಕಲ್ಪ ಸರ್ವೇಶಾ ಸತ್ಯ ಭಾಮೆ ರುಕ್ಮಿಣೇಶ ಪ

ಸಾರಸಾಕ್ಷನೆ ಪರಿವಾರ ರಕ್ಷನೆ ಕಮ–
ಲಾಯತಾಕ್ಷ ನಿರುಪಮ ಚರಿತಾ ಶುಭಗುಣ
ಭರಿತಾ ಸುರಮುನಿ ನಮಿತಶ್ರೀ ಅ.ಪ

ಕರುಣಾಕರಸುಂದರ ಶ್ರೀರಂಗಾ ಶರಣಾಗತ
ವತ್ಸಲ ಭವಭಂಗ
ನಿರುತದಲೀ ಸ್ಮರಿಸುವರ ಕರುಣದಲೀ
ತ್ವರಿತದಿ ಸಲಹುವ ೧

ಬಾ ಯದುವರ ಬಾ ರಘುವರ ಬಾ
ನಗಧರ ಬಾ ಬಾ ಬಾ
ಬಾ ಭವಹರ ಬಾ ಮುರಹರ ಬಾ
ಸಿರಿವರ ಬಾ ಶ್ರೀಶಾ ೨

ಶ್ರೀಶನೆ ಬಾ ಬಾ ಬಾ ಕೇಶವ ಬಾ ಬಾ ಬಾ
ಭೂಸುರ ಪಾಲ
ಬಾ ಮುರಳಿಧರಾ ಸುರನುತ ಶ್ರೀ
ಕಮಲನಾಭ ವಿಠ್ಠಲ ನರಹರಿ ೩

ಹರಿಯರಾಣಿ ನಿನಗೆ ದಿವ್ಯ
ಹರಿದ್ರಾಕುಂಕುಮಾಕ್ಷತೆಗಳಿಂದ
ವರ ಕಲ್ಹಾರ ಪೂವ್ಗಳಿಂದಲಿ
ಸುರಗಿ ಶಾವಂತಿಗಿ ತುರುಬಿಗೆ ಮುಡಿಸುವೆ ೬

ಎಣ್ಣೂರಿಗೆ ಹೋಳಿಗೆಯು ಕಡಬು
ಸಣ್ಣನಕ್ಕಿ ಶಾಲ್ಯನ್ನಗಳು
ಇನ್ನು ಬಗೆ ಬಗೆಯ ಭಕ್ಷಂಗಳನೂ
ಸ್ವರ್ಣ ಪಾತ್ರೆಗಳಲ್ಲಿ ಇರಿಸುತ ನಲಿವರು ೭

ಕ್ಷೀರ ಘೃತದಧ್ಯಾನ್ನ ಮಂಡಿಗೆ
ಶಾವಿಗೆ ಪರಮಾನ್ನಗಳನು
ಶ್ರೀರಮೇಶನಿಗರ್ಪಿಸೆನುತ
ಬೇಡುವೆ ಪಾಡುವೆ ಕೊಂಡಾಡುತ ನಲಿಯುವೆ ೮

ಮುದ್ದು ಮಹಾಲಕ್ಷ್ಮಿ ನಿನಗೆ
ಇಡಲಿ ದೋಸೆಗಳ ಸಹಿತ
ಪದ್ಮನಾಭನಿಗರ್ಪಿಸೆನುತ
ಶ್ರದ್ಧೆಯಿಂ ನಮಿಸುತ್ತಾ ಬೇಡುತಲಿರುವರು ೯

ಗಂಗಾಜನಕ ನರಸಿ ನಿನಗೆ
ಮಂಗಳಾರುತಿಗಳ ಮಾಡಿ
ಹಿಂಗಿಸುವೆ ಪಾಪಗಳೆನುತಾ
ವಂದಿಸಿ ಸಾಷ್ಟಾಂಗದಿಂ ಚಂದದಿ ಪ್ರಾರ್ಥಿಪೆ ೧೦

ಕರ್ಪೂರದ ಅಡಿಕೆ ವೀಳ್ಯ
ಅರ್ಪಿಸುತಲಿ ನಿನ್ನ ಪೂಜಿಸಿ
ಮುಪ್ಪುರಾಂತಕ ಕಮಲನಾಭ
ವಿಠ್ಠಲ ವಿಠ್ಠಲ ವಿಠ್ಠಲನರಸಿಯೆ ೧೧

## ೪೬

ಹರಿ ಮಂದಿರ ಹರಿ ಮಂದಿರ ಈ ಸ್ಥಳವು
ಹರುಷದಿ ಚಿಂತಿಪರಿಗೆ ಪ

ಹರಿ ಹರ ಬ್ರಹ್ಮಾದಿಗಳು ಪೊಗಳುತಿರೆ
ಸುರಮುನಿ ನಾರದ ಋಷಿಗಳು ಸ್ತುತಿಸಲು
ಸುರರು ಪುಷ್ಪ ವೃಷ್ಟಿಯ ಕರೆಯಲು ಅ–
ಪ್ಸರ ಸ್ತ್ರೀಯರು ನರ್ತನ ಮಾಡುವ ಸ್ಥಳ ಅ.ಪ

ಸಿರಿ ನಾರಾಯಣ ಶೇಷಶಯನದಲಿ
ಶಯನಿಸಿ ನಿದ್ರಿಸುತಿರೆ
ಸಿರಿ ಭೂದುರ್ಗಾಂಬ್ರಣಿಯರು ಸೇವಿಸಲು
ನಾಭಿ ಕಮಲದಲಿ
ಸರಸಿಜೋದ್ಭವ ಸ್ತುತಿಸುತ ಧ್ಯಾನಿಸಲು
ಕರಜೋಡಿಸಿ ಸುಜನರು ನಮೋ ನಮೋ ಎನೆ
ಭರದಿ ಜಾಗಟೆ ಭೇರಿ ತಾಳ ತುತ್ತೂರಿಯು
ಕರದಿ ಶಂಖ ಗಂಟೆ ನಾದ ಮೊಳಗೆ ಹರಿ
ಭಜನೆ ಮಾಡುತ ತದ್ಧಿಮಿಕೆನ್ನುವ ಸ್ಥಳ ೧

ಹರಿ ವೈಕುಂಠದಿ ಸಿರಿಯೊಡಗೂಡಿರಲು
ಭೃಗುಮುನಿ ತಾಡನದಿ
ಸಿರಿದೇವಿ ಕೋಪಿಸಿ ಹರಿಯನು ಬಿಡಲು
ಸಿರಿ ಇಲ್ಲದೆ ಒಬ್ಬನೆ ಇರಲಾಗದೆ ವೆಂಕಟಗಿರಿಗಿಳಿತರಲು
ಸರಸಿಜಾಕ್ಷ ಕರಿಬೇಟೆಯ ನಾಡುತ
ಬರುತ ಪದ್ಮಾವತಿಯನು ಮೋಹಿಸಿ
ಕೊರವಿ ರೂಪ ತಾಳುತ ಕಣಿ ಹೇಳಲು
ಭರದಿ ಕಲ್ಯಾಣವು ನಡಸಿದ ಸ್ಥಳವಿದು ೨

## ೫೩

ಬಾರೆ ಶ್ರೀ ಮಹಾಲಕ್ಷ್ಮಿದೇವಿಯೆ ಬೇಡುತಿರ್ಪೆವು ಪ

ಸಾರಸಾಕ್ಷಿಯೆ ಸರ್ಪವೇಣಿಯೆ
ನಾರಿಯೆ ವೈಯ್ಯಾರಿಯೆ ಶ್ರೀಹರಿ ಸಹಿತದಿ ಅ.ಪ

ಯಜ್ಞನಾಮಕ ಹರಿಯ ರಾಣಿ
ಯಜ್ಞ ಇಂದಿರಾ ಹಿರಣ್ಯ ಹರಿಣಿ
ಸುಜ್ಞರಾದ ಜನರ ಪೊರೆವೆ
ಸತ್ಯಾಶ್ರಿ ನಿತ್ಯಾಶ್ರೀ ಸುಗಂಧಿ ಸುಂದರಿ ೧

ಪ್ರಾಜ್ಞಸುಖಾ ಸುಗಂಧಿ ಸುಂದರಿ
ವಿದ್ಯಾ ಶ್ರೀ ಸುಶೀಲದೇವಿ
ಸುಜ್ಞರಾದ ಜನರೊಳಿರಿಸು
ತಕ್ಷಣ ಈಕ್ಷಿಸು ಸುಲಕ್ಷಣ ದೇವಿಯೆ ೨

ಶಾಂತಿ ಮಾಯೆ ಕೃತಿಯೆ ಇಂದಿರೆ
ಶಾಂತಚಿತ್ತದಿ ಧ್ಯಾನಿಸುವರಾ ನಿ-
ರಂತರದಿ ಪೊರೆವೆ ಜಯ
ಮಂಗಳೆ ಉತ್ತುಂಗಳೆ ಶೃಂಗಾರ ರೂಪಳೆ ೩

ನಗುತ ನಗುತ ಬಾರೆ ಬೇಗ
ನಗಧರನ ಸನ್ನಿಧಿಗೆ ಈಗ
ಖಗವಾಹನನ ಮಡದಿ ನಿನ್ನ
ಅಡಿಗಳ ಪೂಜಿಪೆ ಸಡಗರದಿಂದಲಿ ೪

ಪರಿಮಳೋದಕದಿಂದ ನಿನ್ನ
ಚರಣಗಳನು ತೊಳೆದು ದಿವ್ಯ
ವರಮಣಿಯ ಪೀಠದಲಿ ಕೂಡಿಸಿ
ಪರಿಪರಿ ಪುಷ್ಪದಿ ಪೂಜಿಸಿ ನಲಿಯುವೆ ೫

ಸುರರು ಅಸುರರು ಶರಧಿಯ ಮಥಿಸಿರಲು
ಅಮೃತವನೆ ಕಂಡು
ಓರಿ ಓರಿ ಓಗ್ಗುತ ನುಗ್ಗೆ ದಾನವರು
ಶ್ರೀ ಹರಿ ತಿಳಿದು ತ್ವರದಿಂದ ಮೋಹಿನಿರೂಪ ತಾಳಿ
ಬಿರಿಬಿರಿ ನೋಡುತಲಿರೆ ದಾನವರು
ಸುರರಿಗೆ ಅಮೃತವನುಣಿಸುತ ಮೋಹಿನಿ
ಪರವಶದಲಿ ಮೈ ಮರತಿರೆ ಅಸುರರು
ಸುರರಿಗೆ ಅಭಯವ ನೀಡಿದ ಸ್ಥಳವಿದು ೩

ವಿಶ್ವಾಸದಿ ತಪಗೈದ ಸುರನ ನೋಡಿ
ಮಹದೇವರು ಒಲಿದು
ಭಸ್ಮಾಸುರ ಬೇಡಿದ ವರಗಳ ಕೊಡಲು
ನಿಜ ನೋಡುವೆನೆಂದು ಭಸ್ಮಾಸುರ ಬೆನ್ನಟ್ಟುತ ಬರುತಿರಲು
ವಿಶ್ವ ವ್ಯಾಪಕ ಹರಿ ತಾ ತಿಳಿದು
ತಕ್ಷಣ ಸ್ತ್ರೀ ರೂಪವ ಧರಿಸುತ ಬರೆ
ಭಸ್ಮಾಸುರ ತನ್ನಸ್ತದಿ ಮೃತಿಸಲು
ಭಕ್ತರನುದ್ಧರಿಸಿದ ಈ ಸ್ಥಳವು ೪

ಲೋಕ ಲೋಕದ ಜನರೆಲ್ಲರು ಕೂಡಿ
ಪ್ರಜಾ ಕಂಟಕನಾದ
ಮೂಕಾಸುರನನು ಗೆಲ್ಲಲು ಸಾಗದಲೆ
ಶ್ರೀಕಾಂತನ ಪ್ರಾರ್ಥಿಸೆ
ಮೂಕಾಂಬಿಕೆ ನಾಮದಿಂದಲಿ ಪ್ರಜ್ವಲಿಸಿ
ಮೂಕಾಸುರನನು ವಧಿಸಿದ ಶ್ರೀ ಕೋಲಾ–
ಪುರದಲಿ ವಾಸಿಸುತಲಿ ಸಂತತ
ಶ್ರೀಕರ ಕಮಲನಾಭ ವಿಠ್ಠಲ
ಏಕಾಂತದಿ ಭಕ್ತರ ಸಲಹಿದ ಸ್ಥಳವಿದು ೫

ಶುಕ್ರವಾರದಿ ನಿನ್ನ ಭಕ್ತಿಲಿ ಸ್ತುತಿಪರ
ಇಷ್ಟಾರ್ಥಗಳ ಕೊಟ್ಟುದ್ಧರಿಪ ಭಾರ್ಗವಿ ತಾಯೆ
ಭಕ್ತವತ್ಸಲನೊಡಗೂಡುತ ಬಾರಮ್ಮ
ಮಿತ್ರೇರು ಕರೆವರು ಕೃಷ್ಣವೇಣಿಯೆ ನಿನ್ನ ೨

ಕನ್ನಡಿ ಕದುಪಿನ ಕಡು ಮುದ್ದು ಮಹಾಲಕ್ಷ್ಮಿ
ರನ್ನ ಪವಳ ಹಾರಾಲಂಕೃತ ಶೋಭಿತೆ
ಸ್ವರ್ಣಮಂಟಪದಿ ಕುಳ್ಳಿರು ಬಾರೆಂದೆನುತಲಿ
ಕರ್ಣೇರು ಕರೆವರು ಕಮಲಾಕ್ಷನೊಡಗೂಡಿ ೩

ನಿಗಮವೇದ್ಯಳೆ ನಿನ್ನ ಅಗಣಿತ ಗುಣಗಳ
ಪೊಗಳುವ ಸುಜನರ ಅಘ ಪರಿಹರಿಸುತ್ತ
ಬಗೆ ಬಗೆ ನಾಮಗಳಿಂದ ಪೂಜೆಯಗೊಂಬ
ಖಗವಾಹನನ ರಾಣಿ ಲಗುಬಗೆಯಿಂದಲಿ ೪

ತಡಮಾಡದಲೆ ಬಾ ಬಾ ಮುಡಿದ ಹೂವು ಉದರುತ್ತ
ಬಡನಡು ಬಳುಕುತ್ತ ಕೊಡುತ ವರಗಳನ್ನು
ಬಿಡಿಮಲ್ಲಿಗೆಯ ತಂದು ನಡೆಮುಡಿ ಹಾಸುವರು
ಕಡಲೊಡೆಯನ ರಾಣಿ ಸಡಗರದಿಂದೊಮ್ಮೆ ೫

ಕ್ಷೀರವಾರಿಧಿಯ ಕುಮಾರಿಯೆ ಬಾರೆಂದು
ಸಾರಸಮುಖಿಯರು ಸರಸದಿ ಕರೆವರು
ಮೂಲೋಕ ವಿಖ್ಯಾತೆ ಮಾರಮಣನ ಪ್ರೀತೆ
ಚಾರುಮಂಗಳೆ ಸತ್ಯ ಶ್ರೀ ಭೂದುರ್ಗಾಂಬ್ರಣೆ ೬

ಕಮಲಾಕ್ಷಿ ಕೇಳಮ್ಮ ಶ್ರಮ ಪರಿಹರಿಸೆಂದು
ನಮಿಸಿ ಬೇಡುವೆ ನಿನ್ನ ಭ್ರಮರ ಕುಂತಳೆ ತಾಯೆ
ಕಮಲನಾಭ ವಿಠ್ಠಲನ ಕೂಡಿ ಹರುಷದಿ
ಸುಮನಸರೊಡೆಯನ ಸತಿ ಸಾರ್ವಭೌಮಳೆ ೭

ಉದಯ ಕಾಲದೊಳಗೆ ನಾನು
ನದಿಯ ಸ್ನಾನಗಯ್ಯುತ
ಪದುಮನಾಭನನ್ನು ಸ್ಮರಿಸಿ
ಮುದದಿ ಅರ್ಘ್ಯ ಕೊಡುತಿರೆ ೧

ಕರದ ಜಲವು ಮಲಿನವಾಗೆ
ಸಿರವ ತೂಗಿ ನಿಂತೆ ನಾ
ಪರಿ ಪರಿಯಲಿ ಯೋಚಿಸುತಲಿ
ತ್ವರದಿ ಶಾಪವ ಕೊಟ್ಟೆನಾ ೨

ಅಸ್ತಮಾನದೊಳವನ ಸಿರವ
ಕತ್ತರಿಸುವೆನೆನ್ನುತಾ
ವ್ಯರ್ಥ ಮಾಡದೆ ಸಲಹಲೀಗ
ಕರ್ತೃ ಕಮಲನಾಭ ವಿಠ್ಠಲ ೩

## ವಚನ

ಹೀಗೆಂದು ಪೇಳಿದ ಗಾಲವರ ನುಡಿ ಕೇಳಿ
ನಾರದರು ಮನದಿ ಆಲೋಚಿಸುತ ಕ್ಷಣಮಾತ್ರ
ಏನಿದು ಗಾಲವರೆ ವೇಳೆಯಾಗುತಲಿ ಬಂತು
ಆಲೋಚಿಸುತ ಕುಳಿತರಾಗುವುದೆ ನಿಮ್ಮ ಕಾರ್ಯ
ಯಾರಿಂದ ಈ ಕಾರ್ಯ ಮಾಡಿಸುವಿರೆಂದೆನಲು
ಗಾಲವರು ಮುಂದೋರದಲೆ ತಲೆಯ ತೂಗುತಿರಲು
ನೋಡಿ ಆ ಕ್ಷಣ ನಾರದರು ನುಡಿದರೀಪರಿಯು
ದ್ವಾರಕಾವಾಸ ಶ್ರೀಕೃಷ್ಣನಲ್ಲದೆ ಬೇರೆ
ಯಾರಿಂದಲಾಗದೆಂದೆನಲು ಗಾಲವರಾಗ
ಯೋಗಿ ನಾರದರ ಪಾದವ ಪಿಡಿದು ಪೇಳಿದನು
ಈಗ ಈ ಕಾರ್ಯ ನಿಮ್ಮಿಂದಾಗಬೇಕೆಂದೆನುತ
ದಾರಿ ತಪ್ಪಿ ತಪಿಸುತ್ತಿರುವೆ ಮುಂದೋರದೆ
ದೀನರಕ್ಷಕ ದಯಾನಿಧಿ ಎನ್ನ ಮಾತನು

"ನಮ್ಮ ತಾಯಿಯವರು, ಅವರ ತಾಯಿಯವರು ಕೂಡ ಸ್ನಾನಾನಂತರ ಮಡಿಯಲ್ಲಿ ಒಂದು ದೊಡ್ಡ ಹಾಡನ್ನು (ಒಬ್ಬ ಅಪರೋಕ್ಷಿಗಳು ರಚಿಸಿದ್ದು) ಹಾಡುತ್ತಿದ್ದುದನ್ನು ಕೇಳಿ, ಕೇಳಿ ರೂಢಿಯಾಗಿದ್ದು ಅದನ್ನೇ ಆಧಾರವಾಗಿಟ್ಟುಕೊಂಡು ರಚಿಸಿದುದು" ಎಂಬುದಾಗಿ ಜೀವೂ ಬಾಯಿಯವರು ಸೂಚಿಸಿದ್ದಾರೆ.

ಶ್ರೀ ಸೌಮ್ಯನಾಮ ಸಂವತ್ಸರ ಅಧಿಕ ಆಷಾಢ ಮಾಸದ ಪೌರ್ಣಿಮಾ ಭಾನುವಾರ ೨೯–೭–೧೯೬೯ ರಂದು ಶ್ರೀ ಹರಿಗುರುಗಳ ಅನುಗ್ರಹದಿಂದ ಈ ಮಾನಸ ಪೂಜಾ ಬರೆಯಾಗಿದೆ. ಮಾಸನಿಯಾಮಕ ಶ್ರೀ ಪುರುಷೋತ್ತಮ ಮೂರ್ತಿ ಪ್ರಿಯತಾಂ ಪ್ರೀತೋಭವತು.

## ೭ ಗಾಲವ ಚರಿತ್ರೆ

### ಆರ್ಯ

ವರಗಣಪತಿಗೊಂದಿಸಿ ಪ್ರಾರ್ಥಿಸುವೆನು
ಹರನ ಕುಮಾರನ ಬಲಗೊಂಡು
ಪರಮಾತ್ಮನ ಲೀಲೆಗಳನು ಪೊಗಳಲು
ಸ್ಥಿರ ಭಕುತಿಯ ನೀಡೆಂದೆನುತಾ ೧

ಮೋದಕ ಹಸ್ತನೆ ಸಾಧುಜನರ ಪ್ರಿಯ
ಮಾಧವನನು ಭಜಿಸುವ ಕ್ರಮವ
ಭೇದವಿಲ್ಲದೆ ಕರುಣಿಪುದೀಗಲೆ
ಯಾದವ ಪತಿ ಕೀರ್ತಿಯ ಪೊಗಳೆ ೨

ಕಾಮಹರನ ಸುಕುಮಾರನಿಗೊಂದಿಪೆ
ಪ್ರೇಮದಿ ಪೂಜಿಸಿ ಭಕುತಿಯಲಿ
ಶ್ರೀ ಮಹಾಲಕ್ಷ್ಮೀಶನ ಸ್ಮರಣೆಗೆ
ನೇಮದಿಂದ ಮತಿ ಕೊಡು ಎನುತ ೩

ಪಾಶಾಂಕುಶಧರ ಮೂಷಕವಾಹನ
ಶ್ರೀಶನ ವಿಶಾಲಮಹಿಮೆಗಳ

ಬೆಂಬಿಡದೆ ಸೇವಿಪ ಭಕ್ತ ಕು–
ಟುಂಬಿ ನಿನ್ನ ನಂಬಿದವರ ೨

ನಿನ್ನನೆ ನಾನಂಬಿರುವೆ–
ನನ್ಯರ ನಾಶ್ರಯಿಸದಲೆ
ಸನ್ನುತಾಂಗಿ ಎನ್ನ ಮನದ–
ಲಿನ್ನು ಹರಿಯ ಪಾದ ತೋರು ೩

ಸರಸೀಜಾಸನ ಮಾತೆ
ಸ್ಮರಿಸುವೆ ನಿನ್ನಯ ಪಾದ
ಸ್ಮರಣೆ ಮರೆಯದಂತೆ ಕೊಟ್ಟು
ಹರಿಯ ತೋರು ಹರುಷದಿಂದ ೪

ಕಮಲೇ ಹೃತ್ಕಮಲದಿ ಶ್ರೀ
ಕಮಲನಾಭ ವಿಠ್ಠಲ
ಮಿನುಗುವಂಥ ಸೊಬಗು ತೋರು
ವಿನಯದಿಂದ ನಮಿಪೆ ನಿನ್ನ ೫

## ೫೨

ಬಾರಮ್ಮ ಮನೆಗೆ ಸೌಭಾಗ್ಯದ ಮಹಲಕ್ಷ್ಮಿ ಪ

ಬಾರಮ್ಮ ಮನೆಗೆ ಭಕ್ತರು ನಿನ್ನ ಸ್ತುತಿಪರು
ಮಾರನಯ್ಯನ ಕೂಡಿ ಮನ ಹರುಷದಿ ಬೇಗ ಅ.ಪ

ಶಂಖು ಚಕ್ರ ಗದ ಪದ್ಮವು ಧರಿಸಿದ
ಪಂಕಜಾಕ್ಷನ ಸಿರಿ ಪಟ್ಟದರಸಿದೇವಿ
ಕುಂಕುಮಾಂಕಿತೆ ಸರ್ವಾಲಂಕಾರ ಶೋಭಿತೆ
ಬಿಂಕ ಮಾಡದಲೆ ಬಾ ವೆಂಕಟನರಸಿಯೆ ೧

## ೪೭

ಹಸಿವು ಬಹಳಾಗುತ್ತಿದೆ ಕೇಳಮ್ಮಯ್ಯ
ಹಸನಾಗಿ ಉಣಬಡಿಸೇ ಪ

ಬಿಸಿ ಬಿಸಿ ಕಡುಬು ಕಜ್ಜಾಯ ದೋಸೆಯು ಹುಗ್ಗಿ
ಹಸನಾಗಿ ಬಡಿಸಮ್ಮ ಬಿಸಿ ಬಿಸಿ ಪರಮಾನ್ನ ಅ.ಪ

ನೀರೊಳು ಮುಳುಗಿ ಬಂದೆ ಭಾರವ ಪೊತ್ತು
ಕೋರೆಲಿ ಧರಣಿ ತಂದೆ
ಪೋರನೊಡನೆ ವೈರಿಯಾದ ದೈತ್ಯನ ಕರು–
ಳ್ಹಾರವ ಮಾಡುತ್ತ ಭಾಳ ಬಳಲಿ ಬಂದೆ ೧

ಪೊಡವಿ ದಾನವ ಬೇಡಿದೆ ರಾಜರ ಗೆದ್ದು
ಕೊಡಲಿ ಕಯ್ಯಲಿ ಪಿಡಿದೆ
ಮಡದಿಯನರಸುತ ಅಡವಿಗಳ ಚರಿಸಿದೆ
ಬಿಡದೆ ದೈತ್ಯರ ಸದೆ ಬಡಿದು ದಣಿದು ಬಂದೆ ೨

ವಿಷವನುಣಿಸಿದ ದೈತ್ಯಳ ಅಸುವನೆ ಹೀರಿ
ಅಸುರ ಶಕಟನ ಸೀಳಿದೆ
ವಸುದೇವ ಸುತನು ಈ ಅಸುರ ಮರ್ದನನಾಗಿ
ಬಸುರೊಳು ಬ್ರಹ್ಮಾಂಡ ಧರಿಸಿದ ಕಾರಣ ೩

ಕಿಚ್ಚನುಂಗಿದ ಕಾರಣ ಹೊಟ್ಟೆಯ ಹಸಿವು
ಹೆಚ್ಚುತಲಿದೆ ನೋಡಮ್ಮಾ
ಕಚ್ಚ ಬರುತಿಹ ಕಾಳಿ ಸರ್ಪನ ಹೆಡೆ ಮೇಲೆ
ನರ್ತನ ಮಾಡುತ ಭಾಳ ಬಳಲಿ ಬಂದೆ ೪

ಶಂಬರಾರಿ ಪಿತನ ರಾಣಿ ನಂಬಿಸ್ತುತಿಸುವೆ
ಅಂಬುಜನಾಭನ ಧ್ಯಾನ ಸಂಭ್ರಮ ಎನಗೀಯೆ ೧

ಗೆಜ್ಜೆಪಾದ ಧ್ವನಿಗಳಿಂದ ಮೂರ್ಜಗ ಮೋಹಿಸುತ್ತ
ಸಜ್ಜನರ ಸೇವೆಗೊಳ್ಳುತ ಜನಾರ್ದನನ ಪ್ರೀತೆ ೨

ತ್ರಿಗುಣಾಭಿಮಾನಿಯೆ ನಿನ್ನ ಪೊಗಳುವ ಭಕ್ತರ
ಬಗೆ ಬಗೆ ತಾಪತ್ರಯಗಳ ಕಳೆದುಮಿಗೆ ಸೌಖ್ಯವ ನೀಯೆ ೩

ಪದ್ಮಾಕ್ಷಿಯೆ ಪದ್ಮಸದನೆ ಪದ್ಮಪಾಣಿಯೆ
ಪದ್ಮನಾಭನಗೂಡುತಲಿ ಹೃತ್ಪದ್ಮದಲಿ ಪೊಳೆಯೆ ೪

ಕನಕಾಭರಣಗಳಿಂದಲಿ ಪೊಳೆಯುವ ಕಮಲನೇತ್ರೆಯೆ
ಕಮಲನಾಭವಿಠ್ಠಲನ ಕೂಡಿಕರುಣದಿ ಬಾರೆತಾಯೆ ೫

## ೫೧

ಪಾಲಿಸು ಪಾಲಿಸು ಪಾಲಯಮಾಂ ಸತತ
ಇಂದಿರಾದೇವಿ ಪ
ಪಾಲಿಸು ಪನ್ನಗವೇಣಿ ಪಾಲಿಸು ಪಂಕಜ ಪಾಣಿ
ಪಾಲಿಸು ಗುಣಗಣ ಶ್ರೇಣಿ ಪಾಹಿನಿತ್ಯ ಕಲ್ಯಾಣಿ ಅ.ಪ

ಬಾಲಕನು ತಾನಾಗಿ ಗೋಪಿಗೆ
ಬಾಲಲೀಲೆಗಳನ್ನು ತೋರಿದ
ಶ್ರೀಲಲಾಮನನ್ನು ಮೆಚ್ಚಿ
ಮಾಲೆಹಾಕಿದಂಥ ಲಕ್ಷ್ಮಿ ೧

ಅಂಬುಧಿಯೊಳ್ ಶಯನಿಸಿದ
ಕಂಬುಕಂಧರ ಹರಿಯ

ಬತ್ತಲೆ ತಿರುಗಿ ಬಂದೆ ತೇಜಿಯನೇರಿ
ಸುತ್ತಿದೆ ಧರಣಿಯನು
ಕರ್ತೃ ಶ್ರೀ ಹರಿ ಕಮಲನಾಭ ವಿಠ್ಠಲನಿಗೆ
ತೃಪ್ತಿಯ ಪಡಿಸಮ್ಮ ಮುಕ್ತಿಪಥವನೀವೇ ೫

## ೪೮

ಹ್ಯಾಂಗೆ ಶೋಭಿಸುವ ನೋಡೆ ಯಾದವ ಕೃಷ್ಣ
ಹ್ಯಾಂಗೆ ಶೋಭಿಸುವ ನೋಡೆ ಪ

ಮಂಗಳ ಮಹಿಮ ಶ್ರೀರಂಗ ತನ್ನವರಿಗೆ ಅ.ಪ

ಘಲುಘಲು ಘಲುರೆನ್ನುತ ಕಾಲ್ಗಡಗ ನೂ-
ಪುರಗೆಜ್ಜೆ ಸರಪಣಿಯು
ಸರಿಗೆಳೆಯರ ಕೂಡಿ ಮುರಳಿಯ ಧರಿಸುತ
ಹರುಷದಿಂದಲಿ ಸಪ್ತಸ್ವರಗಳ ನುಡಿಸುತ್ತ ೧

ಉಟ್ಟ ಪೀತಾಂಬರವು ನಡುವಿಗೆ ಜರದ
ಪಟ್ಟೆಯ ಚಲ್ಲಣವು
ಗಟ್ಟಿ ಕಂಕಣ ಕೈಗಳಿಟ್ಟು ಕಟಿಯ ಮೇಲೆ
ಭಕ್ತವತ್ಸಲ ಸ್ವಾಮಿ ಸೃಷ್ಟಿಪಾಲಕ ಕೃಷ್ಣ ೨

ಎಳೆ ತುಳಸಿಯ ಮಾಲೆಯು ಕಂಠದಿ ಮೆರೆವ
ಪದಕ ಕೌಸ್ತುಭ ಮಣಿಯು
ನಳಿನ ಲೋಚನೆಯ ಉರದಲ್ಲಿ ಧರಿಸಿಕೊಂಡು
ಚಲುವ ಚನ್ನಿಗನಾಗಿ ಹೊಳೆಯುವ ದೇವನು ೩

ಕೋಟಿ ಸೂರ್ಯರ ಸೋಲಿಪ ಮುಖಕಾಂತಿಯ
ಸಾಟಿಯಾರುಂಟವಗೆ

ಬಲಿಯ ದಾನವ ಬೇಡಿದನ ಬಲು
ಛಲದಿ ಕ್ಷತ್ರಿಯರ ಸೋಲಿಸಿದನ
ಲಲನೆಯ ತಂದ ಶ್ರೀವರನ
ಗೊಲ್ಲರ ಕುಲದಲ್ಲಿ ಬೆಳೆದ ಶ್ರೀ
ಚಲುವ ಗೋಪಾಲನ ೨

ದುಷ್ಟಕಾಳಿಂಗನ ಮದವನಳಿದು
ಮೆಟ್ಟಿನಾಟ್ಯದಿ ಸಿರದಿ ತುಳಿದನ
ಪುಟ್ಟಪಾದದ ದಿವ್ಯ ಚಲುವನ ಗೋಪ್ಯ-
ಳಟ್ಟಿ ಹೋಗುವ ನಮ್ಮ ಪುಟ್ಟ ಗೋಪಾಲನ ೫

ಶಂಖ ಚಕ್ರವು ಗದ ಪದ್ಮವು ಹೊಳೆವ
ಕಿಂಕಿಣಿ ಪೈಜನಿನಾದವು
ಬಿಂಕದಿ ಊದುವ ಕೊಳಲಗಾನವು ನಿ-
ಶ್ಶಂಕೆಯಿಂದಲಿ ಭಕ್ತವೃಂದವ ಪೊರೆದನ ೬

ಥಳಥಳಿಸುವ ದಿವ್ಯ ತಿಲಕವು ಹೊಳೆಯೆ
ಬರಿಮೈಯ್ಯ ತೋರುತ ನಿಂತನ
ಕುದುರೆಯನೇರುತ್ತ ಬರುವನ
ಸಿರಿ ಕಮಲನಾಭ ವಿಠ್ಠಲ ಭಕ್ತಪೋಷನ ೭

## ಮಹಾಲಕ್ಷ್ಮಿ

### ೫೦

ದಯಮಾಡಮ್ಮ ದಯಮಾಡಮ್ಮ
ಹಯವದನನ ಪ್ರಿಯೆ ಪ

ವಿನಯದಿಂದ ಬೇಡುವೆನೆ ಕಮಲನೇತ್ರೆಯೆ ಅ.ಪ

ನೀಟಾಗಿ ಕರ್ನಕುಂಡಲ ಕಿರೀಟವು ಹೊಳೆಯೆ
ಲಲಾಟದಿ ಕಸ್ತೂರಿ ತಿಲುಕವು ಹೊಳೆಯುತ್ತ ೪

ಕಂಗಳ ಕುಡಿನೋಟದಿ ಸಜ್ಜನರ ಪಾ–
ಪಂಗಳ ಪರಿಹರಿಸಿ
ಮಂಗಳ ಮಹಿಮ ಶ್ರೀರಂಗ ಮೂರುತಿ ಸಾಧು
ಸಂಗ ವಂದಿತ ಸಿರಿ ಕಮಲನಾಭ ವಿಠ್ಠಲ ೫

## ೪೯

ಹೆಜ್ಜೆಗಳಿವೆ ನೋಡಿರಿ ರಂಗಯ್ಯನ
ಹೆಜ್ಜೆಗಳಿವೆ ನೋಡಿರಿ ಪ

ಹೆಜ್ಜೆಗಳಿವೆ ನೋಡಿರಿ ಮೂರ್ಜಗದೊಡೆಯನ
ಅಬ್ಜಭವಾದ್ಯರ ಹೃದ್ಗೃಹವಾಸನ ಅ.ಪ

ಮಧುರಾಪುರದಿ ಜನಿಸಿದನ ಬೇಗ
ಮಾವ ಕಂಸನ ಛೇದಿಸಿದನ
ಚದುರೇರಿಗೊಲಿದ ಶ್ರೀಶನ ದಿವ್ಯ
ಮದನ ಮೋಹನ ಕೃಷ್ಣ
ವಿಧಿ ಭವಾರಾಧ್ಯನ ೧

ಗೋಕುಲವಾಸನೆಂದೆನಿಪ ದಿವ್ಯ
ನಾಕೇಶ ವಂದ್ಯ ಸರ್ವೇಶನ
ಭೀಕರ ದೈತ್ಯರ ಸದೆದನ ಸವ್ಯ–
ಸಾಚಿಯ ರಥದೊಳು ಏಕಾಂತ ನುಡಿದನ ೨

ವೇದ ಚೋರನ ಛೇದಿಸಿದನ ಗಿರಿ
ಭಾರ ಬೆನ್ನಿಲಿ ಪೊತ್ತು ನಿಂತನ
ಆದಿ ದೈತ್ಯನ ಸೀಳಿ ಭೂಮಿಯ ತಂದು
ಕ್ರೂರ ದೈತ್ಯನ ಕರುಳ್ಹಾರ ಮಾಡಿದ ಹರಿಯ ೩

ಬಂದ ಶ್ರೀರಾಮಚಂದ್ರ ಭಾಗವತರ ಕೂಡಿ
ಇಂದಿರೆ ಜಾನಕಿ ಸೌಮಿತ್ರಿ ಸಹಿತದಿ

೩೬

ರಾಧೆ ಗೋಪಾಲ ಕೃಷ್ಣ ರಾಧೆಗೋಪಾಲ
ರಾಧೆ ಗೋಪಾಲ ಕೃಷ್ಣ ರಾಧೆಗೋಪಾಲ ಪ

ನಂದನಕಂದ ಮುಕುಂದಮುರಾರೆ
ಇಂದಿವರಾಕ್ಷ ಗೋವರ್ಧನಧಾರೆ
ವೃಂದಾವನ ಸಂಚಾರ ವಿಹಾರೇ
ಸಿಂಧುಶಯನ ಕ್ಷೀರಾಬ್ಧಿವಿಹಾರ ೧

ಶಂಖ ಚಕ್ರಧರ ವೇಣುವಿನೋದ
ಶಂಕರಾದಿ ವಂದಿತ ದಿವ್ಯಪಾದ
ಬಿಂಕದಿಂದ ಕೊಳಲೂದುವನಾದ
ಪಂಕಜಾದಿಗಳು ನಲಿವ ಸುಸ್ವಾದ ೨

ಮಂದರಧರ ಗೋವರ್ಧನ ಧಾರಿ
ಮಂದೆ ಗೋವತ್ಸವ ಕಾಯ್ವ ಶೌರಿ
ಇಂದಿರೆಯರಸ ಶ್ರೀಹರಿಯೆ ಮುರಾರಿ
ನಂದಯಶೋದೆಯ ಮೋಹದ ಶೌರಿ ೩

ವೃಂದಾವನದೊಳು ನಿಂದ ಗೋವಿಂದ
ಮಂದಹಾಸ ಮುಖನಗೆ ಮೊಗದಿಂದ
ಸುಂದರ ಗೋಪಿಯರೊಡಗೂಡಿ ಬಂದ
ಮಂದರಧರ ಆನಂದ ಮುಕುಂದ ೪

ಕಾಮನಪಿತ ಶ್ರೀ ಕಂಜಜನಾಭ
ಕಾಮಿತ ಫಲಗಳ ಕರುಣಿಪ ಶ್ರೀಧ

ಸರಸಿಜಾಸನ ಮಾತೆ ಸ್ಮರಿಸುವೆ ನಿಮ್ಮ ಪಾದ
ಸ್ಮರಣೆ ಮರೆಯದಂತೆ ಕರುಣಿಪುದು ೭

ಪಂಕಜನಾಭನ ಕಿಂಕರರನ್ನು ಕಾಯ್ವ
ಬಿಂಕ ನಿನ್ನದು ಸರ್ವ ಅಲಂಕಾರಿಣಿ ೮

ಕಮಲನಯನನೆ ಶ್ರೀ ಕಮಲನಾಭ ವಿಠ್ಠಲನ
ಕ್ಷಣ ಬಿಡದಲೆ ತೋರು ನಮಿಸುವೆನು ೯

## ಹನುಮ–ಭೀಮ–ಮಧ್ವ

### ೬೦

ಕರುಣಿಸೈ ಹರಿ ಚರಣಸೇವೆ ನಿರುತ ಪ

ಪರಿಪರಿಯ ಕ್ಲೇಶಗಳ ಪರಿಹರಿಸುತ ಪೊರೆವ
ದುರಿತದೂರ ಹರಿಯ ಚರಣ ಸೇವಕನೆ ಅ.ಪ

ಕಂಜಾಕ್ಷನ ದಯದಿ ಅಂಜದೆ ನೀರಧಿಯ
ಹಿಂಜರಿಯದೆ ದಾಂಟಿ ಸಂಜೆ ಕಳೆಯೆ ಲಂಕೆ
ರಂಜಿಸುವದು ಕಂಡು ಕಂಜಾಕ್ಷಿಗುಂಗುರ ಪ್ರ–
ಭಂಜನ ನೀಡಿದೆಯೊ ಅಂಜನೆಯತನಯ ೧

ದುರಳ ದೈತ್ಯನಾದ ಜರೆಯ ಸುತನ ಸೀಳಿ
ಹರಿಗರ್ಪಿಸಿ ಸರ್ವವನು ಧರಣಿ ಭಾರನಿಳುಹಿ
ಹರಿಯ ಮನವನರಿತು ಪರಿಪರಿಲಿ ಸೇವಿಸುತ
ಪರಮ ಭಕ್ತನಾದೆ ಪರಿಸರನೆ ಸಲಹೊ ೨

ಮುದ್ದು ಕೃಷ್ಣನ ಸೇವೆ ಶುದ್ಧಮನದಿ ಮಾಡಿ
ಸದ್ವೈಷ್ಣವರ ಕುಲದ ಪದ್ಧತಿಯನರುಹಿ
ಪದ್ಮನಾಭ ಕಮಲನಾಭ ವಿಠ್ಠಲನೊಲಿಸಿ
ಸದ್ಗ್ರಂಥಗಳ ರಚಿಸಿ ಉದ್ಧರಿಸಿದೆ ಜಗವ ೩

ಕಮಲನಾಭ ವಿಠಲ ನಿಮ್ಮ ಪಾದ
ಕರುಣದಿ ನೆನೆವರ ಸಲಹುವಮೋದ ೫

## ೪೦

ರಾಮ ಶ್ರೀರಾಮ ಸೀತಾರಾಮ ಶ್ರೀರಾಮ
ರಾಮನೆ ರವಿಕುಲ ಸೋಮ ಶ್ರೀರಾಮ ಪ

ರಾಮ ರಾಮ ರಘುರಾಮನೆ ದಶರಥ
ರಾಮನೆ ಗುಣಗಣಧಾಮನೆ ಶ್ರೀರಘು ಅ.ಪ

ಕೌಸಲ್ಯಾದೇವಿಯ ಕಂದನೆ ರಾಮ
ಕೌಶಿಕಯಜ್ಞವ ಕಾಯ್ದ ಶ್ರೀರಾಮ
ಹಿಂಸಿಸಿದ ತಾಟಕಿಯನು ಕೊಂದರಾಮ
ಧ್ವಂಸಮಾಡಿದೆ ಶಿವಧನು ಮುರಿದುರಾಮ
ಸಂಶಯವಿಲ್ಲದೆ ಸೀತೆ ಕರವ ಪಿಡಿದು
ತನ್ನಂಶದ ಪರಶುರಾಮನಿಗೊಲಿದನೆ ಶ್ರೀ ೧

ದಶರಥರಾಮ ನೀನರಸನಾಗೆನಲು
ಅಸುರಾವೇಶದಿ ಕೈಕೆ ವರವ ಯಾಚಿಸಲು
ಎಸೆವ ಸಿಂಹಾಸನ ತೊರೆದು ಪೊರಮಾಡಲು
ಶಶಿಮುಖಿ ಸೀತಾಲಕ್ಷ್ಮಣರ ಕೂಡಿ ಬರಲು
ಭರತಗೆ ಪಾದುಕೆ ಕೊಡುತಲಿ ಕಳುಹಿಸಿ
ಗುಹನ ಮನ್ನಿಸಿ ವನರಾಜ್ಯದೊಳ್ ಮೆರೆದೆ ೨

ವನದೊಳು ಮಾಯಾ ಮೃಗವ ಕಂಡು ಸತಿಯು
ಮನದಿ ಚಿಂತಿಸಿರಾಮ ತೆರಳೆ ರಕ್ಕಸನು
ವನಜಾಕ್ಷಿ ಸೀತೆಯ ಕಳವಿನಿಂ ತರಲು
ವನವನಚರಿಸಿ ಪುಡುಕೆ ಕಂಡು ಕಪಿವರನು
ಶರಧಿ ಲಂಘಿಸಿ ಸೀತೆಯನು ಕಂಡು ಹನುಮನು
ಕುರುಹು ಪಡೆದು ಲಂಕೆ ದಹಿಸುತ ಬರಲು ೩

ಪದ್ಮಸಂಭವೆ ಪಾಲಿಸು ಪದ್ಮಾಕ್ಷಿ ನಿನ್ನ
ಪದ್ಮನಾಭನ ತೋರಿಸು
ಪದ್ಮನೇತ್ರೆಯೇಲಾಲಿಸು ಪಾಪವಹರಿಸು
ಶುದ್ಧಮನವ ಮಾಡಿಸು
ಪದ್ಮ ಸರೋವರ ಮಧ್ಯದಿ ಜನಿಸಿದ
ಪದ್ಮದೊಳುದಿಸಿದ ಪದ್ಮಾವತಿಯೆ ಹೃ-
ತ್ಪದ್ಮದಿ ಕಮಲನಾಭ ವಿಠ್ಠಲನ ಪಾದ ತೋರಿ
ಉದ್ಧರಿಸೆನ್ನ ಪ್ರಸಿದ್ಧಳೆ ಜನನಿ ೩

## ೫೯

ಸದಾ ಪೂಜಿಪೆ ನಿನ್ನ ಸೌಭಾಗ್ಯಳೆ ಪ

ಇಂದಿರಾದೇವಿಯೆ ಮಂದರೋದ್ಧರನ ರಾಣಿ
ಇಂದೀವರಾಕ್ಷಿ ಆನಂದದಲಿ ೧

ಪದ್ಮಾಕ್ಷಿ ಎನ್ನ ಹೃತ್ಪದ್ಮದಿ ಹರಿಪಾದ
ಪದ್ಮವ ತೋರಿ ಉದ್ಧರಿಸುವಳೆ ೨

ಅಂಬುಜ ಪಾಣಿಯೆ ಅಂಜುಜಾಕ್ಷನ ರಾಣಿ
ಅಂಬುಧಿಶಯನನ ಪೊಂದಿರ್ಪಳೆ ೩

ಆದಿಕಾರಿಣಿ ಪತ್ರಾದಿ ರೂಪದಿ ಹರಿಯ
ಆರಾಧಿಸುವಿ ಸರ್ವರಾಧಾರಿಯೆ ೪

ಹೆದರದೆ ಭೃಗುಮುನಿ ಒದೆಯೆ ಪಾದದಿಂದ
ಕದನವ ಮಾಡಿದ ಕಲ್ಯಾಣಿಯೆ ೫

ಭಕ್ತಜನರು ನಿನ್ನ ಭಕ್ತಿಯಿಂ ಪೂಜಿಸಲು
ಮುಕ್ತಿ ಮಾರ್ಗವ ತೋರಿ ಸಲಹುವಳೆ ೬

ಕರುಣದಿ ಭಕುತರ ಕರೆದು ಕಾಪಾಡುವ
ಬಿರುದು ನಿನ್ನದು ತಾಯೆ ತ್ವರಿತದಿ ಕಾಯೆ
ಕರುಣಿಸೆ ಕಮಲನಾಭ ವಿಠ್ಠಲನ ರಾಣಿ
ಮರೆಯದೆ ಹರಿಯ ಧ್ಯಾನವ ಕೊಟ್ಟು ಸಲಹೆಂದು ೫

## ೫೮

ಶ್ರೀ ಮಹಾಲಕ್ಷ್ಮಿ ದೇವಿಯೆ ಪಾಲಿಸೆ ಎನ್ನ
ಶಾಮನಯ್ಯನ ರಾಣಿಯೆ ಪ

ಜಾಣೆ ನಿನಗೆ ಸರಿಗಾಣೆನೆ ಗುಣಮಣಿ
ಮಾಲೆ ಸುಗುಣೆ ಅಹಿವೇಣಿಯೆ ಜನನಿ ಅ.ಪ

ನಿಗಮವೇದ್ಯಳೆ ನಿನ್ನನು ಪೊಗಳುವೆ ನಾನು
ತ್ರಿಗುಣಾಭಿಮಾನಿ ಸ್ತುತಿಪೆನು
ಬಗೆಬಗೆ ಭಜಿಪೆ ನಿನ್ನನು ಬಂದೆನ್ನ ಮನದಿ
ನಗಧರನ ತೋರೆಂಬೆನು
ಹಗಲು ಇರಳು ನಿನ್ನ ಬಗೆ ಬಗೆ ಸ್ತುತಿಪರಪಾದ-
ಗಳ ಸೇವಿಪ ಪರಮಾನಂದದ
ಮಿಗೆ ಸೌಭಾಗ್ಯವ ಕರುಣಿಸು ಬೇಗದಿ
ಸುದತಿ ಮಣಿಯೆ ಹರಿ ಪಾದಯುಗ ತೋರೌ ೧

ಭಕ್ತವತ್ಸಲನ ರಾಣಿಯೆ ಭಜಿಸುವೆ ನಿನ್ನ
ಮತ್ತೆ ಮಾಧವನ ಪಾದವ
ಭಕ್ತಿಂದ ಭಜಿಪ ಧ್ಯಾನವ ಕೊಟ್ಟು ಕಾಪಾಡೆ
ಸತ್ಯ ಮೂರುತಿಯ ದೇವಿಯೆ
ಉತ್ತಮ ಭಕ್ತರಿಗಿತ್ತ ವರಗಳನು
ಮತ್ತೆ ಕೇಳಿಮನ ತೃಪ್ತಿಯ ತಾಳುತ
ಚಿತ್ತಜ ಪಿತನೊಳು ಭಕ್ತಿಮಾಡುವ ಬಗೆ
ಇತ್ತು ಪಾಲಿಸು ಸರ್ವೋತ್ತಮನರಸಿಯೆ ೨

ಸೇತುಬಂಧನ ಮಾಡಿ ಕಪಿಗಳ ಕೂಡಿ
ನೀತಿ ಪೇಳಿದ ವಿಭೀಷಣಗಭಯ ನೀಡಿ
ಭೂತ ರಾವಣನ ದಶಶಿರವ ಚಂಡಾಡಿ
ಸೀತಾಸಹಿತ ರಾಮ ಪುಷ್ಪಕವನೇರಿ
ಆತುರದಿಂದಿಹ ಭರತನಿಗ್ವಾರ್ತೆಯ
ಪ್ರೀತಿಲಿ ಕಳುಹಿದ ಶ್ರೀ ರಘುರಾಮ ೪

ಬಂದ ಶ್ರೀರಾಮಚಂದ್ರ ಬಹುಪ್ರೀತಿಯಿಂದ
ಛಂದದಿಂ ಭರತನ ಮನ್ನಿಸಿ ಮುದದಿಂದ
ಕುಂದಣಮಯದ ಸಿಂಹಾಸನ ಚಂದ-
ದಿಂದಲೇರುತ ರಾಮ ನಸುನಗೆಯಿಂದ
ಇಂದಿರಾಸೀತಾ ಸಹಿತ ಅಯೋಧ್ಯದಿ
ಬಂದು ಪೊರೆವ ಕಮಲನಾಭ ವಿಠ್ಠಲನು ೫

## ೪೧

ಶುಭವು ಶ್ರೀಹರಿಯ ನಾಮವು ಸುಜನರಿಗೆಲ್ಲ
ಶುಭವು ಶ್ರೀಹರಿಯ ನಾಮವು ಪ

ಶುಭವು ಶ್ರೀಹರಿಯ ನಾಮ
ವಿಭವದಿಂ ಪೊಗಳಲು
ಶುಭಕೃತು ನಾಮ ಸಂವತ್ಸರದಲಿ
ಶುಭ ಶುಭವೆನ್ನುತ ಪಾಡುವರನು ಸಲಹುವ ಅ.ಪ

ಸಿಂಧುಶಯನ ಹರಿಯ ಇಂದಿರೆ ಸಹಿತ
ಚಂದದಿ ಭಜಿಸುವರ
ಮಂದರಧರ ಅರವಿಂದನಯನ ಶ್ರೀಮು-
ಕುಂದ ಭಕ್ತರ ಭವಬಂಧನ ಬಿಡಿಸುವ
ಪೊಂದಿ ಭಜಿಸುವರಾನಂದದಿ ಸಲಹುವ

ಸುಂದರ ವದನ ಶುಭಾಂಗನು ಮುದದಲಿ
ಇಂದ್ರಾದಿಗಳು ಆನಂದದಿ ಪೊಗಳೆ ಗೋ-
ವಿಂದ ಆನಂದ ಹೃನ್ಮಂದಿರ ವಾಸನು ೧

ಶುಭವು ಭಕ್ತರಕಾರ್ಯಕೆ ಶ್ರೀಹರಿಯನಾಮ
ಶುಭವು ಮುಕ್ತಿಸಾಧನಕೆ
ಶುಭವು ಬಂಧುಗಳಿಂದ ಸದನದಿ ಮೆರೆಯಲು
ಶುಭವು ಭಕ್ತರ ವೃಂದ ಕೂಡಿ ನಲಿದಾಡಲು
ಶುಭಗುಣ ಶೀಲನ ಶುಭಗುಣಗಳು ಸ-
ನ್ಮುದದಲಿ ಪಾಡಲು ಶುಭಕೊಡುವನು
ಶುಭಶುಭಶುಭವೆನ್ನುತ ನಲಿದಾಡೆ ಅ-
ಶುಭಗಳನೋಡಿಸಿ ಶುಭವೀವನು ಹರಿ ೨

ಶುಭವು ಶೋಭನ ಶ್ರೀಶಗೆ ಶ್ರೀ ಸಹಿತದಿ
ಮೆರೆವ ಮಹಾನುಭಾವಗೇ
ಶುಭವೆಂದು ಪಾಡಲು ಅಗಣಿತ ಮಹಿಮನ
ಬಗೆಬಗೆಯಿಂದವರಘ ಪರಿಹರಿಸುವ
ಖಗವಾಹನ ಶ್ರೀ ಕಮಲನಾಭ ವಿಠ್ಠಲ
ನನು ಪಾಡುವ ಸುಜನರ ಸಲಹುವ
ಹಗಲಿರುಳೆನ್ನದೆ ಭಜಿಸುತ ಪಾಡಿರೊ
ಕಡಲೊಡೆಯನ ಪಾದ ಧೃಡ ಭಕುತಿಯಲಿ ೩

## ೪೨

ಶ್ರೀನಿವಾಸನೆ ಏಳು ಶ್ರೀನಿಕೇತನ ಏಳು
ಗಾನಲೋಲನೆ ಏಳು ಸಾನುರಾಗದಲಿ
ಏಳಯ್ಯ ಬೆಳಗಾಯಿತು ಪ

ನಂಬಿದೆ ತಂದೆ ಮುದ್ದುಮೋಹನ ವಿಠ್ಠಲ ಏಳು
ಸುಂದರ ಶ್ರೀ ಉರುಗಾದ್ರಿವಾಸ ವಿಠ್ಠಲ ಏಳು

ಕಮಲನಾಭ ವಿಠ್ಠಲನೊಡಗೂಡುತ
ಭ್ರಮರ ಕುಂತಳೆ ಸೌಭಾಗ್ಯದ ನಿಧಿಯೆ ೩

## ೫೭

ಶರಣು ಹೊಕ್ಕೆನು ಕಾಯೆ ಕರಿವರದನ ಪ್ರಿಯೆ
ಸರಸಿಜಾಲಯೆ ನಿಲಯೆ ಪ

ಸರಸಿಜನಾಭನ ವರಿಸಿ ಶ್ರೀಹರಿ ವಕ್ಷ-
ಸ್ಥಳದಲ್ಲಿ ನೆಲಸಿ ಸಜ್ಜನರ ರಕ್ಷಕಳೆಂದು ಅ.ಪ

ಕ್ಷೀರಸಾಗರ ಜಾತೆ ಮಾರನಯ್ಯನ ಪ್ರೀತೆ
ಸಾರಸದಳನೇತ್ರೆ
ಮಾರಮಣನ ಮನಸಾರ ಸೇವಿಪ ಮುದ್ದು
ಕೀರವಾಣಿಯ ಭಕ್ತಸ್ತೋಮ ರಕ್ಷಕಳೆಂದು ೧

ಅಂಬುಧಿಶಯನ ಪೀತಾಂಬರಧಾರಿಯ
ಶಂಖ ಚಕ್ರಾಂಕಿತ ಹರಿ ಶೌರಿಯ
ಶಂಭರಾರಿಯ ಪಿತನ ನಂಬಿಸೇವಿಪ ಜಗ-
ದಂಬ ನಿನ್ನಯ ಪಾದಾಂಬುಜಕ್ಕೆರಗುತ ೨

ಪದ್ಮನಾಭನ ರಾಣಿ ಪದ್ಮ ಸಂಭವೆ ದೇವಿ
ಪದ್ಮಾಕ್ಷಿ ಪದ್ಮ ಪಾಣಿಯೆ ಸುಂದರಿ
ಪದ್ಮಾಸನನ ಮಾತೆ ಪದ್ಮಮುಖಿಯೆ ಹೃ-
ತ್ಪದ್ಮದಿ ಹರಿಪಾದ ಪದ್ಮವ ತೋರೆಂದು ೩

ಸಾರಸಾಕ್ಷಿಯೆ ಹರಿಯ ಆರಾಧಿಸುವ ಜನರ-
ಪಾರ ದು:ಖವ ನೀಗಿ ಪೊರೆವೆಯೆಂದು
ಬಾರಿಬಾರಿಗು ನಿನ್ನ ಚಾರು ದರ್ಶನವಿತ್ತು
ಕೋರಿದ ವರಗಳ ಬೀರಿ ಭಕ್ತರ ಕಾಯೆ ೪

ಮೂರಡಿ ಭೂಮಿಯ ದಾನವ ಬೇಡಿದ
ಹಾರ್ವನೆನುವನಿವದಾರಕ್ಕ
ಧೀರ ಬಲಿಯ ಭಕ್ತಿಗೆ ಮೆಚ್ಚಿ ಬಾಗಿಲು ಕಾಯ್ದ
ವಾಮನ ಮೂರುತಿ ಇವ ತಂಗಿ ೬

ಮೂರು ಏಳು ಬಾರಿ ಧಾರುಣಿ ಚರಿಸಿದ
ಶೂರನೆನುವರಿವದಾರಕ್ಕ
ವೀರ ಕ್ಷತ್ರಿಯರ ಮದವನಡಗಿಸಿದ ಪರಶು-
ರಾಮ ಮೂರುತಿ ತಂಗಿ ೭

ಕೋತಿಗಳೊಡನಾಡಿ ಸೇತುವೆ ಕಟ್ಟಿದ ಪ್ರ-
ಖ್ಯಾತನೆನುವರಿವದಾರಕ್ಕ
ಮಾತರಿಶ್ವನಿಗೆ ಒಲಿದಂಥ ದಶರಥ
ರಾಮ ಚಂದ್ರ ಮೂರುತಿ ತಂಗಿ ೮

ಗೋಕುಲದೊಳು ಪಾಲ್ಬೆಣ್ಣೆ ಮೊಸರು ನವನೀತ
ಚೋರನಿವದಾರಕ್ಕ
ಲೋಕಗಳೆಲ್ಲಾ ತಾಯಿಗೆ ಬಾಯೊಳುತೋರ್ದ
ಗೋಪಾಲಕೃಷ್ಣ ಮೂರುತಿ ತಂಗಿ ೯

ತ್ರಿಪುರರ ಸತಿಯರ ವ್ರತಗಳನಳಿದನು
ಗುಪಿತನೆನುವರಿವದಾರಕ್ಕ
ಕಪಟ ನಾಟಕ ಸೂತ್ರಧಾರಿ ಶ್ರೀ-
ಹರಿ ಬೌದ್ಧ ಮೂರುತಿ ತಂಗಿ ೧೦

ಅಶ್ವವನೇರುತ ಹಸ್ತದಿ ಖಡ್ಗ ಪುರು-
ಷೋತ್ತಮನೆನುವರಿವದಾರಕ್ಕ
ಸ್ವಸ್ತದಿ ಕಲಿಯೊಳು ಸುಜನರ ಪಾಲಿಪ
ಕರ್ತೃ ಕಲ್ಕಿ ಮೂರುತಿ ತಂಗಿ ೧೧

ಹಾರ ಮಾಡ್ದ ಏರ್ದ ಕುದುರೆಯ
ಮಾರಪಿತ ಮಧುಸೂಧನನ ವ್ಯಾ-
ಪಾರ ತಿಳಿಯದೆ ವಾರಿಜಾಕ್ಷಿ ೧

ಹಾಸಿಕಿಲ್ಲದೆ ಹಾವಿನ ಮೇಲೆ ಮಲಗುವ
ಹೇಸಿಕಿಲ್ಲದೆ ಎಂಜಲ್ಹಣ್ಣನೆ ಮೆಲುವ
ದೋಷಕಂಜದೆ ಮಾವನ ಕೊಂದು ಮಧುರೆಲಿ
ದಾಸಿ ಕುಬ್ಜೆಯ ಡೊಂಕು ತಿದ್ದಿ ಪರಿಮಳ ಪೂಸಿ
ಸೋಸಿನಿಂದಲಿ ಕರಡಿ ಮಗಳನು
ಯೋಚಿಸದೆ ಕೈಪಿಡಿದು ಸೌಳ-
ಸಾಸಿರದ ಸತಿಯರನು ಕೂಡಿದ
ವಾಸುದೇವನ ಮೋಸವರಿಯದೆ ೨

ಮೋಸದಿಂದಲಿ ಬಂದು ಶಿಶುವನೆತ್ತಿದ ದೈತ್ಯ
ದಾಸಿಯ ಕೊಂದ ಉದಾಸೀನದಿಂದ
ಗ್ರಾಸಕಿಲ್ಲದೆ ಗೋಪೇರ ಮನೆಗಳ ಪೊಕ್ಕು
ಮೀಸಲು ಬೆಣ್ಣೆ ಪಾಲ್ಮೊಸರನೆ ಸವಿದು
ರಾಸಕ್ರೀಡೆಯ ವನಿತೆಯರ ಮನ
ದಾಸೆ ಪೂರೈಸಿ ರಾತ್ರಿ ವೇಳದಿ
ವಾಸುದೇವನು ಓರ್ವ ಸತಿಯೊಳು
ಕ್ಲೇಶಪಡಿಸದೆ ಮೋಸವರಿಯದೆ ೩

ಅಂಡಜವಾಹನ ಅಖಿಳ ಮಹಿಮನೆನೆ
ಪಾಂಡವರ ಮನೆಯ ಊಳಿಗ ಮಾಡಬಹುದೆ
ಚಂಡನಾಡುವ ನೆವದಿಂದ ಕಾಳಿಂಗನ
ಮಂಡೆಯ ತುಳಿದು ನಾಟ್ಯವನಾಡಬಹುದೆ
ಗಂಡುಗಲಿ ಅರ್ಜುನನು ರಥಕೆ
ಬಂಡಿಬೋವನ ಮಾಡಬಹುದೆ
ಪುಂಡಲೀಕನು ಇಟ್ಟಿಗೆಯ ಮೇ-
ಲ್ಪಾಂಡುರಂಗ ನಿಲಿಸಬಹುದೆ ೪

ತುಂಬಿದ ತುರು ವೃಂದದಲಿ ಗೋ-
ವಿಂದನು ಕುಣಿಕುಣಿಯುತಲಿ
ಅಂಬರದಲಿ ದೇವದುಂದುಭಿ ಮೊಳಗಲು
ಕಂಬು ಕಂಧರ ಹರಿ ಸಂಭ್ರಮ ಸೂಸುತ ೭

ವಾಸವ ವಂದಿತ ಹರಿಯೆ ಸರ್ವೇಶ
ಕೃಪಾಕರ ದೊರೆಯೆ
ವಾಸುದೇವ ಸರ್ವೇಶನೆ ಭಕುತರ
ಸಾಸಿರನಾಮದಿ ತೋಷಪಡಿಸುತಲಿ ೮

ಪಾಹಿ ಪಾಹಿ ಶ್ರೀಶ ನಮೋ
ಪಾಹಿ ಪಾಹಿ ಬ್ರಹ್ಮೇಶ
ಪಾಹಿ ಪಾಹಿ ಪರಿಪಾಲಿಸು ನಮ್ಮನು
ಪಾಹಿ ಕಮಲನಾಭವಿಠ್ಠಲ ದಯಾನಿಧೆ ೯

## ೩೬

ಮೆಚ್ಚಿದೆ ಯಾಕಮ್ಮ ಲಕ್ಕುಮಿದೇವಿ
ಸಚ್ಚಿದಾನಂದಾತ್ಮ ಹರಿಯೆಂದರಿಯದಲೆ ಪ

ರಕ್ಕಸಾಂತಕ ಹರಿಗೆ ಸೊಗಸಿನ
ತಕ್ಕ ವಾಹನವಿಲ್ಲದಿದ್ದೊಡೆ
ಹಕ್ಕಿಯ ಹೆಗಲೇರಿ ತಿರುಗುವ
ಚಿಕ್ಕ ಬುದ್ಧಿಯ ಚಲುವ ಕೃಷ್ಣಗೆ ಅ.ಪ

ನೀರೊಳು ಮುಳುಗಿ ಭಾರವಪೊತ್ತು ಧರಣಿಯ
ಕೋರೆದಾಡೆಲಿ ತಂದ ಕ್ರೂರ ರೂಪನಿಗೆ
ಮೂರಡಿ ಭೂಮಿಯ ಬೇಡಿ ಕ್ಷಿತಿಪರ ಕೊಂದು
ನಾರು ವಸ್ತ್ರಗಳುಟ್ಟು ಸೀರೆ ಕದ್ದವಗೆ
ಶೂರತನದಲಿ ತ್ರಿಪುರರಗೆದ್ದು ವಿ-

ಶಂಖು ಚಕ್ರ ಗದೆ ಪದುಮವು ಸಿರದಿ ಕಿ–
ರೀಟಧಾರಿ ಇವದಾರಕ್ಕ
ಪಂಕಜಾಕ್ಷಿ ಪದ್ಮಾವತಿ ಪತಿ ಶ್ರೀ–
ವೆಂಕಟೇಶ ಮೂರುತಿ ತಂಗಿ ೧೨

ಮಮತೆಲಿ ಸುಜನರ ಶ್ರಮ ಪರಿಹರಿಸುವ
ಕಮಲಾಪತಿ ಇವದಾರಕ್ಕ
ಕಮಲಪತ್ರಾಕ್ಷ ಶ್ರೀ ಕಮಲನಾಭ ವಿ–
ಠ್ಠಲ ಮೂರುತಿ ಕೇಳಿವ ತಂಗಿ ೧೩

## ೧೬

ನವರತ್ನ ಖಚಿತ ಮಾಣಿಕ್ಯದ ಮಂಟಪದಿ
ನವವಿಧದ ಹಂಸತೂಲಿಕ ತಲ್ಪದಲಿ
ಭುವನ ಮೋಹನ ಶ್ರೀ ಹರಿ ಪವಡಿಸಿರಲು
ಕವಿಗಳು ಪೊಗಳಿ ಪಾಡುವರು ಶ್ರೀಹರಿಯೆ
ಏಳಯ್ಯ ಬೆಳಗಾಯಿತು ೧

ನಾಗಶಯನನೆ ಏಳು ನಾಗಾರಿವಾಹನನೆ
ನಾಗಸಂಪಿಗೆ ಪಾರಿಜಾತವರಳುತಿದೆ
ಬೇಗದಲಿ ಭಾಗೀರಥಿ ಉದಕವನೆ ತಂದು
ನಾಗಕನ್ನಿಕೆಯರು ಕಾದು ನಿಂತಿಹರು
ಏಳಯ್ಯ ಬೆಳಗಾಯಿತು ೨

ಅತ್ರಿ ವಸಿಷ್ಠ ಭಾರದ್ವಾಜ ಗೌತಮರು
ಸುತ್ತೆಲ್ಲ ಋಷಿಗಳು ಸ್ತೋತ್ರವನೆ ಮಾಡುತ್ತ
ಮಿತ್ರೆರುಕ್ಮಿಣಿ ಭಾಮೆರಿಂದ ಸೇವಿಪ ಹರಿಗೆ
ಮುತ್ತಿನಾರತಿ ಪಿಡಿದು ನಿಂದಿಹರು ಹರಿಯೆ
ಏಳಯ್ಯ ಬೆಳಗಾಯಿತು ೩

ಲಕ್ಷ್ಮಿ ರಮಣನೆ ಏಳು ಪಕ್ಷಿವಾಹನ ಏಳು
ಕುಕ್ಷಿಯೊಳು ಜಗವನಿಂಬಿಟ್ಟವನೆ ಏಳು
ರಕ್ಷ ಶಿಕ್ಷಕ ಜಗದ್ರಕ್ಷಕನೆ ನೀ ಏಳು
ಈಕ್ಷಿಸಿ ಭಜಕರನುದ್ಧರಿಸಲೇಳು
ಏಳಯ್ಯ ಬೆಳಗಾಯಿತು ೨

ಕಮಲ ಮಲ್ಲಿಗೆ ಜಾಜಿ ಕುಸುಮ ಮಾಲೆಗಳನ್ನು
ಕಮಲಾಕ್ಷಿಗರ್ಪಿಸುತ ಹರುಷದಿಂದ
ಕಮಲನಾಭ ವಿಠ್ಠಲ ಸಲಹು ಸಲಹೆಂದೆನುತ
ಕಮಲಭವೇಂದ್ರಾದಿಗಳು ಸ್ತುತಿಸುವರು ಹರಿಯೆ
ಏಳಯ್ಯ ಬೆಳಗಾಯಿತು ೩

ಏಳು ಧೃವವರರೂಪ ಏಳು ನರಹರಿರೂಪ
ಏಳು ನಗಧರ ರೂಪ ಏಳಯ್ಯ ಹರಿಯೆ
ಏಳಯ್ಯ ಬೆಳಗಾಯಿತು

೧೭

ನಾನೆಲ್ಲು ಪೋಗಲಿಲ್ಲ ನಾರಿಯರೆನ್ನ
ದೂರುವರಿದ ನೋಡಮ್ಮ ಪ

ವಾರಿಗೆಯ ಗೆಳತಿಯರು ಸೇರುತ
ಕೂಡಿ ಮಾತುಗಳಾಡಿ ನಗುವರು
ಚಾಡಿ ಮಾತುಗಳ್ಹೇಳ ಬರುವರು
ಕೇಳಿ ಮನದಲಿ ಕೋಪಿಸದಿರು ಅ.ಪ

ಬ್ರಹ್ಮನ ಪಿತನೆಂಬೊರೊ ಎನ್ನನು ಪುಟ್ಟ
ಸಣ್ಣ ಕೂಸೆಂದರಿಯರೆ
ಬ್ರಹ್ಮಾಂಡೋದರನೆಂಬೋರೇ ಕೇಳಮ್ಮಯ್ಯ
ಸಣ್ಣುದುರನೆಂದರಿಯರೆ

ಹಿಂಡುಗೋವ್ಗಳ ವೃಂದದಿ ನಲಿಯುತ
ಮಂದರೋದ್ಧರ ಗೋವಿಂದ ಮುಕುಂದನು ೧

ಉಟ್ಟ ಪೀತಾಂಬರ ಹೊಳೆಯೆ ನಡು
ಕಟ್ಟಿದ ಚಲ್ಲಣ ಹೊಳೆಯೆ
ಸೃಷ್ಟಿಗೊಡೆಯ ಪರಮೇಷ್ಟಿ ಪಿತನು ತನ್ನ
ಪುಟ್ಟ ಕರದಲಿ ಉತ್ತಮನಾದದ ೨

ವಿಧವಿಧಹಾರಗಳಿಂದ ರನ್ನ
ಪದಕದ ಮುತ್ತುಗಳಿಂದ
ಹೃದಯದಿ ಶ್ರೀ ಭೂ ಸಹಿತದಿ ಮೆರೆಯಲು
ಪದುಮನಾಭ ಶ್ರೀ ಚಲ್ವ ಮದನಗೋಪಾಲನು ೩

ಕೋಟಿಸೂರ್ಯರಂದದಲಿ ಬಹು
ಮಾಟದ ಮುಖಕಾಂತಿಯಲಿ
ನೋಟದಿ ಜಗವನೆ ಮೋಹವಗೊಳಿಪ
ಕಿರೀಟಿಯ ಪೊರೆದ ವೈರಾಟನು ಹರುಷದಿ ೪

ಕರ್ಣದಿ ಬಾವುಲಿ ಹೊಳಪು ನವ–
ರನ್ನ ಕಿರೀಟದ ಬೆಳಕು
ಕನ್ನಡಿಯಂದದಿ ಕದುಪಿನ ಝಳಪು ಮೋ–
ಹನ್ನ ಮಾಲೆನಿಟ್ಟ ಸೊಗಸಿನ ವಲಪು ೫

ಮುಖದಲಿ ಮುಂಗುರುಳೊಲಿಯೆ ಪ್ರಿಯ
ಸಖಿಯರು ಹರುಷದಿ ನಲಿಯೆ
ಅಕಳಂಕ ಮಹಿಮನು ಗುಪಿತದಿ ಗೆಳೆಯರ
ಸುಖವ ಪಡಿಸುತಲಿ ಸಖ್ಯದಿಂದ ಪ್ರಿಯನು ೬

ಶ್ರೀಸತಿ ಭೂಸತಿ ರಮಣನ ಪೊಗಳಲು
ಆಶಿಪೆ ಮತಿ ಕರುಣಿಪುದೆಂದು ೪

ಮಂದಗಮನೆ ಉಮೆನಂದನಗೊಂದಿಪೆ
ಚಂದದಿ ಮಂಗಳ ಕೊಡು ಎನುತ
ತಂದೆ ಕಮಲನಾಭ ವಿಠ್ಠಲನ ಪಾಡಲು
ಬಂದ ವಿಘ್ನವ ಕಳೆ ಎನುತ ೫

## ವಚನ

ಹೀಗೆಂದು ಗಣಪತಿ ಪಾರ್ವತಿಯರಿಗೆ ನಮಿಸಿ
ಸೋಮಶೇಖರನ ಮನದಲಿ ಧ್ಯಾನಿಸುತ ನಿತ್ಯ
ಶ್ರೀ ಭಾರತೀ ಶ್ರೀ ಸರಸ್ವತಿಯರ ಸ್ಮರಣೆ ಮಾಡಿ
ಬೇಗದಲಿ ಬ್ರಹ್ಮವಾಯುಗಳ ಧ್ಯಾನವ ಮಾಡಿ
ಶ್ರೀಮಹಾಲಕ್ಷ್ಮಿಯನು ಸ್ತುತಿಸಿ ಮತಿ ಬೇಡುತಲಿ
ನಾಗಶಯನನ ಪಾದ ಧ್ಯಾನಿಸುತ ಹಗಲಿರುಳು
ಗಾಲವ ಚರಿತ್ರೆಯನು ಪೇಳಲುಪಕ್ರಮಿಸಿ
ಶ್ರೀ ಗುರುಗಳಡಿಗಳಿಗೆ ಪ್ರೇಮದಿಂದೊಂದಿಸುತ
ನೇಮದಿಂದಲಿ ವರಗಳನು ಬೇಡುತಲಿ ಕೈ ಮುಗಿವೆನು

## ಕಂದ

ಹೀಗೆನುತಲಿ ಗುರುಹಿರಿಯರಿಗೊಂದಿಸಿ
ಸಾಗರಶಯನನ ಮಹಿಮೆಗಳ ಪೊಗಳುತ್ತ
ಭಾಗವತೋತ್ತಮರಾದ ಗಾಲವ ಚರಿತ್ರೆಯನು
ಪೇಳುವೆ ಮುದದಿ
ಒಂದು ದಿನ ಸ್ನಾನಕೆನುತ ಬಂದ ಮುನಿಪನು
ಇಂದಿರೇಶನಡಿಗಳ ಧ್ಯಾನಿಸುತಲಿದ್ದನು
ಜಲಜನಾಭರ ಗುಣಗಳನ್ನು ನಲಿದು ಪಾಡುತ
ಹಲವು ಬಗೆ ಸೃಷ್ಟಿಗಳ ನೋಡಿ ಹರುಷ ತಾಳುತ

ಮುರಳಿಯ ಲೋಲನ ಪರಿಪರಿ ಸ್ತುತಿಸುತ
ಪರಮಾತ್ಮನ ಸಂದರ್ಶನ ಮಾಡಲು ೧

ಹರಿ ಕೃಷ್ಣ ಹರಿ ಕೃಷ್ಣ ಹರಿ ನಾರಾಯಣ ಕೃಷ್ಣ
ಮುರವೈರಿ ಮಧುಸೂದನ ಕೃಷ್ಣ ಮಾಧವ
ಶರಣು ರಕ್ಷಕನೆಂಬೊ ಬಿರುದು ಪೊತ್ತಿಹೆ ದೇವ
ಕರುಣಾಕರನೆ ಹರಿ ರಕ್ಷಿಸು ರಕ್ಷಿಸೆಂದು ೨

ಶ್ರೀರಮಣಿಯ ಪ್ರಿಯ ಗಾನ ವಿಲೋಲನೆ
ದ್ವಾರಕಾಪುರವಾಸ ಶ್ರೀನಿಧೆ ಕೇಶವ
ಮಾರನಪಿತ ಕಮಲನಾಭ ವಿಠ್ಠಲದೇವ
ವಾರಿಧಿಶಯನನೆ ಒಲಿದು ಬಾ ಮನಕೆಂದು ೩

## ಆರ‍್ಯ

ಮುರವೈರಿಯೆ ಹರಿ ಕೃಷ್ಣನೆ ಪಾಲಿಸು
ಮುರಳೀಧರ ಮಧುಸೂದನನೆ
ಕರುಣಾಕರ ಕರಪಿಡಿದು ರಕ್ಷಿಸೈ
ಶರಣು ಹೊಕ್ಕಿರುವೆ ಹರಿ ಕೃಷ್ಣ

## ವಚನ

ಲೋಕಪತಿ ರಕ್ಷಿಸು ರಕ್ಷಿಸೆಂದನುತಾಗ
ನಾಕದಿಂದಿಳಿದು ಬರುತಿರುವ ಮುನಿಗಳ ಕಂಡು
ಅನೇಕ ವಿಧ ಭಕ್ತಿಯಿಂದ ಸ್ತುತಿಸೆ ಗಾಲವರಾಗ
ಶ್ರೀಕಾಂತನ ಭಕ್ತಗಾಲವರ ಕಂಡು ನಾರದರು
ಯಾಕಿಂತು ಚಿಂತಿಪಿರಿ ಗಾಲವರೆ ಎಂದೆನಲು
ಕೇಳಿ ಮಾತನು ಧೈರ್ಯ ತಾಳಿ ನುಡಿದರು ಮುನಿಗಳು

ಕೇಳೋ ಮುನಿವರ ನಾ ಪೇಳ್ವ ನುಡಿಯ
ಕೇಳೋ ಮನದಿ ಕಳವಳಿಸುತ ಏಳಿದನಾದೆ ಜಗದೊಳು ಪ

ಬೆಣ್ಣೆ ಕಳ್ಳನು ಸಣ್ಣವನು ಎಂದು
ಕಣ್ಣು ಸನ್ನೆಗೆ ಚಂದ ನಗುವರು
ಚಿನ್ನನೆಂದು ಮುದ್ದಿಸುವರೆನ್ನುತ
ಕನ್ಯೆಯರು ಅಪಹಾಸ್ಯ ಮಾಳ್ಪರು ೧

ನೀರ ಪೊಕ್ಕವನೆಂಬೋರೆ ವೇದ ತಂದಿತ್ತ
ನಾರುವ ಮಯ್ಯವನೆಂಬೋರೇ
ಭಾರ ಪೊತ್ತವನೆಂಬೋರೇ ಮೋರೆ ತಗ್ಗಿಸಿದ
ಘೋರರೂಪನು ಎಂಬೋರೇ
ಕೋರೆ ದಾಡಿಯ ನೆಗಹಿ ಧರಣಿಯ
ಶೂರ ಹಿರಣ್ಯಾಕ್ಷಕನ ಸೀಳಿದ
ಕ್ರೂರ ರೂಪವ ಧರಿಸಿ ಕರುಳಿನ
ಮಾಲೆ ಹಾಕಿದ ಧೀರನೆಂಬೋರು ೨

ಮೂರು ಪಾದದ ಭೂಮಿಯ ಬೇಡಲು ಬ್ರಹ್ಮ-
ಚಾರಿಯಾದನು ಎಂಬೋರೇ
ಮೂರು ಏಳೆನಿಸಿಕೊಂಡು ಧರಣಿಯ ಸುತ್ತಿದ
ಧೀರ ರಾಮನು ಎಂಬೋರೇ
ನಾರು ವಸ್ತ್ರವ ಧರಿಸಿ ವನ ವನ ಸೇರಿ
ವಾನರರೊಡನೆ ಚರಿಸಿದ
ನಾರಿಯರ ವಸ್ತ್ರಗಳ ಕದ್ದ ನವ-
ನೀತ ಚೋರನೆಂದೆನಿಸುತ ನಗುವರು ೩

ಬತ್ತಲಿರುವನೆಂಬೋರೇ ತ್ರಿಪುರಗೆದ್ದ
ಉತ್ತಮ ಹರಿ ಎಂಬೋರೇ
ಉತ್ತುಮಾಶ್ವವನೇರುತ ಧರೆಯಲಿ ಮೆರೆದ
ಮತ್ತೆ ರಾವುತನೆಂಬೋರೇ
ಹತ್ತು ವಿಧದಲಿ ಅವತರಿಸಿ ನಿಜ
ಭಕ್ತರನು ರಕ್ಷಿಸಿದೆನೆಂಬೋರು

ಸರಸಿಜನಾಭನೆ ಮುರಳಿಧರನೆ ಹರಿ
ಪರಮಪುರುಷ ಪಾವನರೂಪ
ಸುರಗಂಧರ್ವರು ಸ್ತುತಿಸುತ ಪಾಡ್ವರು
ವಿನುತ ಸುತ ವಾಹನ ಹರಿಯೇ ೨

ಆದಿಪುರುಷ ಪುರುಷೋತ್ತಮ ಹರಿ ಈ
ಕ್ರೋಧಿ ವತ್ಸರ ಶುಭದಿನಗಳಲಿ
ಆದರದಲಿ ಗುರುಹಿರಿಯರ ಸೇವಿಸಿ
ಶ್ರೀಧರನನ್ನು ಭಕ್ತಿಲಿ ಭಜಿಸಿ ૩

ಗೋಕುಲಪತಿ ಗೋವಿಂದ ಮುಕುಂದನೆ
ಮಾತುಳಾಂತಕ ಮಧುಸೂದನನೆ
ಗೋಪತಿ ಕೃಷ್ಣನೆ ಸಲಹುವ ಸುಜನರ
ಮೂಕಾಂಬಿಕೆ ನಾಮವ ಧರಿಸಿ ೪

ಕಡುಹರುಷದಿ ನಿನ್ನಡಿಗಳಿಗೆರಗುವೆ
ಬಿಡದೆ ರಕ್ಷಿಸೆಂದೆನ್ನುತಲಿ
ಕರುಣದಿ ಕಾಪಾಡುತ ಸಲಹುವದು
ಕಮಲನಾಭ ವಿಠ್ಠಲ ದೇವ ೫

## ೩೫

ಮುರುಳಿಯ ನೂದಿದನಾಗ ಹರಿ
ವಿಧವಿಧರಾಗದೊಳೀಗ ಪ

ತುರುಗಳ ಕಾಯುತ ತರಳರ ಒಡಗೂಡಿ
ಸುರಮುನಿವಂದಿತ ಸರಸಿಜನಾಭನು ಅ.ಪ

ಚಂದದ ಪಾಡಗರುಳಿಯು ಕಾ-
ಲಂದುಗೆ ಕಿರುಗೆಜ್ಜೆ ಧ್ವನಿಯು

ಮುಕ್ತಿದಾಯಕ ಹರಿಗೆ ಸಮರು
ಅಧಿಕರ್‍ಯಾರಿಲ್ಲೆನುತ ನಗುವರು ೪

ಮುದ್ದು ಮಾತಗಳ ಕೇಳಿ ಸಂಭ್ರಮದಿಂದ
ಎದ್ದು ಮಗನನಪ್ಪುತ
ಶ್ರದ್ಧೆಯಿಂದಲಿ ನೋಡುವ ತೊಡೆಯಲಿಟ್ಟು
ಮುದ್ದಿಸಿ ನಸುನಗುತಾ
ಪದ್ಮನಾಭ ಶ್ರೀ ಕಮಲನಾಭನ ವಿ-
ಠ್ಠಲನ ಮುಡಿನೇವರಿಸಿ ಹರುಷದಿ
ತಿದ್ದುತಲಿ ಮುಂಗುರಳು ನಗುಮುಖ
ಮುದ್ದಿಸುತ ಮುದದಿಂದ ನಲಿವಳು ೫

ಲಾಲಿಸಿದಳು ಮಗನ ಗೋಪೀದೇವಿ
ಲಾಲಿಸಿದಳು ಮಗನ

## ೧೮

ನೂತನಕೆ ನೂತನ ಬಲು ನೂತನ
ಶೇಷಗಿರಿವಾಸ ನಿನ್ನ ಮಹಿಮೆ ನೂತನವು ಪ

ಮಾಡದನೆ ಮಾಡಿಸುವಿ ನೋಡದನೆ ನೋಡಿಸುವಿ
ಬೇಡದಿದ್ದುದನೆಲ್ಲ ಕಾಡಿ ಬೇಡಿಸುವಿ
ನಾಡೊಳಗೆ ನಿನ್ನ ಪೋಲುವರುಂಟೆ ಸರ್ವೇಶ
ಮೂಡಲಗಿರಿವಾಸ ನಿನ್ನ ಮಹಿಮೆ ನೂತನವು ೧

ಅಣುಮೇರು ಮಾಡಿಸುವಿ ಘನತೃಣವ ಮಾಡಿಸುವಿ
ಘನ ಕೃಪಾಂಬುಧಿ ನಿನ್ನ ಮಹಿಮೆ ನೂತನವೊ
ಅಣಕವಾಡುವರಲ್ಲಿ ಕುಣಿಸಿ ಮರೆಸುತಲಿರುವಿ
ಫಣಿಶಾಯಿ ನಿನ್ನ ಮಹಿಮೆ ಪ್ರತಿಕ್ಷಣಕೆ ನೂತನವು ೨

ನವನೀತ ಚೋರನೆ ಮನೆಮನೆಗಳ ಪೊಕ್ಕು
ಗಾರು ಮಾಡಿದ ಕೃಷ್ಣ ಹರಿಯೆಂದು ಸ್ಮರಿಸದೆ ೪

ಚಿತ್ತಲೆ ನಿಂತರು ಉತ್ತಮ ನೆನಿಸಿದಿ
ಸತ್ಯಮೂರುತಿ ಪುರುಷೋತ್ತಮನೆ
ಕತ್ತಿ ಕಯ್ಯಲಿ ಪಿಡಿದು ಮತ್ತೆರಾವುತನಾಗಿ
ಸುತ್ತಿ ಸುತ್ತಿದ ಸರ್ವೋತ್ತಮನರಿಯದೆ ೫

ಭಕ್ತವತ್ಸಲಸ್ವಾಮಿ ಭಯನಿವಾರಣನೆಂದು
ಭೃತ್ಯರು ನೃತ್ಯದಿ ಕುಣಿಯುವರೊ
ಸತ್ಯ ಸಂಕಲ್ಪನೆ ಸತ್ಯಭಾಮೆಯ ಪ್ರಿಯ
ಭಕ್ತರೊಡೆಯ ಪರವಸ್ತುವ ಸ್ಮರಿಸದೆ ೬

ಕರುಣವಾರಿಧಿಯೆಂದು ಸ್ಮರಿಸುವ ಭಕುತರ
ಪರಿ ಪರಿ ಅಘಗಳು ಪರಿಹಾರವೊ
ಶರಧಿಸುತೆಯ ಪತಿ ಕಮಲನಾಭ ವಿಠ್ಠಲ
ಸ್ಮರಿಸದೆ ಅಪರಾಧ ಸಲಹೆಂದು ಸ್ಮರಿಸದೆ ೭

## ೩೪

ಮಾಧವ ಮಧುಸೂದನ ಕೇಶವ ಹರೆ
ಯಾದವ ಕೃಷ್ಣ ಶ್ರೀಹರಿ ಶೌರೆ ಪ

ವೇದವೇದ್ಯ ಸನ್ಮುನಿಗುಣ ಸೇವಿತ
ಸಾಧುವಂದಿತ ಚರಣಕೆ ನಮಿಪೆ ಅ.ಪ

ಮಂದರಧರ ಗೋವಿಂದ ಮುಕುಂದನೆ
ಇಂದಿರೆಯರಸ ಹೃನ್ಮಂದಿರದಿ
ಮಂದಗಮನೆ ಮಹಾಲಕ್ಷ್ಮಿಯೊಡನೆ ಆ-
ನಂದದಿ ನಲಿನಲಿದಾಡು ಹರಿ ೧

ಗುಲ್ಲು ಮಾಡದೆ ಕವಣೆ ಕಲ್ಲಿಂದ ಕುಂಭ ಒಡೆಯೆ
ಚಲ್ಲಿ ಪಾಲ್ಮೊಸರು ಸೂರೆ ನಲ್ಲೆ ನೀ ನೋಡೆಂಬರು ೭

ಮತ್ತೆ ಕೇಳಮ್ಮ ಯಶೋದೆ ನಾವೆಲ್ಲ ಆಣಿ
ಮುತ್ತು ಪೋಣಿಸುತಿರಲು
ಸುತ್ತ ಮುತ್ತಲು ನೋಡಿ ಮುತ್ತು ಸೂರೆ ಮಾಡಿದ
ಕರ್ತೃ ಶ್ರೀ ಕಮಲನಾಭ ವಿಠ್ಠಲನ ನೋಡೆಂಬರು ೫

## ೩೩

ಮರೆತು ಹೋದೆನೊ ದೇವ ರಂಗಯ್ಯ ರಂಗ
ಸಿರಿದೇವಿ ರಮಣನೆ ಪರನೆಂದು ತಿಳಿಯದೆ ಪ

ನೀರೊಳು ಮುಳುಗುತ್ತ ಮೀನಮತ್ಸ್ಯನು ಎಂದು
ವೇದವ ತಂದಿತ್ತೆ ದೇವೇಶನೆ
ವಾರಿಧಿಶಯನನೆ ವಾರಿಜಾಕ್ಷನು ಎಂದು
ಸಾರಸಾಕ್ಷನ ಗುಣ ಸ್ಮರಿಸದೇ ಮನದಲಿ ೧

ಬೆಟ್ಟ ಬೆನ್ನಿಲಿ ಪೊತ್ತು ಪೊಕ್ಕು ನೀರೊಳು ಬೇಗ
ಭಕ್ತರನುದ್ಧರಿಸಿದ ದೇವನ
ಪೃಥ್ವಿಯ ಕೋರೆಯಿಂದೆತ್ತಿ ಅಸುರನ ಕೊಂದ
ಸಿಸ್ತು ತೋರಿದ ಪರವಸ್ತುವ ಸ್ಮರಿಸದೆ ೨

ಘುಡು ಘುಡಿಸುತ ಬಂದು ಒಡಲ ಸೀಳಲು ಖಳನ
ಅಡವಿ ಮೃಗವು ಎಂದು ಬೆರಗಾದೆನೊ
ಹುಡುಗನಂದದಿ ಪೋಗಿ ಪೊಡವಿಪಾಲಕನ ಬೇಡಿ
ಕೊಡಲಿಯ ಪಿಡಿಯುತ್ತ ತಾಯತರಿದನ ಸ್ಮರಿಸದೆ ೩

ನಾರಿಯನರಸುತ ವನವ ಚರಿಸಿದಿ
ನಾರಿಚೋರನ ಕೊಂದೆ ವಾನರ ಸಹಿತ

ಕಮಲಸಂಭವ ಪಿತನೆ ಕಮಲಜಾತೆಯ ರಮಣ
ವಿಮಲ ಮುನಿಗಳ ಹೃದಯ ಕಮಲ ಶೋಭಿತನೆ
ಕಮಲದಳನೇತ್ರನೆ ಕಮಲನಾಭ ವಿಠ್ಠಲ
ಕಮನೀಯ ರೂಪ ನಿನ್ನ ಮಹಿಮೆ ನೂತನವೊ ೩

## ೧೯

ಪವಡಿಸು ಪರಮಾತ್ಮಾ ಶ್ರೀ ಶ್ರೀಶಾ
ಪವಡಿಸು ಪರಮಾತ್ಮಾ ಪ

ಪರಮ ಭಕ್ತರನು ಪೊರೆಯುವ ದೇವನೆ ಅ.ಪ

ರನ್ನಮಂಟಪದೊಳು ಕನ್ನಡಿಯಂದದಿ
ಸ್ವರ್ಣವರ್ಣದಲಿಹ ಪನ್ನಂಗ ಕಾದಿಹ ೧

ಸುತ್ತಲು ತುಂಬುರರು ನಾರದರು ಸ್ತೋತ್ರವ ಮಾಡಿ
ಅತ್ಯಂತ ಹರುಷದಿ ಚಿತ್ತೈಸೆಂದೆನುವರು ೨

ಥಳಥಳಿಸುವ ದಿವ್ಯತಾರೆಗಳಂದದಿ
ಲಲನೆ ಶ್ರೀ ಭೂದೇವಿಯರು ಸೇವಿಪರು ನಿನ್ನ ೩

ವೇದವ ಕದ್ದನ ಭೇದಿಸಿ ಅಜನಿಗೆ
ವೇದವ ತಂದಿತ್ತು ಆದರಿಸಿದ ದೇವ ೪

ಮುಳುಗಿದ ಗಿರಿಯನು ಧರಿಸಿ ಬೆನ್ನಲಿ ಬೇಗ
ಸುರರಿಗೆ ಅಮೃತವ ಕುಡಿಸಿದ ಮಾಧವ ೫

ಸುರಮುನಿಗಳಿಗೆಲ್ಲಾ ಅಭಯವ ನೀಡುತ
ವರಹ ರೂಪ ತಾಳಿ ಬಳಲಿ ದಣಿದು ಬಂದಿ ೬

ತರುಳರೀರ್ವರ ಪೊರೆದೆ ಕಾನನದೊಳು
ವರ ಪಾಂಡವರ ಸಲಹಿದೆ
ತರುಣಿ ದ್ರೌಪದಿ ಸೀರೆ ಸೆಳೆಯುತ
ದುರುಳ ಮದದೊಳು ಮೆರೆಯುತಿರಲು
ಸರಸರನೆ ಸೀರೆಗಳ ಪರ್ವತ-
ತೆರದೊಳಕ್ಷಯ ಮಾಡಿ ಸಲಹಿದೆ ೨

ಹರಿ ನಿನ್ನ ನೆರೆನಂಬಿದ ಸುಜನರೆಲ್ಲ
ದುರಿತಗಳ್ಹರಿಸಿಕಾಯ್ದೆ
ಪರಮ ಪಾವನ ಚರಿತ ಕಮಲ-
ನಾಭ ವಿಠ್ಠಲನೆ ವಲಿದು ಕರುಣದಿ
ಪರಮ ಭಕುತರ ಮೊರೆಯ ಲಾಲಿಸಿ
ಪೊರೆಯುವುದು ಸಿರಿವರನೆ ಕರುಣದಿ ೩

## ವಚನ

ಈ ರೀತಿಯಿಂದಲಿ ಸ್ತುತಿಸುತ್ತ ಬರುತಿರುವ
ನಾರದರ ನೋಡಿ ನಸುನಗುತ ನುಡಿದನು ಹೀಗೆ
ಕೇಳು ರುಕ್ಮಿಣಿ ನಾರದರು ಮಾಡಿರುವ ತಂತ್ರ
ಗಾಲವರಿಗೀಗ ಸಹಾಯ ಮಾಡಬೇಕೆಂದೆನುತ
ಈಗ ಇಲ್ಲಿಗೆ ಬರುತಿರುವ ನಾರದರ ನೋಡು

## ಶ್ಲೋಕ

ಕೃಷ್ಣಾಯ ವಾಸುದೇವಾಯ ರುಕ್ಮಿಣೀ ರಮಣಾಯ ಚ
ಸತ್ಯಭಾಮಪ್ರಿಯಾಯ ಹರಿಯೆ ಹರಿಯೆ ಶ್ರೀ ಹರಿಯೆ
ನಮೋ ನಮೋ ನಮ:

## ವಚನ

ಹೀಗೆಂದು ಶ್ರೀ ಹರಿಯ ಸ್ತೋತ್ರವಂ ಮಾಡಿ
ವಂದಿಸುತ ಕರಮುಗಿದು ನಿಂದಿರುವ ನಾರದರ

ಹರಿಸ್ಮರಣೆ ಮಾಡುತ್ತ ನಿರುತದಲಿ ಭಕ್ತರಿಗೆ
ಪರಿ ಪರಿ ಕ್ಲೇಶಗಳ ಪರಿಹಾರ ಮಾಡುವರು
ದುರಿತ ದೂರನ ಸ್ಮರಣೆ ಮಾಡುತಲೆ ನಿತ್ಯದಲಿ
ದುರುಳ ಕಲಿಬಾಧೆಗಳ ತಡೆದು ನಿಲ್ಲಿಸುತಿಹರು
ತರಳರನು ತಿದ್ದುವಂದದಲಿ ಶಿಷ್ಯರಿಗುಪದೇಶಿಸುತ
ಕಲಿಯುಗದ ಮನುಜರಲ್ಪಾಯುಗಳ ಕಳೆಯದಲೆ
ಸುಲಭದಲಿ ಮುಕ್ತಿಯನು ಪಡೆಯುವಂಥ ಮಾರ್ಗ
ಬೋಧಿಸುವ ಸದ್ಗ್ರಂಥಗಳನೆ ರಚಿಸುತ ಬಹಳ
ಸುಲಭವಾಗಿಹ ಪದಸುಳಾದಿಗಳ ರಚಿಸುತ್ತ
ತೀರ್ಥಕ್ಷೇತ್ರಗಳ ಮಹಿಮೆ ಲಕ್ಷ ಇಪ್ಪತ್ತೈದು ಸಾವಿರವು
ಶ್ರೀ ಮದಾಚಾರ್ಯರ ಮಹಿಮೆ ತಂತ್ರಸಾರವು
ತಾರತಮ್ಯವು ಐದುಸಾವಿರವು ರಚಿಸುತ್ತ
ಬ್ರಹ್ಮಲೋಕವು ವರ ಕೈಲಾಸ ದಿಕ್ಪಾಲಕರ
ಲೋಕಂಗಳ ವರ್ಣನೆಯು ತೊಂಭತ್ತು ಸಾವಿರವು
ಪುರಾಣ ಕಥೆಗಳ ಸಾರ ತೊಂಭತ್ತು ಸಾವಿರವು
ದೇವತೆಗಳ ಮೂರ್ತಿ ಧ್ಯಾನ ಗಂಡಕಿ ಮಹಾತ್ಮೆಗಳು
ಕಲ್ಯಾಣ ಚರಿತೆಗಳು ಅರವತ್ತು ಸಾವಿರವು
ಅಹ್ನೀಕ ಪದ್ಧತಿ ಏಕಾದಶಿ ಜಯಂತಿ
ನಿರ್ಣಯ ಮೊದಲಾದುದರವತ್ತು ಸಾವಿರವು
ಸುಳಾದಿಗಳು ಅರವತ್ತು ನಾಲ್ಕು ಸಾವಿರವು ರಚಿಸಿ
ಹರಿಕೀರ್ತನೆಗಳು ಇಪ್ಪತ್ತೈದು ಸಾವಿರವು
ನರಹರಿ ದಯದಿಂದ ನಾಲ್ಕು ಲಕ್ಷವು ಮುಗಿಸಿ
ಯದುಕುಲೇಶನ ದಯದಿ ಎಪ್ಪತ್ತೈದು ಸಾವಿರವು ರಚಿಸಿ
ಪದ ಸುಳಾದಿಗಳನ್ನು ಶ್ರೀಹರಿಗೆ ಅರ್ಪಿಸುತ
ಅತಿ ಸಂಭ್ರಮದಲಿ ಶ್ರೀ ಹರಿಯನ್ನು ಸ್ಮರಿಸಿ
ಕರುಣಿಸೈ ಕಮಲನಾಭ ವಿಠ್ಠಲನೇ ಎಂ–
ದ್ಹಗಲಿರುಳು ಧ್ಯಾನಿಸುತಲಿ

ಸ್ನಾನ ಮಾಡಿ ಜಪತಪಗಳ ನೇಮದಿಂದಲಿ
ಭಾನುಗರ್ಘ್ಯವನೆ ಕೊಡುತ ಬೇಗದಿಂದಲಿ ೩

ಕರದಿ ಜಲವ ಪಿಡಿದು ನೋಡೆ ಮಲಿನವಾಗಲು
ತರತರದಲಿ ಯೋಚಿಸುತಲಿ ವ್ಯಾಕುಲನಾಗಲು ೪

ಸ್ವಸ್ಥಚಿತ್ತವಿಲ್ಲದಿರುವ ಮನದಿ ಯೋಚಿಸಿ
ಅಸ್ತಮಾನದೊಳವನ ಸಿರವ ತರಿವೆನೆನುತಲಿ ೫

ಕೊಟ್ಟು ಶಾಪ ಯೋಚಿಸಿದನು ಕಟ್ಟಕಡೆಯಲಿ
ಕೆಟ್ಟೆನಕಟ ಎನುತ ಹರಿಯ ನಾಮಸ್ಮರಣೆಲಿ ೬

ದೃಢವು ಮನಕೆ ಆಗದಿರಲು ಕಳವಳಿಸಿದನು
ಕಡಲಶಯನ ಕಮಲನಾಭ ವಿಠ್ಠಲನೆಂದನು ೭

## ವಚನ

ಈ ರೀತಿಯಿಂದ ಕಳವಳಿಸುತ್ತ ಗಾಲವರು
ವ್ಯಾಕುಲದಿ ಚಿಂತಿಸುತ ನಾಲ್ಕು ಕಡೆ ನೋಡುತ್ತ
ಯಾಕಿಂತು ಪ್ರೇರಿಸಿದೆಯೋ ಸ್ವಾಮಿಯೆ ಎಂದು ಹಲುಬುತ್ತ
ವ್ಯಾಕುಲದಿ ಮುನಿಯು ಆಲೋಚಿಸುವ ಸಮಯದಲಿ
ಆ ಕಾಲದಲಿ ಹರಿಯ ನಾಮಗಳ ಭಜಿಸುತ್ತ
ಲೋಕಕುಪಕಾರಿ ನಾರದರು ಬಂದರಾಗ

ಬಂದ ನಾರದ ಮುನಿ ಹರಿನಾಮ ಸ್ಮರಣೇಲಿ
ಬಂದ ನಾರದ ಮುನಿ ಪ

ಇಂದಿರೇಶನ ಗುಣಗಾನ ಪಾಡುತ ಅ.ಪ

ಕರದಲಿ ವೀಣೆಯು ಕೊರಳೊಳು ಮಣಿಮಾಲೆ
ಬೆರಳುಗಳಿಂದ ವೀಣೆಯ ನುಡಿಸುತಲಿ

ಮರದ ಮೇಲಿನ ಹಕ್ಕಿಗಳೆಲ್ಲಾ
ಬರಬರ ರೆಕ್ಕೆಗಳನ್ನೆ ಒದರುತ
ಮರಿಗಳು ಸಹಿತದಿ ಉದಯವ ಕಂಡು
ಮುದದೊಳಗಿರುತಿಹವು ೧

ರೆಕ್ಕೆಗಳನ್ನೆ ಪಸರಿಸಿಕೊಂಡು
ನರ್ತಿಸುತಿರುತಿಹ ನವಿಲ್ಹಿಂಡುಗಳು
ಅರ್ಥಿಲಿ ಕುಣಿಯುವ ಸೊಬಗನು ನೋಡಲು
ವಿಚಿತ್ರವು ತೋರುವದು ೨

ಪಾರಿವಾಳವು ಕೋಗಿಲೆ ಹಿಂಡು
ರಾಗವ ಪಾಡುತಲಿರುವುದು ಕಂಡು
ಸಾರಂಗವು ಜಿಂಕೆಯ ಮರಿಗಳನು
ನೋಡಲು ಸಂತಸವು ೩

ನೀರಿನ ಮಧ್ಯೆ ತಾವರೆ ಹೂಗಳು
ತೋರುತ ಮನಕುಲ್ಲಾಸವ ಕೊಡುವುದು
ದೂರದಲಾಡುವ ಚಕ್ರವಾಕಗಳು
ಶುಕ ಪಿಕ ಹಂಸಗಳು ೪

ನೀರಿನ ಮೇಲಾಡುವ ಕೋಳಿಗಳು
ಸಾರಸ ಪಕ್ಷಿಗಳೆಲ್ಲವು ಜಲದೊಳು
ಬಾರಿ ಬಾರಿಗೆ ಮುಳುಗೇಳುವ ಮರಿಗಳು
ತೋರುವದಚ್ಚರಿಯು ೫

ಜಲದ ಮಧ್ಯೆ ಹರಿಯ ಗುಣಗಳನು ಸ್ಮರಿಸುತ
ಹಲವು ಬಗೆಯ ಸೃಷ್ಟಿ ಶೋಭೆಯನು ಪೊಗಳುತ್ತ ೧

ಹರಿಪಾದೋದ್ಭವೆಯ ಮಹಿಮೆಯನು ಸ್ಮರಿಸುತ
ಹರಿವ ನದಿಯ ಜಲದೊಳಿಳಿದು ಸ್ನಾನ ಮಾಡುತ ೨

## ವಚನ

ಈ ರೀತಿಯಿಂದ ದು:ಖಿಸುವ ನಾಯಕನಾಗ
ಧಾರೆ ಕಣ್ಣಿಂದ ಜಲ ಸುರಿಸುತಲಿ ಭಕ್ತಿಯಲಿ
ಮಾರಮಣನಾಜ್ಞೆಯಂದದಿ ವರ್ತಿಸುವೆನೆಂದು
ತಾನು ಧರಿಸಿದ ಮುತ್ತು ರತ್ನಧಾಭರಣಗಳು
ಭಾರಿ ಪೀತಾಂಬರವ ಬಿಸುಟನಾ ನಾಯಕನು
ಚೀರ ವಸ್ತ್ರವನುಟ್ಟು ತಾಳ ಕಯ್ಯಲಿ ಪಿಡಿದು
ಜೋಳಿಗೆಯ ಧರಿಸಿ ಕೊಂಡಾಡುತಲಿ ಶ್ರೀಹರಿಯ
ಬೀದಿಯಲಿ ಬರುತಿರಲು ಬಾಲಕರು ಸತಿಸಹಿತ
ನೋಡಿದವರೆಲ್ಲ ಚೋದ್ಯವ ಪಟ್ಟು ಗುಂಪಾಗಿ
ನಾಯಕರ ಬೆನ್ಹತ್ತಿ ಬರುತಿರುವ ಸಮಯದಲಿ
ಹೀಗೆ ಬರುಬರುತ ಪುರಂದರಗಡದ ಬೀದಿಯಲಿ
ಮಾರನಯ್ಯನ ಸ್ತುತಿಸಿ ಕೊಂಡಾಡುತಿರುವಲ್ಲಿ
ಶ್ರೀರಮಣ ನೋಡಿ ಸಂತೋಷದಿಂದಲಿ ನಗುತ
ಬಾಲಕನ ಸಹಿತ ಬಡಬ್ರಾಹ್ಮಣನಾಗಿ ಕಾಣಿಸಲು
ನೋಡಿ ನಾಯಕನಾಗ ಅಪಾರ ಸಂಭ್ರಮದಿಂದ
ಗಾಢದಿಂ ಸಾಷ್ಟಾಂಗ ವಂದನೆಯ ಮಾಡುತಲಿ
ಮಾತನಾಡುವೆನೆಂದು ಕಣ್ತೆರೆದು ನೋಡಲು
ಗಾಡಿಕಾರ ಕೃಷ್ಣನು ಮಾಯವಾಗಿರಲಾಗ
ಕಾಣದೆ ಕಮಲನಾಭ ವಿಠ್ಠಲನು ಎಂದೆನುತ ತಿಳಿದು

## ಆರ‍್ಯ

ನೋಡಿದ್ಯಾ ಸರಸ್ವತಿ ಶ್ರೀಹರಿ ಬಂದುದು ಮಾ-
ತಾಡಲಿಲ್ಲ ಆ ಹರಿಯೊಡನೆ
ಮಾಡುತ ವಂದನೆ ಏಳುವ ಸಮಯಕೆ
ಮಾಧವ ಮರೆಯಾದನೆಂದೆನಲು ೧

ಕೇಳುತಲಾಸತಿ ನುಡಿದಳು ವಿನಯದಿ
ನೋಡಲಿಲ್ಲ ನಾನೆಂದೆನಲು

ಪಂಚ ಜ್ಞಾನೇಂದ್ರಿಯಗಳು ಶ್ರೀಲಕ್ಷ್ಮೀ-
ಕಾಂತನ ಸೇವಿಸದಲೇ ಇಹವೊ ೬

ಪಂಚಶರನ ಪಿತನರ್ಚಿಸದಲೆ ಈ
ಪಂಚತನ್ಮಾತ್ರಾದಿಗಳೆಲ್ಲಾ
ಪಂಚ ಭೂತಾತ್ಮಕವಾದ ಈ ದೇಹವು ಅ-
ಚಿಂತ್ಯ ಮಹಿಮನನು ಮರತಿಹವೊ ೭

ಮನಸ್ಸು ಬುದ್ಧಿ ಚಿತ್ತವು ಅಹಂಕಾರವು
ಚೇತನ ಇವುಗಳೆಲ್ಲವು ಕೂಡಿ
ಘನ ಮಹಿಮನ ಒಲುಮೆಯ ಪಡೆಯದೆ ವೃಥಾ
ಜನುಮಗಳನೆ ತಾಳುತಲಿಹವೊ ೮

ಕಾಲಕರ್ಮಗಳನು ಸರಿಸುತ ಹರಿ
ಲೀಲಾಮಾತ್ರದಿ ವಿಹರಿಸುತ
ಕಾಲಕಾಲಕೆ ತಕ್ಕ ಪ್ರೇರಣೆ ಮಾಡುತ
ಕಮಲನಾಭ ವಿಠ್ಠಲನು ನಲಿದಾಡುವ ೯

## ಆರ‍್ಯ

ಕೇಳಿರಿ ಚಿತ್ರವುದಾಸರ ಮಂದಿರ
ದ್ವಾರದಿ ನೋಡಲು ಪ್ರತಿದಿನವು
ಆಸತಿ ಏಳದ ಮುನ್ನೆಯೆ ಸಾರಿಸಿ
ವಿಚಿತ್ರ ಚಿತ್ರಗಳ ಬರೆದಿರಲು

## ಕಂದ

ಕೇಳಿದಳಾಗಲೆ ತರುಣಿಯು
ಏನಿದು ಆಶ್ಚರ್ಯವು ತಿಳಿಯದು ಎನಗೆ
ನಾನೇಳದ ಮುನ್ನವೆ ಈ ಪರಿ
ಕಾರ್ಯವ ಮಾಡುವರ‍್ಯಾರೋ ನಾನೋಡುತಲಿರುವೆ

ಬೀಳಲು ಪೊಡವಿಲಿ ಗಾಢನೆ ನಿಮ್ಮನು
ಆದರಿಸಿದೆನೆಂದನಲಾಗ ೨

ಕೇಳೆಲೆ ಕಾಮಿನಿ ನಾ ಬಹುಪಾಪಿಯು
ಶ್ರೀಧರ ಎನ್ನ ಪರೀಕ್ಷಿಸುವ
ಆದರದಲಿ ಸ್ತುತಿಸುತ ಕೊಂಡಾಡುವೆ
ಶ್ರೀಧ ಕಮಲನಾಭ ವಿಠ್ಠಲನ ೩

ಅಪರಾಧಿಯು ನಾನಾದೆನೆ ಶ್ರೀಹರಿ
ಕೃಪೆಯಿಂದಲಿ ಸಲಹೊ ಪ

ಆ ಪರಮಾತ್ಮನೆ ನೀನೆನ್ನುತ ತಿಳಿಯದ
ಅವಿವೇಕವು ನನ್ನದೆ ಶ್ರೀಕೃಷ್ಣಾ ಅ.ಪ

ಕರೆ ಕರೆ ಭವದೊಳು ಸಿಲುಕಿದ ಅಜಮಿಳ
ತರಳ ನಾರಗನೆಂದು ಕರೆಯುತಿರೆ
ಕರುಣದಿಂದಲಿ ಅವನ ದುರಿತವ ಕಳೆಯುತ
ಪೊರೆದವ ನೀನಲ್ಲವೆ ಶ್ರೀನರಹರಿ ೧

ಬಡವಿಪ್ರನ ವೇಷದಿ ಬಂದೆನ್ನನು
ಕೊಡುದಾನವನೆಂದು ಕೇಳುತಿರೆ
ಬಿಡದಲೆ ಆರು ಮಾಸಗಳ ತಿರುಗಿಸಿ
ಹಿಡಿಯದ ನಾಣ್ಯವು ಕೊಡಲು ಪ್ರೇರೆಪಿಸಿದೆಯೊ ೨

ನಿಲ್ಲದೆ ಪೋಗಿ ಎನ್ನ ವಲ್ಲಭೆಯನು ಬಹು
ಲಲ್ಲೆ ಮಾತುಗಳಿಂದ ಹೊಗಳುತಲಿ
ಸೊಲ್ಲಿಗೆ ಮರುಳಾದ ಸರಸ್ವತಿ ಬೇಗದಿ
ಸೊಲ್ಲೆತ್ತದೆ ಮೂಗುತಿ ನಿನಗಿತ್ತಳು ೩

ವರದಾಯಕ ಹರಿ ಸ್ಮರಣೆಯ ಮಾಡುವ
ಪರಮ ಭಕ್ತರನು ಪೊರೆಯುವನು ಅ.ಪ

ಕಾಲುಗಳಿರುತಿರೆ ಕಂಸಮರ್ಧನನ
ಆಲಯಕ್ಹೋಗದೆ ಮರೆತಿಹವೊ
ಕಾಲಹರಣ ಮಾಡುತಲಿ ಕುಹಕಿಗಳ
ಆಲಯಗಳಿಗೆಲ್ಲ ತೆರಳುವವೊ ೧

ಕರಗಳು ಕಮಲಾಕ್ಷನ ಪೂಜಿಸದಲೆ
ಅಧಮರ ಸೇವೆಗೆ ಹೋಗುವವೊ
ಉದರವು ಹರಿ ಪ್ರಸಾದವನೊಲ್ಲದೆ
ದುರುಳರ ಮನೆ ಊಟವನುಂಬುವದೊ ೨

ಕರ್ಣವು ಹರಿಕಥಾಶ್ರವಣವ ಮಾಡದೆ
ದುರ್ನುಡಿಗಳ ಕೇಳುತಲಿಹವೊ
ಸ್ವರ್ಣಾಂಬರನ ನಿರ್ಮಾಲ್ಯವಾಘ್ರಾಣಿಸದೆ
ಕಲ್ಮಶವಾಸನೆ ನೋಡುತಲಿಹವೊ ೩

ಕಂಗಳು ರಂಗನ ಶೃಂಗಾರ ನೋಡದ-
ಮಂಗಳಗಳನೆ ನೋಡುತಲಿಹವೊ
ರಂಗು ಮಾಣಿಕ್ಯದ ಕಿರೀಟದ ಮಸ್ತಕ
ಮಂಗಳಾಂಗಗೆ ಮಣಿಯದಲಿಹವೊ ೪

ನಿರ್ಮಲ ಮನ ಹರಿಗುಣವರ್ಣನೆ ಮಾಡದೆ
ಖುಲ್ಲ ಮಾನವರ ವರ್ಣಿಸುತಿಹವೊ
ಸರ್ವ ದೇವರ ವಂದ್ಯ ಸರ್ವೇಶನ ನಾಮ
ಸ್ಮರಿಸದೆ ತಮಸಿಗೆ ಪೋಗುವವೊ ೫

ಪಂಚಕರ್ಮೇಂದ್ರಿಯಂಗಳು ಹರಿ ಕಾರ್ಯಕೆ
ವಂಚನೆ ಮಾಡುತ ತಿರುಗುವವೊ

ಮಾನದಿ ಮೂಗುತಿ ನೀನೊಯ್ಯದೆ ವ್ಯಾ-
ಪಾರಕೆ ತಂದಿತ್ತೆಯೊ ಎನಗೆ
ಏನು ಅರಿಯದ ಶುಂಠನ ಮನ ಶೋಧಿಸಿ
ಬಾರದೆ ಪೋದೆಯೊ ಮರಳಿ ಎನ್ನಲ್ಲಿ ೪

ಎನಗನುಮಾನವ ಪುಟ್ಟಿಸಿದೆಯೊ ದೇವ
ಘನಮೂಗುತಿ ನೋಡಿದ ಕ್ಷಣದಿ
ಮನೆಗೆ ಬಂದು ಸತಿಯಳ ನೋಡಲು ಎನ್ನ
ಮನ ಕಳವಳಿಸುವಂದದಿ ಮಾಡಿದಿಯೊ ೫

ಪರಿಪರಿಯಲಿ ಆಭರಣವ ತೋರೆಂದು
ಕರೆಕರೆ ಮಾಡಿ ಕೇಳಲು ಸತಿಯು
ಮುರಿದಿಹುದೆನ್ನುತ ಅರೆದು ವಿಷವ ಕುಡಿಯೆ
ಭರದಿ ಬಟ್ಟಲಿ ತಂದ್ಹಾಕಿದೆ ರಂಗ ೬

ಏನಿದು ಕೌತುಕ ಏನಿದು ಮಾಯವೊ
ನಾನರಿಯೆನೊ ನಾರದ ವಂದ್ಯ
ಜ್ಞಾನಿಗಳರಸನೆ ದೀನ ವತ್ಸಲನೆಂದು
ಧ್ಯಾನಿಸದ್ಹೋದೆನೊ ಶ್ರೀನಿಧೆ ನಿನ್ನನ್ನು ೭

ಹೀನನಾದೆನೊ ರಂಗ ಲೋಭತನದಿ ಬಲು
ಮಾನಾಪಮಾನವ ತಿಳಿಯದಲೆ
ದಾನವಾಂತಕ ನಿನ್ನದಯವು ಆಗದ ಮುನ್ನ
ಹಾನಿಯಲ್ಲವೆ ಆಯುವು ಸಿರಿಕೃಷ್ಣಾ ೮

ಆಪದ್ಬಾಂಧವ ಶ್ರೀಪತಿ ಕಮಲನಾಭ
ವಿಠ್ಠಲನೆಂದು ಹಗಲಿರುಳು
ಆ ಪರಮಾತ್ಮನೆ ಶ್ರೀರಮಾಪತಿ ಎಂ-
ದ್ಯೋಚನೆ ಮಾಡದೆ ದೋಷಿಯಾದೆನೊ ರಂಗ ೯

ರಂಭೆಯ ಮನೆಗೆ ಪೋಗುತಲಿ ಎನ್ನಯ ಪೆಸ–
ರಿಂದ ಆಭರಣವು ಅರಸಿಗಿತ್ತು ಮ–
ತ್ತೊಂದು ಕೊಡುವೇನೆಂದಾಕೆಯನೆ ಮೆಚ್ಚಿಸಿ ಬಂದು
ಕಂಬಕ್ಕೆನ್ನನು ಕಟ್ಟಿ ಕೊಲಿಸುವಿ ವಿಠ್ಠಲ ೨

ಭಕ್ತರು ಮಾಡುವ ಅತ್ಯಂತ ಅಪರಾಧ
ಚಿತ್ತಕ್ಕೆ ತರದಂತೆ ರಕ್ಷಿಪುದು
ಸರ್ಪಶಯನ ಶ್ರೀ ಕಮಲನಾಭ ವಿಠ್ಠಲ ನಿ–
ನ್ನಿಚ್ಛೆಗೆ ಬಂದಂತೆ ಮಾಡಯ್ಯ ವಿಠ್ಠಲ ೩

## ವಚನ

ಆ ಕಾಲದಲ್ಲಿ ಒಬ್ಬ ಬಾಲಕಗೆ ಶ್ರೀಹರಿಯು
ಆ ವೇಶದಿಂದ ಬಂದು ಪೇಳಿದನು ಹೀಗೆನುತ
ದಾಸರಾಯರ ರೂಪದಿಂದಲಿ ನಾ ಪೋಗಿ
ವೇಶ್ಯೆಯಳಿಗಿತ್ತೆ ಕಂಕಣವನೊಂದನು ಎಂದು
ಮತ್ತೊಂದು ಆಕೆಗೆ ನೀಡಿರೆಂದೆನಲಾಗ
ಭೃತ್ಯರೆಲ್ಲರು ನಿಂತು ಕೇಳುತಿರಲಾ ವೇಳೆ
ಭಕ್ತನನು ಕಟ್ಟಿಸಿದ ಸ್ತಂಭಕೆ ನೀವೆಲ್ಲ
ಭಕ್ತಿಯಿಂದಲಿ ದಾಸರ ಸ್ತಂಭವೆಂದೆನುತ
ಮತ್ತೆ ಪೂಜಿಸಿರಿನ್ನು ಚಿತ್ತ ಸಂಶಯ ಬಿಟ್ಟು
ಸತ್ಯಭಾಮೆಯ ರಮಣ ಮೆಚ್ಚಿ ಕಾಪಾಡುತಿಹನು

## ಆರ್ಯ

ಈ ಪರಿಯಲಿ ಬಹು ವಿಧ ಹರಿಯನು ಪೂಜಿಸಿ
ಶ್ರೀಪತಿ ಧ್ಯಾನವ ಮಾಡುತಲಿ
ಕಾಪಾಡೆನ್ನುತ ಕರಗಳ ಮುಗಿಯುತ
ಈ ಪರಿ ಸ್ತೋತ್ರವ ಮಾಡುತಿರೆ

ಕರುಣಾಕರ ಹರಿ ಎಂಬುವ ಬಿರುದನು
ಧರೆಯೊಳು ಬಿತ್ತಲು ಸಮಯವಿದು ಪ

## ಆರ್ಯ

ಈ ಪರಿಯಲಿ ಚಿಂತಿಸುತಲಿ ನಾಯಕ
ಆ ಪುರದ ಬೀದಿಗಳಲ್ಲಿ
ಆ ಸತಿಸುತರಿಂದೊಡಗೂಡುತಲಿ
ಶ್ರೀಪತಿ ಧ್ಯಾನವ ಮಾಡುತಲಿ

ದಾಸನೆನ್ನುತ ಪಾಲಿಸೆನ್ನ
ಸರ್ವೇಶನೆ ಕೀರ್ತಿ ಪ್ರಸನ್ನ ಪ

ಸಾಸಿರನಾಮನೆ ಭೂಸುರ ಪಾಲನೆ
ಶೇಷಶಯನ ಶ್ರೀನಿವಾಸ ಕೃಪಾನಿಧಿ ಅ.ಪ

ಪಂಕಜಾಕ್ಷ ಶ್ರೀಹರಿಯೆ ಅಕ–
ಳಂಕ ಮಹಿಮ ಸಿರಿದೊರೆಯೆ
ಶಂಖ ಚಕ್ರಧರ ಶ್ರೀವತ್ಸಾಂಕಿತ
ಶಂಕಿಸದಲೆ ನಿನ್ನ ಕಿಂಕರನೆನಿಸೊ ೧

ದೋಷಗಳೆಣಿಸದೆ ಕಾಯೊ ನಿನ್ನ
ದಾಸರ ಸೇವೆಯನೀಯೋ ಸುರ
ವಾಸವ ಮುಖ ವಿಭುದ ವೃಂದವ
ಪೋಷಿಸಿ ಸಲಹುವ ದೋಷ ವಿವರ್ಜಿತ ೨

ಸಾಸಿರ ಮುಖದಿಂ ಸ್ತುತಿಪ ಆದಿ
ಶೇಷಗೆ ಸರಿ ಇಲ್ಲೆನಿಪ
ಭಾಸುರಾಂಗ ನಿನ್ನ ವಿಶೇಷದಿ ಸೇವಿಪ
ಕೀರ್ತಿಯು ನೀ ನೊಲಿದುದಕಲ್ಲವೆ ರಂಗ ೩

ಕುಕ್ಷಿಯೊಳಗೆ ವಿಶ್ವವನು ಧರಿಸಿದೆ
ಅಪ್ರತಿಮ ಸಾಹಸಿ ಪೊತ್ತು ತಿರುಗುತ
ಸುತ್ತಲು ಸಂಚರಿಸುವ ಉತ್ತಮ ಗರುಡಗೆ
ಮತ್ತೆ ನೀ ಒಲಿದಂತೆ ೪

## ವಚನ

ಡಂಬಕದ ದಾಸನಿವ ನಂಬಬಹುದೇ ಇಂಥ
ಬಂಡಾಟ ಮಾಡಿರುವನೆಂದು ಕೋಪಿಸಲಾಗ
ಕಂಬಕಿವನ ಕಟ್ಟಿ ಚೆನ್ನಾಗಿ ಹೊಡಿರೆಂದು
ಪೇಳಿದಧಿಕಾರಿಗಳು ಆಳುಗಳು ತಡೆಯದಲೆ
ದೇವರೆದುರಿಗೆ ಇರುವ ಸ್ತಂಭಕ್ಕೆ ಬಂಧಿಸುತ
ಪೇಳುತಲೆ ಈ ನುಡಿಯು ತಾಡನೆಯ ಮಾಡುತಿರಲು

## ಆರ‍್ಯ

ಆಹಾ ! ನೋಡಿರಿ ಹರಿದಾಸರನು
ಯಾರಿಗು ತಿಳಿಸದೆ ಪೋಗುತಲಿ
ಮಾರ ಪಿತನ ಹಸ್ತದಾಭರಣವನು
ನಾರಿಗೆ ತಂದಿತ್ತನು ಧೀರ

## ವಚನ

ಹೀಗೆ ಪೇಳುತಲಾಗ ತಾಡನೆಯ ಮಾಡುತಿರೆ
ನೋಡುತಿರೆ ದಾಸರಿಗೆ ನೆನಪು ಕೊಟ್ಟನು ದೇವ
ತಾಡನದಿ ಬಳಲಿದೆನೊ ದೇವ ದೇವನೆ ನಿನ್ನ
ನಾಮಸ್ಮರಣೆಯು ಮಾಡೆ ತಾಡನವು ನಿನಗಾಯ್ತು
ಎಂದೆನುತ ಮೊರೆಯಿಟ್ಟು ಪ್ರಾರ್ಥಿಸಿದ ಕೃಷ್ಣನನು
ಅಂಬುಜಾಕ್ಷನೆ ಸಲಹೋ ನಂಬಿದವರನು ಬಿಡದಲೇ

ಪೆಟ್ಟು ಕೊಟ್ಟೆನೊ ಕೃಷ್ಣ ನಿನಗೊಂದು
ಕಟ್ಟಿ ಹಾಕಿ ಎನ್ನ ಬಿಡಿಸುವಿನಿಂದು ಪ

ನಾನಿನ್ನ ನೀರುತಾರೆಂದೆನೆ ಶ್ರೀಹರಿ
ನೀರು ತಂದಿತ್ತೆಯೊ ನಿಗಮವೇದ್ಯ
ಬಾರದೆ ತಡೆದ ಶಿಷ್ಯನು ಎಂದು ಕೋಪದಿ
ಥಾಲಿಯಿಂದಲಿ ನಿನ್ನ ಬಡಿದೆನೊ ವಿಠ್ಠಲ ೧

ನೀನೊಲಿದುದಕಿವರೆಲ್ಲರು ಬಹು
ಸಾಹಸಿ ಎನಿಸಿದರೆಲ್ಲ
ಪಾವನ ಚರಿತನೆ ಪರಮ ಪವಿತ್ರನೆ
ಕಾಮನ ಪಿತ ಕಮಲನಾಭ ವಿಠ್ಠಲ ದೇವ ೫

## ಸೀಸಪದ್ಯ

ಶ್ರೀರಮಾಕಾಂತನೆ ಶ್ರೀಪಾಂಡುರಂಗನೆ
ಅಪಾರ ಮಹಿಮನೆ ಅಪ್ರಮೇಯ
ಗೋಪತೀ ಕೃಷ್ಣನೆ ಗೋಪಿಕಾಲೊಲನೆ
ಗೋವರ್ಧನೋದ್ಧಾರಿ ಅಗಮ್ಯಮೂರ್ತಿ

ನಿತ್ಯ ನಿನ್ನಯ ಚರಿತ ಅತ್ಯಂತ ಶುಭಕರವು
ಭಕ್ತವತ್ಸಲನೆ ಭವದೂರ ರಂಗ
ಅಚ್ಚುತನೆ ನಿನ್ನ ಕೀರ್ತಿ ನಿಶ್ಚಯದಿ ಪಾಡುವೆನು
ಸಚ್ಚಿದಾನಂದ ಸರ್ವೇಶ ಕಾಯೊ

ಅಂಬುಜಾಕ್ಷನೆ ಪಾದಾಂಬುಜನ ನಂಬಿದೆನು
ಸಂಭ್ರಮವು ಮನಕಾಯ್ತು ಸುಂದರಾಂಗ
ಹಗಲಿರುಳು ನಿನ್ನ ಧ್ಯಾನವ ಕೊಟ್ಟು ಸರ್ವೇಶ
ಬಗೆ ಬಗೆ ಭಕ್ತರ ಸಲಹುವಂತೆ

ಕಾಪಾಡು ನೀ ಎನ್ನ ಕರುಣನಿಧಿಯೆ
ನೀ ಸಲಹದಿರೆ ಎನ್ನ ಪೊರೆವರ್‍ಯಾರು
ಪಾಪಿಯಾದೆನೊ ನಿನ್ನ ಸ್ಮರಣೆ ಮರೆತು
ಕೋಪಿಸದೆ ನೀ ಎನ್ನ ಕಾಪಾಡು ಕಂಜನಾಭ
ಕಮಲನಾಭ ವಿಠ್ಠಲನೆ ಕರುಣದಿಂದ

## ಆರ್ಯ

ನಯನಂಗಳು ಮುಚ್ಚುತ ನಾಯಕ ಶ್ರೀ
ನಳಿನನಾಭನಂ ಸ್ಮರಿಸುತಿರೆ
ಭಯ ರಹಿತನು ಭಕ್ತಿಗೆ ಒಲಿಯುತಲಿ
ವಿನಯದಿಂದಾದರಿಸಿದನು

ನಲ್ಲೆಯು ನಡುಗುತ ಮೆಲ್ಲನೆ ನುಡಿದಳು
ನನ್ನದೆ ಎಂದೆನುತ ೪

ಕೊಟ್ಟವರ್‍ಯಾರೀ ಕಂಕಣವೆನ್ನುತ
ಘಟ್ಟಿಸಿ ಕೇಳುತಿರೆ
ಪೆಟ್ಟನು ಕೊಟ್ಟರೆ ಪೇಳುವಿ ಎನ್ನುತ
ಸ್ಪಷ್ಟದಿ ನುಡಿಯುತಿರೆ ೫

ತಲ್ಲಣವೇತಕೆ ಎಲ್ಲವು ಪೇಳುವೆ
ಕೊಲ್ಲುವಿರ್‍ಯಾಕಿನ್ನು
ಬಲ್ಲಿದ ಪುರಂದರದಾಸರು ತಂದಿ–
ತ್ತರು ಇದು ನಿಶ್ಚಯವು ೬

ಮತ್ತೊಂದೀದಿನ ತರುವೆನು ಎನುತಲಿ
ಸತ್ಯದಿ ಪೇಳಿಹರು
ಉತ್ತಮರವರ ದರ್ಶನದಿಂದ ಪ–
ವಿತ್ರಳಾದೆನೆನಲೂ ೭

ಶ್ರೀಹರಿ ಭಜನೆಯ ಮಾಡುತ ಕುಣಿಯುತ
ನಲಿದಾಡುತಿಹ ವೇಳೆ
ಕೇಳುತಲೀ ನುಡಿ ನಡಗುತಲಾಕ್ಷಣ
ಏನಿದು ಹರಿ ವಿಠ್ಠಲಾ ೮

ಕಾಣದಿರುವ ಎನ್ನ ಮೇಲೀನಿಂದೆಯು
ಜಾಣನೆ ತಂದಿರುವಿ
ಕಾಯೊ ಕಮಲನಾಭವಿಠ್ಠಲ ನಿನ್ನಯ
ಪಾದ ಸೇವಕನೆನಲೂ ೯

ಕಡು ಹರುಷದಿ ಆ ನುಡಿಗಳ ಕೇಳುತ
ಕಡಲೊಡೆಯನ ಪಾದ ಸೇವಿಸುತ
ಮೃಡ ಸಖ ಕಮಲನಾಭವಿಠ್ಠಲನೆಂದು
ಧೃಡಮನದಿಂ ಸೇವಿಸಲಾಗ ೫

## ಭಾಮಿನಿ ಷಟ್ಪದಿ

ಕಾವನಯ್ಯನು ಕಮಲನೇತ್ರಿಗೆ
ಕಂಕಣವ ಕರದಲ್ಲಿ ನೀಡುತ
ಶಾಮಲಾಂಗನು ಸೇರಿದನು ತನ್ನಯ ಸ್ವಸ್ಥಳಕೆ
ಆಗ ಬೆಳಗಾಗಲು ಆರ್ಚಕ
ದೇವತಾರಾಧನೆಯ ಮಾಡಲು
ನೋಡಿದನು ಬಾಗಿಲನು ತೆರೆಯುತ ಗಾಢದಿಂ ಹರಿಯ

ಏನಿದು ಸೋಜಿಗ ತೋರದು ಎನಗಿದು
ತೋರ ಕಂಕಣವಿಲ್ಲ
ಭಾರಿಯ ಆಭರಣವು ಯಾರೊಯ್ದರು
ಎನುತ ವಿಚಾರಿಸಲು ೧

ಯಾರಿಗು ತಿಳಿಯದು ಎನುತಲಿ ನುಡಿಯಲು
ಗಾಬರಿಗೊಳ್ಳುತಲಿ
ಮಾರಮಣನ ಪಾದ ಧ್ಯಾನವು ಮಾಡುತ
ಆಚಾರ್ಯನು ಕುಳಿತಿರಲು ೨

ಪಾರ್ಥನ ಸಖನ ಸಂದರ್ಶನಕೆನ್ನುತ
ವೇಶ್ಯೆಯು ಬರುತಿರಲು
ಆಕೆಯ ಕರದಲಿ ಕಾಣಲು ಕಂಕಣ
ಕೇಳಲು ಸಂಶಯದಿ ೩

ಎಲ್ಲಿಯ ಕಂಕಣ ಯಾರಿತ್ತರು ನಿನ-
ಗೆನ್ನುತ ಕೇಳುತಿರೆ

## ವಚನ

ಹೇಗೆಂದರೆ ಹರಿನಾಮ ಸ್ಮರಣೆಯನು ಮಾಡುತ್ತ
ಆ ಪುರದ ಬೀದಿಯಲಿ ಬರುತಿರಲು ಆ ವ್ಯಾಳೆ
ಬಾಲಕರು ವೃದ್ಧರು ಆನಂದ ಸಂಭ್ರಮದಿ
ನಾಯಕರ ಬೆನ್ಹತ್ತಿ ಬರುತಿರಲು ಪುರಜನರು
ನೋಡಿ ಶ್ರೀ ಹರಿನಾಯಕರ ಪರಮವೈರಾಗ್ಯ
ನೀಡಿದರು ನಾಯಕರ ಜೋಳಿಗೆಗೆ ಭಿಕ್ಷವನು
ಗಾಢರಿಂದೆಚ್ಚೆತ್ತು ನೋಡೆ ಕಂಗಳ ತೆರೆದು
ನೀಡಿದವರ್‍ಯಾರೆಂದು ಆಲೋಚಿಸುತ್ತಿರಲು
ಮಾಧವನೆ ನೀಡಿರುವನೆಂದು ಸಂಶಯ ಬಿಟ್ಟು
ಶ್ರೀಧರನ ದಯಕೆ ಸೋಪಾನ ದೊರಕಿತು ಎಂದು
ಆದರದಿ ಗಳಿಸಿ ದಾನವ ಕೋಟಿಧನ ಮನೆಸಹಿತ
ಶ್ರೀತುಳಸಿ ದಳವೆಸೆದು ಶ್ರೀಹರಿಗೆ ಅರ್ಪಿತವೆಂದು
ಆದರದಿ ಹರಿಭಜನೆ ಮಾಡುತಿಹ ಕಾಲದಲಿ
ಆ ಪುರಜನರೆಲ್ಲ ಆಶ್ಚರ್ಯವನೆ ಪೊಂದಿ
ಏನು ನಾಯಕರ ವೈರಾಗ್ಯ ಘನವೆನುತಿರಲು
ಇತ್ತಲಾನಾಯಕರು ಪತ್ನಿಪುತ್ರರು ಸಹಿತ
ಮಾರುತನ ಆಲಯದಿ ಧ್ಯಾನಿಸುತ ಶ್ರೀಹರಿಯ
ಅರ್ಥಿಯಿಂ ಹರಿಕೊಟ್ಟ ಭಿಕ್ಷದಿಂದ್ಧರುಷಿಸುತ
ಪಾರ್ಥನ ಸಖನ ಅರ್ಚಿಸುತ ಭಿಕ್ಷತಂಡುಲದಿಂದ
ಅರ್ಥಿಯಲಿ ಅತಿಥಿಗಳ ಪೂಜಿಸುತ ಸುಖದಿಂದ
ಅಚ್ಯುತನೆ ಸಲಹೆಂದು ಅತಿಹರುಷದಿಂ ಸ್ತುತಿಸಿ
ಕರಪಿಡಿಯೆ ಶ್ರೀ ಕಮಲನಾಭ ವಿಠ್ಠಲನೆ ಎನುತ

ಪಾಲಿಸು ಪಂಡರಿಪುರ ಸರ್ವೇಶ
ಪರಿಪಾಲಿಸು ಶ್ರೀಶ ಪ

ಕಾಲಿಗೆರಗುವೆನು ಕಂಸಾರಿಯೆ ಹರಿ
ಕಾಲಕಾಲಕೆ ನಿನ್ನ ಧ್ಯಾನವ ಕೊಡುತಲಿ ಅ.ಪ

ಚರಣದಂದಿಗೆ ಕಿರುಗೆಜ್ಜೆಗಳಿಂದ
ಥಳಥಳಿಸುವ ಚರಣಕೆ
ಎರಗಿ ಬೇಡುವೆನು ಸುರಮುನಿ ವಂದ್ಯ
ಛಲವ್ಯಾತಕೆ ಇಷ್ಟು
ಕರುಣದಿ ಶಿಲೆಯನು ತರುಣಿಯ ಮಾಡಿದ
ಚರಣ ಕಮಲ ತೋರಿಸು ಕರುಣಾಂಬುಧಿಯೆ ೧

ಕರುಣವಾರಿಧಿ ಕಟಿಭಾಗದಲಿಟ್ಟ
ಕಂಕಣ ಭೂಷಣದ
ಕರಗಳಿಂದಲಿ ಅಭಯವ ಪಾಲಿಸಿದ
ಕರುಣಪ್ರದವಾದ
ಕರಗಳಿಂದೆತ್ತುತ ಅಣುಗನೆಂದು ನೀ
ಪರಿಹರಿಸೆನ್ನ ಮನದುಗುಡವ ಶ್ರೀಹರಿ ೨

ಹಟವ ಮಾಡಿದೆನೊ ದಾನವ ಕೊಡದೆ
ಅದು ತಿಳಿಯುತ ಬಿಡದೆ
ಕುಟಿಲ ಬುದ್ಧಿಯ ಬೇಗದಿ ನೀ ತರಿದೆ
ಆಭರಣವ ತಂದೆ
ವಿಠ್ಠಲನ ಗುಡಿ ಮುಂದತಿಶಯ ತೋರಿದಿ
ದಿತಿ ಸುತನಿಗೆ ಆರ್ಭಟವ ತೋರ್ದದೇವ ೩

ಮುರಾರಿ ಮಂಜುಳ ಸ್ವರ ಗಂಭೀರ
ಸ್ಮರಿಸುವರಘ ದೂರ
ತೋರ್‍ಯೆ ಶ್ರೀಹರಿ ನಿನ್ನ ಸುಶರೀರ
ಸುರಗಣ ಪರಿವಾರ
ಬಾರಿ ಬಾರಿಗೆ ನಿನ್ನಾರಾಧನೆ ಕೊಡು
ಮಾರುತ ಪ್ರಿಯ ಕರುಣಾಕರ ಶ್ರೀಹರಿ ೪

ಕಂಜಾಕ್ಷ ಕರುಣಾಕರ ಶ್ರೀ ರಂಗ
ನಿನ್ನಯ ಕಡೆನೋಟದಿ

ನೀರು ತಾರೆಂದೆನುತ ಪೇಳುತಲಿ ನಾಪೋಗೆ
ಬಾರದಲೆ ಬಹಳ ಹೊತ್ತಾದನಂತರದಲ್ಲಿ
ನೀರು ತಂದಿತ್ತ ಗಿಂಡಿಯಲಿ ನಿನ್ನ ತಿವಿಯಲು
ಕಾಣದವನಂತೀಗ ಕೇಳುತ ಮಲಗಿಕೊಂಡಿರುವಿ
ಸೋಮಾರಿ ಶಿಷ್ಯನಿಂದಲಿ ಕಾರ್ಯವಾಗದೆನೆ
ಬೆರಗಾಗಿ ಶಿಷ್ಯ ನಿಂತಿರುವುದನು ಕಾಣುತ್ತ
ಪುರಂದರ ದಾಸರು ಹರಿ ಹರಿ ಹರಿ ಎಂದು
ಹರಿನಾಮ ಸ್ಮರಣೆಯಲಿ ಮಲಗಿ ನಿದ್ರಿಸಿದರಾಗ

## ಆರ್ಯ

ನೋಡುತ ಶ್ರೀಹರಿ ಮಾಡಿದ ಮಾಯವ
ಗಾಡಿಕಾರ ಶ್ರೀ ಮಾಧವನು
ಗಾಡನೆ ಆ ಪುರ ವೇಶ್ಯೆಯ ಮನೆಗೆ
ಪೋದನು ದಾಸರ ವೇಷದಲಿ ೧

ಗಣಿಕಾ ಸ್ತ್ರೀಯಳು ಮಣಿಯುತ ದಾಸರ
ಪಾದಗಳ ಪೂಜಿಸಿ ಭಕ್ತಿಯಲಿ
ಧನ್ಯವಂತಳು ನಾನಾದೆನು ಇಂದಿಗೆ
ಮನ್ಮಥ ಪಿತ ಬಂದಂತಿಹುದು ೨

ಧನ್ಯಳಾದೆನು ಇಂದಿಗೆ ನಿಮ್ಮಯ
ಸಂದರುಶನ ಮಹ ವೈಭವವು
ಎಂದೆನುತಲಿ ಬಹುವಿನಯದಿ ಪ್ರಾರ್ಥಿಸೆ
ಇಂದಿರೇಶ ನುಡಿದನು ಹೀಗೆ ೩

ಕೇಳೆಲೆ ಸುಂದರಿ ಪೇಳುವ ಮಾತನು
ನೀಡುವೆ ನಿನಗೀ ಕಂಕಣವಾ
ಜೋಡಿನ ಕಂಕಣ ನೀಡುವೆ ನಾಳೆಯೆ
ಆದರದಿಂದಲಿ ಕೇಳೆನಲು ೪

ಚಂದದಿಂದೀಕ್ಷಿಸು ಪಾಪವ ಹರಿಸಿ
ಪಾಪಾತ್ಮನ ಮರೆಯದೆ
ಕಡೆ ಹಾಯಿಸು ಕರುಣಾಕರ ಶ್ರೀಹರಿ
ಕಮಲನಾಭ ವಿಠ್ಠಲ ನಿಮ್ಮ ಸ್ಮರಣೆಯ ೫

### ಭಾಮಿನಿ ಷಟ್ಪದಿ

ದೋಷದೂರನ ಸ್ಮರಣೆ ಮಾಡುತ
ಆ ಸತೀ ಪುತ್ರರ ಸಹಿತದಲಿ
ಮಾತುಳಾಂತಕ ನಂಘ್ರಿ ಸೇವಿಸುತಿರಲು ಪ್ರತಿದಿನವು
ನೀತಿ ಮಾರ್ಗವನರಿತು ನಾಯಕ
ಆತುರದಿ ಶ್ರೀಹರಿಯ ಸ್ಮರಿಸುತ
ಮಾತು ಮಾತಿಗೆ ಮರೆಯದಲೆ ಮಧುಸೂದನನ ಸ್ಮರಿಸಿ

### ಆರ‍್ಯ

ಇರುತಿರಲೊಂದಿನ ಸ್ವಪ್ನವ ಕಂಡನು
ಸಿರಿಪತಿ ಸೇವಕ ನಾಯಕನು
ಗುರು ಕರುಣದಿ ಆದುದು ಈ ಸ್ವಪ್ನವು
ಅರುಹುವೆ ಗುರುಗಳ ಕೃಪೆಯಿಂದ

ಸ್ವಪ್ನಕಂಡನು ಕ್ಷಿಪ್ರ ಫಲವು ನೋಡಿ
ಅಪ್ರಮೇಯನನ್ನು ಭಕ್ತಿಯಿಂದ ಭಜಿಸಿ ಪ

ಆಶೆಮೋಹ ತರಿದು ವಾಸುದೇವನೆಂದು
ಶ್ರೀಶನನ್ನು ಸ್ತುತಿಸಿ ದಾಸನಾದೆನೆಂದ ೧

ಭಕ್ತಿಯಿಂದ ಸ್ತುತಿಸಿ ನರ್ತನವನು ಮಾಡಿ
ಪಾರ್ಥಸಾರಥಿಯ ಮೆಚ್ಚಿಸಿದನಾಗ ೨

ಚಿತ್ತ ನಲಿದು ಪಾಡೆ ಸತ್ಯಮೂರುತಿಯ
ಮುಕ್ತಾಮುಕ್ತ ಸೇವ್ಯ ಮತ್ತೆ ಹರುಷಪಟ್ಟ ೩

ಹೀಗಿಹ ದಾಸರಿಗಾಗ ಶಿಷ್ಯರುಗಳು
ಬಾಗಿ ಸಿರವ ನಮ್ರಭಾವದಿಂದಿರಲು ೪

ಒಂದಿನ ದಾಸರು ಪೊಂದಿ ಸ್ತುತಿಸಿ ಹರಿಯ
ಚಂದದಿ ಮಲಗಲಾಗಂದು ರಾತ್ರಿಯೊಳ್ ೫

ದೇಹಭಾದೆಗೆ ಹೋಗಲಾಗ ಶಿಷ್ಯನನೆಬ್ಬಿಸಿ
ಬೇಗದಿಂದಲಿ ಜಲ ತಾ ಹೋಗೆಂದೆನುತ ೬

ಆಗ ಶಿಷ್ಯನು ಚೆನ್ನಾಗಿ ನಿದ್ರಿಸುತಿರೆ
ಪಾಂಡುರಂಗನೆ ಜಲ ನೀಡಿದ ತ್ವರದಿ ೭

ತಡದೆ ಯಾತಕೆ ಇಷ್ಟು ಒಡನೆ ಬಾರದೆ ನೀನು
ಬಡಿವೆ ನೋಡೆನುತಲಿ ಬಡಿಯೆ ಗಿಂಡಿಯಲಿ ೮

ಪೆಟ್ಟು ತಿನ್ನುತ ವಿಠ್ಠಲ ನೆಟ್ಟನೆ ಗುಡಿ ಪೊಕ್ಕ
ಸೃಷ್ಟಿ ಪಾಲಕ ನಿಂತ ಇಟ್ಟಿಗೆ ಮೇಲೆ ೯

ಬಂದು ನೋಡಲು ಪುರಂದರದಾಸರು
ಚಂದದಿ ನಿದ್ರೆಯ ಪೊಂದಿದ ಶಿಷ್ಯನ ೧೦

ಕಾಣುತ ಕೋಪದಿ ಏಳೇಳೆನುತಲಿ
ಕೂಗಲು ಕಮಲನಾಭ ವಿಠ್ಠಲ ನಗುತಲಿ ೧೧

## ಆರ್ಯ

ಗಾಬರಿಗೊಳ್ಳುತ ಏಳಲು ಶಿಷ್ಯನು
ಕಾರಣವೇನೆನ್ನುತ ಕೇಳೆ
ನೀರನು ತಾರೆಂದೆನುತಲಿ ಪೇಳಿರೆ
ಆಲಸ್ಯದಿ ತಂದಿತ್ತಿರುವಿ

ಪಂಪಾಕ್ಷೇತ್ರದಲ್ಲಿ ಚಕ್ರತೀರ್ಥ ಬಳಿಯ
ವ್ಯಾಸರಾಯರಲ್ಲಿ ದಾಸನಾಗು ಎಂದ ೪

ಪರಮ ಹರುಷದಿಂದ ಹರಿಯ ಸ್ಮರಣೆಮಾಡಿ
ಕಮಲನಾಭ ವಿಠ್ಠಲ ವಿಠ್ಠಲನೆಂದು ಕುಣಿದ ೫

## ಆರ‍್ಯ

ಅರ್ಪಣೆಯಾಗಲು ಅಪ್ರತಿ ಮಹಿಮನ
ಕ್ಷಿಪ್ರದಿಂದ ನಾಯಕನಾಗ
ಮಸ್ತಕದಲಿ ಪೊತ್ತು ಶ್ರೀಶನಾಜ್ಞೆಯನು ಸ-
ಮಸ್ತವು ನಡೆಸುತ ಮುದದಿಂದ ೧

ಕಂತುಪಿತನ ಸ್ಮರಿಸುತ ನಾಯಕನು
ಹಂಪೆಗೆ ಹೊರಟನು ಮರುದಿನದಿ
ದಂಪತಿ ಮಕ್ಕಳು ಸಹಿತದಿ ಲಕ್ಷ್ಮೀ-
ಕಾಂತನ ಗುಣಗಳ ಪೊಗಳುತಲಿ ೨

ಮಾರುತೀಶನ ಭಕ್ತರ ಕಥೆಯನು
ಯಾರು ಭಕ್ತಿಯಲಿ ಪೊಗಳುವರೊ
ಬಾರಿ ಬಾರಿಗೆ ಸದ್ಭಕ್ತರಿಗೊಲಿವನು
ಶ್ರೀದ ಕಮಲನಾಭ ವಿಠ್ಠಲನು ೩

## ಭಾಮಿನಿ ಷಟ್ಪದಿ

ಪರಮ ಸಂಭ್ರಮದಿಂದ ನಾಯಕ
ಹರಿಯ ಸ್ಮರಣೆಯ ಮಾಡಿ ಸ್ತುತಿಸುತ
ತರುಣಿ ಪುತ್ರರ ಸಹಿತ ಪಂಪಾಕ್ಷೇತ್ರಕ್ಕೈದುತ್ತ
ಬರುತ ಮಾರ್ಗದಿ ಸರಸ್ವತಿಯ ಭಯ
ಪರಿಹರಿಸಿ ನಿರ್ಭಯದಿ ಪಂಪಾ-
ಪುರವ ಕಾಣುತ ವಂದಿಸಿದರವರೆಲ್ಲ ಭಕುತಿಯಲಿ

ಪರಮ ಸಂತೋಷದಲಿ ಗುರುಗಳು ಶ್ರೀ
ಕಮಲನಾಭ ವಿಠ್ಠಲನ ಸ್ಮರಿಸಿದರು ೧೩

## ವಚನ

ಈ ವಿಧದ ಲೀಲೆಗಳ ತೋರುತಲಿ ಶಿಷ್ಯರಿಗೆ
ಶ್ರೀಗುರುಗಳನುಗ್ರಹಕೆ ಪೂರ್ಣಪಾತ್ರರು ಎಂದೆನಿಸಿ
ಹೀಗಿರುತಲಿ ಕೆಲವು ಕಾಲದಲಿ ದಾಸರಿಗೆ
ಶ್ರೀಹರಿಯು ಒಲಿದು ನಲಿದಾಡುತಿರುವಲ್ಲಿ
ಆದರದಿಂದಲವರೆಂದ ನುಡಿಗಳೆಲ್ಲವು ಬಹಳ
ಶ್ಲಾಘಿಸುತ ಹರಿಗುಣವ ಕೊಂಡಾಡುತಿರುವಂಥ
ಅಮೋಘ ಮಹಿಮೆಗಳಿಂದ ತುಂಬಿ ಸೂಸುತಲಿರುವ
ಭಾಗವತೋತ್ತಮರ ದಿವ್ಯ ಮಹಿಮೆಗಳನ್ನು
ಗಾನರೂಪದಿ ರಚಿಸಿ ಪದಸುಳಾದಿಗಳನ್ನು
ಕಾಲಕಾಲಕೆ ತಕ್ಕ ಮಹಿಮೆಗಳ ಸೂಚಿಸುವಂತೆ
ಆದರದಿ ರಚಿಸುತ್ತ ಪಾಂಡುರಂಗನ ದಯದಿ
ಪಂಡರಾಪುರದಲ್ಲಿ ಬಂದು ನಿಂತರು ದಾಸರು

ಬಂದರು ದಾಸರು ಪಂಢರಾಪುರದಲ್ಲಿ
ಪಾಂಡುರಂಗನ ಪಾದ ನಂಬಿ ಸ್ಮರಿಸುತಲಿ ಪ

ಪೊಂದಿದ ಅಘಗಳ ಚಂದದಿ ಕಳೆಯುವ
ಇಂದಿರೇಶನೆ ಗುಣಸಾಂದ್ರನೆನ್ನುತಲಿ ೧

ನಿತ್ಯ ನಿರ್ಮಲನನ್ನು ಮೆಚ್ಚಿಸಿ ಬಹುಪರಿ
ಅರ್ಥಿಯಿಂ ಪೊಗಳಿ ಸುಕೀರ್ತಿಯ ಪಡೆಯೆ ೨

ಕ್ಷಣ ಬಿಡದಲೆ ಶ್ರೀ ಹರಿ ಧ್ಯಾನವ ಮಾಡುವ
ಹಗಲು ಇರುಳು ಶ್ರೀ ಹರಿ ಹರಿ ಎನ್ನುತ ೩

## ಆರ‍್ಯ

ಈ ಪರಿ ದಾಸರ ಚರಿತೆಯ ಕೇಳುತ
ಪಾಕಶಾಸನನು ಮುದದಿಂದ
ಲೋಕವಂದ್ಯನ ಮಹಿಮೆಯ ಪೊಗಳುತ ಅ-
ನೇಕ ವಿಧ ಭಕ್ತಿಗಳ ತೋರಿಸುತ ೧

ಹರಿ ಮಹಿಮೆಯ ಪೊಗಳಲು ಕೇಳುತ
ತನ್ನವರೆಲ್ಲರು ಹರಿ ಹರಿ ಎನುತಾ
ಸುರಿಸುತ ಪುಷ್ಪದ ವೃಷ್ಟಿಗಳನು ಶ್ರೀ-
ಹರಿಯ ಸಿರಿ ಮುಡಿಗೆ ಹರುಷದಲಿ ೨

ತುಂಬುರು ನಾರದರೆಲ್ಲರು ಪಾಡಲು
ರಂಭಾದಿಗಳೆಲ್ಲರು ಮುದದಿ
ಚಂದದಿ ಕುಣಿದರು ಸುಂದರ ಕಮಲನಾಭ
ವಿಠ್ಠಲನೆನ್ನುತ ಮುದದಿ ೩

## ವಚನ

ಹೀಗೆನುತ ಶಚಿ ಪತಿಯು ಸ್ತುತಿಸಿ ಹರಿಗುಣಗಳನು
ಅತಿಶಯವ ಪೇಳುತಿರೆ ಕೇಳಿ ದೇವತೆಗಳು
ರತಿ ಪತಿ ಪಿತನನ್ನು ಸ್ತುತಿಸುತ್ತ ಹರುಷದಲಿ
ಗತಿ ಪಾಲಿಸೆಂದು ವರಬೇಡಿ ವಂದನೆ ಮಾಡಿ
ಮತಿವಂತರಡಿಗಳಿಗೆ ಸಿರಬಾಗಿ ಬೇಡುವೆನು
ಯತಿಗಣ ಪ್ರಾಸನೇಮಗಳರಿಯದೆನ್ನನು
ಹಿತದಿ ಪಾಲಿಸಿ ತಪ್ಪುಗಳ ತಿದ್ದಿ ಆದರಿಸಿ
ಮತಿ ವಿಹೀನರ ನುಡಿಗಳತಿಶಯದಿ ಲಾಲಿಸುತ
ಸುತರ ತೆರದಿಂದ ಪಾಲಿಸಿ ರಕ್ಷಿಸುವದೆಂದು
ನುತಿಸಿ ನಿಮ್ಮಡಿಗಳಿಗೆ ಕರ ಮುಗಿದು ಪ್ರಾರ್ಥಿಪೆನು
ಹಿತದಿ ತಪ್ಪುಗಳ ತಿದ್ದುತಲಿ ಮನ್ನಿಸುವದು

ಸಾಗಿರಿ ಮುಂದಕೆ ನಿಮ್ಮಯ ಕಾರ್ಯ
ಆಗುವದೆನುತಲಿ ಧೈರ್ಯವು ಪೇಳಿ
ಭಾಗೀರಥಿ ಪಿತನ ನೋಡುವ ತವಕದಿ
ಗೃಹದ್ವಾರಕೆ ಬರುತಿರಲು ೧೯

ರಕ್ಷಿಸು ಕಮಲನಾಭ ವಿಠ್ಠಲನೆ
ಅಕ್ಷಯ ಫಲಪ್ರದ ಹರಿಸರ್ವೋತ್ತಮ
ರಕ್ಷಿಸು ರಕ್ಷಿಸು ರಕ್ಷಿಸು ಎನ್ನುತ
ಪೊಕ್ಕನು ಮಂದಿರವ ೨೦

## ವಚನ

ಈ ರೀತಿಯಿಂದ ಹರಿಗುರುಗಳನು ಸ್ಮರಿಸುತ್ತ
ದ್ವಾರಕಾನಾಥನನ್ನು ನೋಡುತಲಿ ಭಕ್ತಿಯಲಿ
ಅಪಾರ ಮಹಿಮೆಗಳನ್ನು ಕೊಂಡಾಡಿ
ಸ್ತುತಿಸುವ ಬಗೆ

ಶರಣಾಗತ ವತ್ಸಲ ಕರುಣದಿ ಕಾಯೊ
ದುರಿತ ಕಾನನ ಕುಠಾರ ಪ

ಹರಿಯೆ ನಿನ್ನಯ ಮೊರೆಯ ಹೊಕ್ಕಿರು–
ವರನು ಪಾಲಿಸು ಕರುಣದಿಂದಲಿ
ಸಿರಿಯ ರಮಣನೆ ಮರೆಯದೀಗಲೆ
ಕರುಣದಲಿ ಕೈ ಪಿಡಿದು ರಕ್ಷಿಸು ಅ.ಪ

ಸರಸಿಯೊಳಗೆ ಮಕರಿ ವಾಸಿಸುತಿರೆ
ಕರಿಯ ಕಾಲ್ಪಿಡಿದೆಳೆಯೆ
ಸಿರಿಯ ರಮಣನೆ ರಕ್ಷಿಸೆನ್ನುತ
ಮೊರೆಯನಿಡುತಿರೆ ಕೇಳಿ ಶೀಘ್ರದಿ
ಜರದ ವಲ್ಲಿಯು ಜಾರಿ ಬೀಳಲು
ತ್ವರದಿ ಬರುತಲಿ ಕಾಯ್ದ ಶ್ರೀಹರಿ ೧

ದಾಸರಗ್ರಂಥಕೆ ವ್ಯಾಸರು ಮಂಗಳ
ಆ ಶಿಷ್ಯರೊಡಗೂಡಿ ಮಾಡಿದ ಚರಿತ ೩

ವ್ಯಾಸ ಪೀಠದ ಮೇಲೆ ದಾಸರ ಗ್ರಂಥವ
ಮೀಸಲು ಮಾಡಿದೆ ದೂಷಿಸಿದವರ ೪

ತೆಗೆದು ಬಿಸಾಡೆ ಶಿಷ್ಯರು ಗ್ರಂಥವ ದೂಷಿಸೆ
ಪುನಃ ಪೀಠದ ಮೇಲೆ ಕುಳಿತಂಥ ಚರಿತ ೫

ಬೆರಗಾಗಿ ಶಿಷ್ಯರು ಜರಿಯದೆ ನಿಂತಿರೆ
ಪುರಂದರೋಪನಿಷತ್ತೆಂದು ಕರೆದರು ೬

ಗುರುಗಳು ಶಿಷ್ಯರ ಒಡಗೂಡಿ ವ್ಯಾಸಂಗ
ಸಮಯದಿ ದಾಸರು ವಸನವ ಒರಸೆ ೭

ಏನಿದು ದಾಸರೆ ತೀವ್ರದಿ ವಸನವು
ಏನು ಕಾರಣದಿಂದ ಒರಸಿದಿರೆನಲು ೮

ಶ್ರೀಧರನಾಲಯದಿ ದೇವರ ಮುಂದಿಹ
ಪರದೆಯು ಹತ್ತಲು ಒರಸಿದೆ ವಸನ ೯

ಕರೆದು ದೂತರನಾಗ ತ್ವರದಿ ನೋಡುತ ಬಂದು
ಪರದೆ ಹತ್ತಿರುವದು ನಿಜವೊ ಪೇಳೆನುತ ೧೦

ಸರಸರ ಬಂದು ನೋಡಿದರಾಗ ಭಯದಿಂದ
ಪರದೆ ಹತ್ತಿರುವದು ನಿಜವೆಂದು ನುಡಿಯೆ ೧೧

ಪರಮ ಆದರದಿಂದ ಪುರಂದರ ದಾಸರು
ಉರಿಯ ನಿಲ್ಲಿಸಿ ಪೊರೆದರೆಂದು ಪೇಳಿದರು ೧೨

## ವಚನ

ಹೀಗೆ ನಾಯಕರು ಬರಬರುತ ಅತಿ ಸಂಭ್ರಮದಿ
ಭಾಗವತೋತ್ತಮರಾದ ಶ್ರೀಗುರುಗಳಿರುವಂಥ
ದ್ವಾರಕ್ಕೆ ಬಂದು ನೋಡುತ ಹರುಷ ಪಡುತಿರಲು
ಆ ಸಮಯದಿ ಗುರುಗಳ ನಾಯಕರ ಕಂಡುಳ
ಪಾಠ ಪ್ರವಚನಗಳ ಪೂರೈಸಿ ನಂತರದಿ
ನಾಯಕರ ಕೂಡಿ ಮಾತಾಡಿದರು ಅತಿ ಹರುಷದಿ

ಬನ್ನಿರಿ ನಾಯಕರೆ ನಿಮ್ಮ
ಸಂದರ್ಶನ ಸುಖವಾಯ್ತು ನಮಗೆ
ಇಂದಿರೇಶನ ಭಕ್ತರ ಮಹಿಮೆ
ಚಂದದಿ ತಿಳಿದಿಹಿರಿ ೧

ಅಂದ ವಚನವ ಕೇಳಿ ತ್ವರದಿ
ವಂದಿಸುತಲಿ ಗುರುಗಳಡಿಗೆ
ಮಂದ ಭಾಗ್ಯಗೆ ಮಧುಸೂಧನನ
ಸಂದರುಶನವಿಲ್ಲ ೨

ಇದಕೆ ಯಾಕೀಪರಿ ಚಿಂತಿಪಿರಿ
ಒದಗಿ ಬಂದಿರುವದು ಸನ್ಮಾರ್ಗ
ಅದನೇ ಅರಿತಿಲ್ಲಿಗೆ ಬಂದಿಹಿರಿ
ಮೋದ ಪೊಂದುವಿರಿನ್ನು ೩

ಮುರಹರನಾಜ್ಞೆಯಾದ ತೆರದಿ
ನಡೆಯಲಿ ಬೇಕೆಂದೆನುತಲಿ ತಿಳಿದು
ಸರಸೀಜಾಕ್ಷನ ಭಕ್ತರನರಸುತ
ಬಂದೆನು ನಿಮ್ಮಲ್ಲಿ ೪

ಅರಿತಿಹೆ ನಿಮ್ಮ ಮನದ ಬಯಕೆ
ಮರುತಂತರ್ಯಾಮಿಯ ದಯದಿ

ಪರಮಾತ್ಮನು ನಿಮ್ಮನು ಬಹುವಿಧ
ಪರೀಕ್ಷೆಯ ಮಾಡಿಹನೆಂದು ೫

ಅರುಹುವುದೆಂತು ಪರಮಾತ್ಮನಿಗೆ
ಪರಿಪರಿ ನಿಂದಿಸಿ ಬಳಲಿಸಿ ನೋಯ್ಸಿದ
ಪರಿಯನು ಪೇಳಲು ದುರ್ವ್ಯಾಪಾರದ
ಪರಿಯಿಂದರುಹಿದನು ೬

ಪರಿಪಕ್ವವಾಗಿಹುದು ನಿಮ್ಮ ಮನ
ಪರಮಾತ್ಮನ ಧ್ಯಾನವ ಮಾಡುವುದಕೆ
ಮರುತನೊಡೆಯ ಕಮಲನಾಭ–
ವಿಠ್ಠಲನು ಕರುಣಿಸುವ ೭

ಹೀಗೆಂಬ ಗುರುಗಳನು ಶ್ರೀಗುರುಗಳೆಂದರಿತು
ಭಾಗವತ ಜನಪ್ರಿಯ ಭಕ್ತವತ್ಸಲ ದೇವ
ಸಾಗರನಸುತೆ ರಮಣ ಸರ್ವಪ್ರೇರಕ ಕೃಷ್ಣ
ನಾಗಭೂಷಣ ವಂದ್ಯನ ನವನೀತ ಧರ ಸುಂದರಾಂಗ
ನೀ ಒಲಿದಿರಲು ಏನು ಕೊರತೆಯು ಎನಗೆ
ಮಾರಮಣ ಮನ್ನಿಸಿ ಸಲಹೊ ದೇವ

ವ್ಯಾಸರಾಯರು ಹರಿದಾಸರ ಚರಿತೆಯ
ಬೇಸರ ಪಡದಲೆ ಆಲಿಸುತ ಪ

ಸಾಸಿರ ನಾಮನ ಮಹಿಮೆಯ ಸ್ಮರಿಸುತ
ಶ್ರೀಶನ ಭಕ್ತರಿಗಿತ್ತನು ಅಭಯ ಅ.ಪ

ಮರುದಿನ ಸೂರ್ಯೋದಯ ಕಾಲದಿ ಆ
ಗುರುಗಳು ಶಿಷ್ಯನ ಕರೆಯುತಲಿ
ಹರುಷದಿ ಅಂಕಿತವನೆ ಮಾಡುತಲಿ
ಹರಿದಾಸರು ನೀನಾಗೆನ್ನುತಲಿ ೧

ಸಕಲವೇದ ಶಾಸ್ತ್ರಾದಿಗಳಿಂದ
ಶ್ರೀಪತಿಯೆ ಪರಮಾತ್ಮನು ಎಂದು
ಅತುಳ ಮಹಿಮ ಅಚ್ಚುತನನು ತಿಳಿವುದು
ಅಖಿಲ ವಿಶ್ವ ವ್ಯಾಪಕನೆಂದು ೧೩

ಹರಿಯಲ್ಲದೆ ತೃಣ ಚಲಿಸದು ಸತ್ಯವು
ಹರಿ ಪ್ರೇರಣೆಯಂದದಿ ಜಗವು
ಸರಸಿಜಾಕ್ಷಪವನಂತರ್ಯಾಮಿ ಶ್ರೀ
ಹರಿ ಹರಿ ಎನ್ನಿರಿ ಸಜ್ಜನರು ೧೪

ಕರೆ ಕರೆ ಭವದೊಳು ಮುಳುಗುವಿರ್ಯಾತಕೆ
ನರಹರಿಧ್ಯಾನವ ಮಾಡದಲೆ
ತರಳರಿಗೊಲಿದ ಶ್ರೀಕಮಲನಾಭ ವಿ–
ಠ್ಠಲ ರಕ್ಷಿಸುತಿರುವನು ದೇವ ೧೫

## ವಚನ

ಸರ್ವದ ಭಕ್ತರಿಗೆ ಬೋಧಿಸುತ ನಿತ್ಯ
ಸರ್ವವಂದಿತನ ಮಹಿಮೆಗಳ ಪೊಗಳುತ ಜಗಕೆ
ಸರ್ವೇಶನೆ ಸರ್ವನಿಯಾಮಕನು ಎಂದೆನುತ
ಸರ್ವೇಶನನುಗ್ರಹಕ್ಕೆ ಪೂರ್ಣಪಾತ್ರರಾಗಿರುವ
ಪುರಂದರದಾಸರೆ ಸರ್ವರಿಗು ಬೋಧಿಸುತ
ಪರಮಾತ್ಮನಿಗೆ ಪರಮ ಭಕ್ತರೆಂದೆನಿಸುತಿರಲು

ಕೇಳಿ ಕೇಳಿ ದಾಸರ ಸುಚರಿತ್ರವ ಪ

ಕಾಲಕಾಲಕೆ ಹರಿ ಲೀಲೆಯ ತೋರಿದ
ಶ್ರೀ ಲೋಲನದ್ಭುತ ಕಾರ್ಯದ ಮಹಿಮೆ ೧

ಮೈಲಾರಪ್ಪನ ಮಾನಭಂಗವ ಮಾಡುತ
ಕೈವಲ್ಯ ಪದವಿಯ ಪಥ ತೋರಿದ ಮಹಿಮೆಯ ೨

ಸ್ವರೂಪ ಯೋಗ್ಯತೆ ಅನುಸರಿಸಿರುವ
ದು:ಖ ಮಿಶ್ರವಲ್ಲದ ಸುಖವು
ಶಾಶ್ವತ ಸುಖಾನುಭವವೆ ಮುಕ್ತಿ
ಎಂದೆನುತಲಿ ತಿಳಿಪರು ಸಜ್ಜನರು ೭

ನಿಶ್ಚಲವಾದ ಭಕ್ತಿಯೆ ಮುಖ್ಯ
ಸಾಧನವಾಗಿರುವುದು ಇದಕೆ
ಪ್ರತ್ಯಕ್ಷ ಅನುಮಾನ ಆಗಮ
ಇವುಗಳೆ ಮುಖ್ಯ ಪ್ರಮಾಣಗಳು ೮

ಸಕಲವೇದ ಶಾಸ್ತ್ರಗಳಿಂದಲಿ ಶ್ರೀ–
ಪತಿಯೇ ಸರ್ವೋತ್ತಮನೆಂದು
ಮತಿವಂತರು ತಿಳಿಯುವರಲ್ಲದಲೆ
ಮತಿ ವಿಹೀನಂಗಳವಡದು ೯

ಹರಿ ಸರ್ವೋತ್ತಮ ಹರಿಸರ್ವೋತ್ತಮ
ಹರಿ ಸರ್ವೋತ್ತಮನೆನ್ನುತಲಿ
ಹರಿ ಸರ್ವೋತ್ತಮ ವಾಯು ಜೀವೋತ್ತಮ
ಹರಿ ಸರ್ವೋತ್ತಮನೆಂದವನು ೧೦

ದೊರಕನು ಎಂದಿಂದಿಗೂ ಜವನವರಿಗೆ
ಹರಿದಾಸರ ರಕ್ಷಿಪದೇವ
ಅರಿತು ಈ ಪರಿ ಹರಿಕಥಾಮೃತ
ಸವಿಯ ಬಲ್ಲವರು ಸುಜನರು ಕೇಳಿ ೧೧

ಅನ್ಯರಿಗಿಲ್ಲವು ಲವಸ್ವಾತಂತ್ರ್ಯವು
ಬಲ್ಲಿದ ಶ್ರೀ ಹರಿಯಲ್ಲದಲೆ
ಖುಲ್ಲಮಾನವರದಲ್ಲಣ ಶ್ರೀಹರಿ
ಎಲ್ಲ ಭಕ್ತರನು ರಕ್ಷಿಸುವ ೧೨

ಹರಸುತ ಈ ಪರಿ ಪರಮಾತ್ಮನಿಗೆ
ಪರಮ ಭಕ್ತ ನೀನಹುದೆಂದು
**ಪುರಂದರದಾಸ**ರೆನುತಲಿ ಕರೆದರು
ಪರಮ ಸಂಭ್ರಮದಿ ನಾಯಕರ ೨

ಹರಿದಾಸನು ನೀನಾಗಿಹೆ ನಿಶ್ಚಯ
ಹರಿದಾಸರ ವೃಂದವ ಕೂಡಿ
ಪುರಂದರ ವಿಠ್ಠಲನೆನ್ನುತ ಪಾಡುತ ಶ್ರೀ
ಕಮಲನಾಭ ವಿಠ್ಠಲನೆನ್ನುತಲಿ ೩

## ವಚನ

ಹೀಗೆ ಅಂಕಿತ ಪಡೆದು ಶ್ರೀಗುರುಗಳ
ಪಾದಕ್ಕೆರಗಿ ಬಹು ವಿನಯದಿಂದ ನಡೆಯುತಿರಲು
ಯೋಗಿವಂದ್ಯರು ಶಿಷ್ಯವರ್ಗ ಕೆಲವು
ಸಂಭ್ರಮದಿ ಪಾಠಗಳ ಹೇಳುತಿರಲು
ನೋಡಿ ದುರ್ಮತಿಗಳಿಗೆ ಕ್ರೋಧ ಬಹಳಾಗಲು
ಈ ವಿಧದಿ ನಿಂದಿಸಿದರಾಗ ಅವರಾಗುರುಗಳಿಗೆ
ತಕ್ಕ ಶಿಷ್ಯರು ಶಿಷ್ಯರಿಗೆ ತಕ್ಕ ಗುರುಗಳು
ದೊರೆತರೆಂದೆನುತಿರಲು ಮನದುಗುಡದಿಂದವರ
ದಿನಚರ್ಯಗಳನೆಲ್ಲ ಮನವಚನ ಕಾಯಗಳಿಂದ ಹಳಿ
ಯುತಿರಲು ಇವರ ಭಾವವನರಿತು ಗುರುಗಳಾ
ಗಾಗಲೇ ಅನುಮಾನ ಪರಿಹಾರ ಮಾಡುತಿರಲು
ಪುರಂದರದಾಸರು ಹರುಷ ಪಡುತ
ತರುಣಿ ಪುತ್ರರ ಸಹಿತ ಹರಿಭಜನೆ ಮಾಡಿ
ಪರಮ ಗುರುಗಳ ಕಟಾಕ್ಷದಿಂ ಮೆರೆಯತಿರಲು

## ಆರ‍್ಯ

ಹೀಗಿರುತಿರಲಾ ರಾಜಧಾನಿಯ
ರಾಜರು ಕೇಳುತ ಹರುಷದಲಿ

ಸೋಜಿಗವೇನಿದು ನೋಡುವೆನೆನುತಲಿ
ಗಾಢನೆ ಬರುತಲಿ ವಂದಿಸಲು ೧

ಶ್ರೀಹರಿ ಸೇವಕರಡಿಗಳಿಗೆರುಗುತ
ರಾಜನು ಹರುಷದಲಿ
ರಾಜೀವಾಕ್ಷನ ಭಕ್ತರ ಚರಿತೆಯ
ಕೇಳುತ ವಿನಯದಲಿ ೨

## ವಚನ

ಆಶ್ಚರ್ಯ ಕೇಳಿರಿ ಶ್ರೀ ಗುರುಗಳೇ ನೀವು
ಯೋಚಿಸಲು ಪರಮ ಅದ್ಭುತವಾಗಿ ಕಾಣುವದು
ಐಶ್ವರ್ಯದಲಿ ನೋಡೆ ಚಕ್ರಾಧೀಶರಿಗೆ ಒಡೆಯ
ಸಂಪತ್ತಿನಲಿ ನೋಡೆ ನವಕೋಟಿ ಧನವಂತ
ಅಧಿಕಾರದಲಿ ನೋಡೆ ಶ್ರೀಪತಿಯ ದಣಿಸಿದವ
ಸೇವಕನ ಪರಿ ಹರಿಯ ತಿರುಗಿಸಿದ ಸಾಮರ್ಥ್ಯ
ಭಕ್ತಿಯಲಿ ನೋಡೆ ಅಪರಿಮಿತ ಸದ್ಭಕ್ತಿ
ಯುಕ್ತಿಯಿಂದಲಿ ಶ್ರೀಹರಿಯ ಮೆಚ್ಚಿಸಿದವನು
ಭಕ್ತಿಯಲಿ ನೋಡೆ ಸದ್ಭಕ್ತಿ ಶಿರೋಮಣಿಗಣ
ರುಕ್ಮಿಣೀ ರಮಣನನು ನೃತ್ಯದಿಂ ಕುಣಿಸುವರು
ವೈರಾಗ್ಯದಲಿ ನೋಡೆ ಪರಮ ವಿರಾಗಿಗಳು
ಕ್ಷಣಮಾತ್ರದಲಿ ಅಸ್ಥಿರವು ಧನವು ತನುವೆಂದು
ತೃಣಕಿಂತ ಕಡೆಮಾಡಿ ನವಕೋಟಿ ಧನವನ್ನು
ಪರಮಾತ್ಮನನುಗ್ರಹಕೆ ಪಾತ್ರರೆಂದೆನಿಸಿದರು
ಪರಮ ಗುರುಗಳ ಕರುಣ ಪಡದಂಥ ಸಾತ್ವಿಕರು
ಅರಿತರೂ ಅರಿಯಬಹುದು ಹರಿಯ ಸದ್ಗುಣಗಳನು
ಹರಿದಾಸರ ಮಹಿಮೆ ಅರಿಯುವರು ಅರಿದೆಂದು
ಪರಮ ಸಂತೋಷದಲಿ ಹರಿಯ ಸ್ತುತಿಸಿದನು ರಾಜ

## ಆರ್ಯ

ಈ ಪರಿಯಲಿ ಬಹುವಿಧ ಕ್ರೀಡೆಗಳಾಡುತ
ಶ್ರೀಪತಿ ತೋರುತ ಭಕ್ತರಿಗೆ
ಆ ಪರಮಾತ್ಮನು ಪಾಪಿ ಜನಂಗಳ
ದೋಷಗುಣಂಗಳ ತಿಳಿಸುತಿರೆ ೧

ಹರಿ ಸರ್ವೋತ್ತಮ ಹರಿ ಪೂರ್ಣನು ಶ್ರೀ
ಹರಿಯೆ ಸರ್ವ ವ್ಯಾಪಕನೆಂದು
ಹರಿಯೆ ಸ್ವತಂತ್ರನು ಸೃಷ್ಟ್ಯಾದಿಗಳಲಿ
ಅಷ್ಟಕರ್ತೃ ಶ್ರೀಹರಿಯೆಂದು ೨

ಸತ್ಯಭಾಮೆ ಪ್ರಿಯ ಸತ್ಯೇಶನ ಕೃಪೆ
ಸತ್ಯವೆಂದು ತಿಳಿಯುವ ಜನಕೆ
ಸತ್ಯವು ಜಗತ್ತು ಎಂದೆನುತಲಿ
ಸತ್ಯವಾದಿಗಳು ತಿಳಿಯುವದು ೩

ಪಂಚಭೇದ ಪ್ರಪಂಚವು ತಿಳಿವುದು ಅ–
ಚಿಂತ್ಯ ಮಹಿಮನ ಕೃಪೆಯಿಂದ
ಚಂಚಲ ಲಕುಮಿಯ ಪತಿಯನು ಸ್ಮರಿಸುತ
ಚಿಂತಿಸಿ ಸರ್ವರು ಹರಿ ಎನುತ ೪

ಸರ್ವ ಪ್ರಾಣಿಗಳೆಲ್ಲರು ಚರಿಪರು
ಸರ್ವೇಶನ ಮಾರ್ಗವ ತಿಳಿದು
ಸರ್ವಪ್ರೇರಕನ ಅನುಸರಿಸುತಲಿ
ಸರ್ವರು ನುಡಿವರು ಸುಖಿಸುತಲಿ ೫

ತಾರತಮ್ಯವಿಹದೆನ್ನುತ ತಿಳಿವುದು
ಶ್ರೀರಮಣನ ಕೃಪೆ ಪಡೆದವರು
ನೀಚರು ಉಚ್ಚರು ಸಹಿತದಿ ಕೂಡಿದ
ಈ ಪೃಥ್ವಿಯು ಎನ್ನುತಲರಿದು ೬

ಏನಿದು ಸೋಜಿಗ ತಿಳಿಯ ಕೇಳುವೆ ನಿ–
ಮ್ಮೆದುರಲ್ಲಿ ದಾಸರನು

ನೋಡಿರಿ ಕೌತುಕವ ದಾಸರೆ
ಗಾಢದಿಂ ಪೇಳಿರಿ ಪ

ಯತ್ನಮಾಡಿನೊಡೆ ಮುಖದಿ
ಕಚ್ಚು ತಡೆಯದಲೆಬಹುದು
ಅಚ್ಚುತನನು ನೋಡಿರಿನ್ನು
ನಿಶ್ಚಯವನೆ ಪೇಳಿ ತ್ವರದಿ ೧

ಬಂದು ಕರೆಯಲಾಗ ತ್ವರದಿ
ಇಂದಿರೇಶನರ್ಚಿಸುತಿರೆ
ಬಂದೆನರ್ಧ ಪೂಜೆಬಿಟ್ಟು
ನಿಂದೆ ನಿಮ್ಮ ಸನ್ಮುಖದಲ್ಲಿ ೨

ನಡೆದುದಿಷ್ಟು ಕೇಳಿ ಗುರುಗಳೆ
ದೃಢವಾದ ಕಾರ್ಯ

ಗೋಕುಲದ ಪತಿಯ ಮುಖದಿ
ಯಾತಕಿಯ ಕಚ್ಚು ಎನಲು
ಶ್ರೀಶಗರ್ಪಿಸಿದೆನು ಕಲ–
ಗಚ್ಚು ಕುಡಿದ್ಯಾ ವಿಠ್ಠಲ ೩

ಒಡನೆ ಬಂದು ಕಡಲೊಡೆಯನು
ಮುಡಿಯ ನೇವರಿಸಿ ಮುದದಿ
ಕುಡಿದು ತೃಪ್ತನಾದ್ಯೋ ಸ್ವಾಮಿ
ತಡೆದು ನಿಲ್ಲಿಸೆಂದು ನುಡಿದ ೪

ಇಚ್ಛೆ ಬಂದ ತೆರದಿ ಭಕ್ತ–
ರಿಚ್ಛೆ ಪೂರ್ಣ ಮಾಡುತಿಹನು
ಸ್ವಚ್ಛ ಕಮಲನಾಭ ವಿಠ್ಠಲ
ಮೆಚ್ಚಿ ಭಕ್ತರಿಗೆ ಒಲಿವ ೫

## ಕಂದ

ಪಂಡಿತರೆಲ್ಲರು ಕೇಳುತಲಿ
ತಂಡತಂಡದ ಕೋಪದಲಬ್ಬರಿಸಿದರು
ಕೊಂಡಾಡುವರೀ ಪಾಮರನ
ಖಂಡಿಸುವರ್ಯಾರೀ ದುರ್ನಡತೆಯನು

## ಆರ್ಯ

ಪರಿಪರಿಯಲಿ ನಿಂದಿಸುತಲಿ ಶಿಷ್ಯರು
ಪರಮಾತ್ಮನ ಭಕ್ತನ ಜರಿದು
ತರತರದಲಿ ದ್ವೇಷಿಸುವುದ ಕಂಡು
ಗುರುಗಳು ಆಶ್ಚರ್ಯವ ಪಡುತ

## ಭಾಮಿನಿ ಷಟ್ಪದಿ

ಇಂದಿರೇಶನ ದಿನದಿ ಜಾಗರ
ಪೊಂದಿ ಶಿಷ್ಯರ ಕೂಡಿಗುರುಗಳು
ಚಂದದಿಂದಲಿ ಮಾಡಿ ಮರುದಿನದಿ ಶೀಘ್ರದಲಿ
ನಂದಕಂದನ ಪೂಜಿಸುತಲಿ
ಪುರಂದರದಾಸರನು ಕರೆಯಲು
ವಂದಿಸುತ ಅರ್ಘ ಪೂಜಿಸಿದ ಮುಕುಂದನನು ಬಿಡುತ ಬರಲು

ಅರ್ಚಿಸಿ ಗುರುಗಳು ನೋಡಲು ದೇವ
ಕಚ್ಚನು ಕುಡಿದಂತಾಗಿರಲು
ಆಶ್ಚರ್ಯವ ಪಡುತಲಿ ಗುರುಗಳು ಶ್ರೀ
ಅಚ್ಚುತನನು ನೋಡುತ ಮುದದಿ

## ಕಂದ

ಏನಿದು ಶಿಷ್ಯರೆ ದಾಸರ
ಏನೆಂದುಸುರುತ ಕರತಂದಿಹಿರಿ

## ಭಾಮಿನಿ ಷಟ್ಪದಿ

ಈ ವಿಧದ ಆನಂದ ಭರದಲಿ
ನಾರದರು ಮುಳುಗೇಳುತಿರಲು
ಶ್ರೀಧರನು ಎವೆ ಇಕ್ಕದಲೆ ನೋಡುತಲಿ ಸುರಮುನಿಯ
ಏನು ಈ ಪರಿನಾರದ ನಾರದರೆ ನಿಮ್ಮ
ಧ್ಯಾನ ಮನಸಿಗೆ ಹರುಷವಾಯಿತು
ನೋಡಿರಿ ಕಣ್ತೆರೆದು ಎನುತ ಮಾತಾಡಿದನು ಹರಿಯು
ಭಕ್ತಾಗ್ರೇಸರ ನಿನ್ನಯ ಭಕ್ತಿಗೆ
ಮೆಚ್ಚಿದೆನು ನಿನ್ನಿಚ್ಛೆಗೆ ಬರುವ
ಹೆಚ್ಚಿನ ವರಗಳ ಕೊಡುವೆನು
ನಿಶ್ಚಯವಿದು ನೀರಜಾಸನ ಸುತನೆ ಕೇಳು
ಹೀಗೆ ಪೇಳಿದ ಕೃಷ್ಣನ ವಚನವ
ಕೇಳುತ ಸುರಮುನಿ ನಾರದರು
ವೇದ ವೇದ್ಯನ ಸ್ಮರಿಸುತ ಮನದಲಿ
ನಾರದ ಕಣ್ತೆರದ್ಹರುಷದಲಿ

ನಮಿಸಿ ಬೇಡುವೆ ದೇವನೆ
ಶರಣರ ಮನ್ನಿಸೊ ಪ

ಮುರ ಮರ್ದನನೆ ಕೃಷ್ಣಾ
ಮುರಳೀಧರನೆ ಸ್ವಾಮಿ ಅ.ಪ

ಅರಿಯರೊ ನಿನ್ನಯ
ಅದ್ಭುತ ಚರಿತವ
ಸ್ಮರಿಸದೆ ಮನದಲ್ಲಿ
ಮರೆತರೋ ನಿನ್ನಧ್ಯಾನ ೧

ದುರುಳ ಕಲಿಬಾಧೆಯ
ಸ್ಮರಿಸುತ ಮನದಲ್ಲಿ

ಮರುಳನಂದದಿ ಚಲಿಸಿ
ಬಳಲಿ ಬಂದೆನೊ ಕೃಷ್ಣ ೨

ಪರಿ ಪರಿ ಶ್ರಮದಿಂದ
ಬಳಲುವ ಮನುಜರ
ಬವಣೆ ಕಣ್ಣಿಲಿ ನೋಡೆ
ಭಯವೊ ಶ್ರೀಹರಿ ಕೃಷ್ಣ ೩

ಸರ್ವನಿಯಾಮಕ
ಸರ್ವ ಪ್ರೇರಕ ಕೃಷ್ಣಾ
ಸರ್ವ ವ್ಯಾಪಕ ದೇವ
ಸರ್ವ ಸಂರಕ್ಷಕ ೪

ಅಣು ಮಹದ್ರೂಪನೆ
ಘನಮಹಿಮನೆ ರಂಗಾ
ಎಣಿಸಲಳವಲ್ಲವೊ
ಸುಗುಣ ನಿನ್ನಯ ಗುಣ ೫

ಶರಣೆಂದು ಬೇಡುವೆ
ಪರಿಪರಿ ಅಘಗಳ
ಪರಿಹರಿಸುತ ಕಾಯೊ
ಕರುಣಾಕರನೆ ಕೃಷ್ಣಾ ೬

ಭಕ್ತವತ್ಸಲ ಸ್ವಾಮಿ
ಭಕ್ತರ ಕ್ಲೇಶವ
ಯುಕ್ತಿಯಿಂ ಕಳೆಯುವ
ಶಕ್ತ ನೀನಲ್ಲವೆ ೭

ಬಹುವಿಧ ನರಕದ
ಬಾಧೆ ತಪ್ಪಿಸಿ ಕಾಯೊ

ತುಚ್ಛ ಮನುಜನು ನಾನು
ಚಿತ್ಸುಖ ಸ್ವರೂಪನು ನೀನು
ಇಚ್ಛಾ ಮಾತ್ರದಿ ಜಗವ
ಸೃಜಿಸುವನು ನೀನು ೨೪

ಮಾಯಾದೇವಿಯ ರಮಣ
ತೋರು ನಿನ್ನಯ ಚರಣ
ಮೋಹ ಪಾಶವ ಹರಿಸೊ
ಶ್ರೀ ವಾಸುದೇವ ೨೫

ಕಾಯ ನಿನಗೊಪ್ಪಿಸಿದೆ
ಕಮಲನಾಭ ವಿಠ್ಠಲ
ಕಾಯ್ವ ಕೊಲ್ಲುವ ನೀನೆ
ಕಂಜನಾಭ ೨೬

## ಆರ್ಯ

ಹೀಗೆನುತಲಿ ಪರಮಾತ್ಮನ ಸ್ತುತಿಸುತ
ಭೂಮಿಯ ಮೇಲೆ ಬಿದ್ದೊರಳುತಲಿ
ಪಾಮರನಾದೆನು ಪರಮಾತ್ಮನೆ ಎನ್ನ
ಪಾಪಗಳೆಣಿಸದೆ ಸಲಹೆನುತ ೧

ದೇವಿಯೆ ಕೇಳೌ ನೀನೆ ಧನ್ಯಳು
ಆ ಪರಮಾತ್ಮ ದರ್ಶನವಿತ್ತಾ
ದೇಹ ನೀಗುವೆ ಆತನ ಸ್ಮರಿಸುತ
ಆತನ ಲೋಕವೆ ಸೇರುವೆನು ೨

ಬಡವ ಬ್ರಾಹ್ಮಣನು ದರ್ಶನ ಕೊಡದಿರೆ
ಪೊಡವಿಯಲ್ಲಿ ಜೀವಿಸಲಾರೆ
ತಡೆಯದೆ ನಿಮಿಷವು ಯುಗವಾಗುತಿದೆ
ಕಮಲನಾಭ ವಿಠ್ಠಲ ಕಾಯೊ ೩

ನುಡಿಯ ನುಡಿಸುವ ನೀನೆ
ನಡೆಯ ಕಲಿಸುವ ನೀನೆ
ಮಡದಿ ಮಕ್ಕಳು ಭಾಗ್ಯ
ಬಡತನವು ನೀನೆ ೧೮

ಒಡೆಯನೆಂಬುವ ನೀನೆ
ಮಡುವಿನೊಳಗಿಹ ನೀನೆ
ಕಡಹಲ್ದ ಮರನೇರ್ದ
ತುಡುಗ ನೀನೆ ೧೯

ಅಕ್ಷಯ ಗುಣಪೂರ್ಣ
ರಕ್ಷಿಸೆನ್ನನು ದೇವ
ಪಕ್ಷಿವಾಹನ ಶ್ರೀಶ
ಈಶ ಸರ್ವೇಶ ೨೦

ಕುಕ್ಷಿಯೊಳಗೀರೇಳು
ಜಗವ ಪೊತ್ತಿಹ ಸ್ವಾಮಿ
ಭಕ್ತರಾಭೀಷ್ಟ ಇಂ–
ಬಿಟ್ಟು ಸಲಹೊ ೨೧

ನಿನ್ನ ಕಾಣದೆ ನಿಮಿಷ
ಇರಲಾರೆ ಶ್ರೀಹರಿಯೆ
ಎನ್ನ ಬಿನ್ನಪ ಕೇಳೊ
ಸನ್ನುತಾಂಗ ೨೨

ಇಂದಿರೇಶನು ನೀನೆ
ಮಂದ ಭಾಗ್ಯನ ಸಲಹೊ
ಸುಂದರಾಂಗನೆ ದೇವ
ವಂದಿಸುವೆನು ೨೩

**ಮಾತು**

ಹೀಗೆ ಬಾಲಕನ ರೂಪದಲ್ಲಿದ್ದ ಶ್ರೀ ಕೃಷ್ಣನು
ಒರಳನ್ನು ಎಳೆದು ಕೊಂಡು ಮೆಲ್ಲಮೆಲ್ಲನೆ ಬರುಬರುತ್ತಾ_

**ಕಂದ**

ಅಂಗಳದೊಳಗಾಡುತ ಶ್ರೀ ಕೃಷ್ಣನು
ಮುಂದಿದ್ದ ಮರಗಳ ಮಧ್ಯಕ್ಕೆ ಬರಲು
ಮುಂದಿಹ ಗಿಡಗಳು ಕದಲಲು
ಮಂದಿಗಳೆಲ್ಲರು ನೋಡುತ ಗಾಬರಿಗೊಳ್ಳಲು

**ಮಾತು**

ಹೀಗೆ ಅಲ್ಲಿದ್ದ ಮರಗಳು ಬೀಳಲು ಆ ಶಬ್ದಕ್ಕೆ
ಗಾಬರಿಗೊಂಡು ಗೋಪ ಗೋಪಿಯರು ಬಂದು
ಗೋಪಿಯೊಡನೆ ಪೇಳಲು ಎಲ್ಲರೂ ಗಾಬರಿಯಿಂದ ಬಂದರು.

ಎಲ್ಲರು ಬಂದರು ನೋಡುತ ಕೃಷ್ಣನ
ಉಲ್ಲಾಸದ ಮುಖ ನೋಡುತ ನಿಂತರು
ಬಲ್ಲಿದ ದೇವನ ಮಹಿಮೆಯ ತಿಳಿಯದೆ
ಸುಮ್ಮನೆ ಬೆರಗಾಗುತ ನಿಂದಿರಲು
ಎಲ್ಲರು ಎವೆ ಇಕ್ಕದೆ ಶ್ರೀ_
ನಲ್ಲನ ಮಹಿಮೆಯ ಅರಿಯದೆ ತಪಿಸಲು
ಗೊಲ್ಲಗೋಪಾಲನು ನಸುನಗುತಿರಲು
ಅಲ್ಲಿ ಬಿದ್ದ ಮರಗಳ ಒಳಗಿಂದಲಿ
ಬಲ್ಲಿದ ಗಂಧರ್ವರು ಈರ್ವರು ಹರಿ
ಅಂದವ ನೋಡುತ ಕರಗಳ ಜೋಡಿಸಿ
ವಂದಿಸಿ ಸ್ತುತಿಪರು ಗಾನಗಳಿಂದಲಿ
ಮಂದಾಕಿನಿಯನು ಪಡೆದಾತನ ಪಾದ_
ದ್ವಂದ್ವಕೆ ನಮಿಸುತ ಸ್ತುತಿಸುತಲಿರುತಿರೆ
ಬಂದಿಹ ಜನರಿಗೆ ಮುಂದೋರದೆ ಇರೆ

ಗತಿ ಕಾಣೆ ಗುರುಹಿರಿಯರಡಿಗಲ್ಲದೆ ಮತ್ತೆ
ಮನ್ಮಥನ ಪಿತನ ಮಹಾಮಹಿಮೆ ಕೊಂಡಾಡುವರ
ಸನ್ಮಾರ್ಗಗಾಮಿಗಳ ಸೋಪಾನವೆಂದರಿದು
ಪುರಂದರ ದಾಸರಾಯರ ಚರಿತ್ರೆಯನೆ ಕೊಂಡಾಡುತಲಿ
ನಲಿದಾಡುವ ಮನದಿ ಕುಣಿದಾಡುವನು ಹರಿಯು
ವರ ಕಮಲನಾಭ ವಿಠ್ಠಲನ ಧ್ಯಾನದಿ ಮನವು
ನಲಿದಾಡುತಿರಲಿ ಹಗಲಿರಳು ಮರೆಯದೆ ಶ್ರೀಶನ

## ಮಂಗಳ

ಮಂಗಳ ಪಾಡಿದರು ರಂಗನ ಸ್ಮರಿಸುತ
ಶೃಂಗಾರ ರೂಪನ ಚಂದದಿ ಪಾಡುತ ಪ

ಬೇಸರದಲೆ ಹರಿದಾಸರ ಸಲಹಿದ
ಶ್ರೀಶನ ಗುಣಗಳ ಪಾಡುತ ಮುದದಲಿ ೧

ಶೇಷ ಶಯನ ಹರಿ ವಾಸವ ವಂದಿತ
ಕ್ಲೇಶಹರನ ಸುವಿಶೇಷದಿ ಭಜಿಸುವ ೨

ಸಾಸಿರ ನಾಮನೆ ಸ್ತುತಿಸುವ ದಾಸರ
ಬೇಸರ ಪಡದೆ ಸಂತೈಸುವ ದೇವಗೆ ೩

ಗರುಡಗಮನನನ್ನು ಬಿಡದೆ ಭಜಿಸುವರ
ಒಡಗೂಡಿ ನಲಿಯುವ ಬಡವರಾಧಾರಿಗೆ ೪

ಕಂಜನಾಭನ ಪಾಡಿ ಭಂಗವ ಕಳೆವರು
ತುಂಗ ವಿಕ್ರಮ ಕಮಲನಾಭ ವಿಠ್ಠಲನಿಗೆ ೫

೨೮–೧–೧೯೪೬ ಶ್ರೀ ಪಾರ್ಥಿವ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯೆ ಶ್ರೀ ಪುರಂದರದಾಸರ ಆರಾಧನೆಯಲ್ಲಿ ಶ್ರೀ ಪೂಜ್ಯ ಗುರುಗಳ ದಿವ್ಯ

ಪರಿ ಪರಿ ಭಾಷೆಯ ಕೊಟ್ಟರು ಸಾಲದು
ಹರಿದಾಗಿಹ ಇನ್ನೊಂದು ಭಾಷೆ
ಹರಿಭಕ್ತರ ಪಾದದಾಣೆಗು ನಿಮ್ಮ
ಸಲಹುವೆನೆಂದೆನಲು ೧೩

ಹಿರಿ ಹಿರಿ ಹಿಗ್ಗುತ ಗಾಲವರಾಗ
ಹರಿಸ್ಮರಣೆಯಲಿಹ ನಾರದರೆಡೆಗೆ
ಬರುತಲು ಪೇಳಿದ ಹರಿದಾಸರ ಆಣೆಗು
ಸಲಹುವೆನೆಂದೆನುತ ೧೪

ಕೆಟ್ಟಿರಿ ಕೆಟ್ಟಿರಿ ಗಾಲವರೆ ನೀವು
ಗಟ್ಟಿವಚನವ ಕೇಳದೆ ಬಂದಿರಿ
ಕೃಷ್ಣನ ವಚನವೊ ರಾಮನ ವಚನವೊ
ಮತ್ತೊಮ್ಮೆ ಕೇಳುವದು ೧೫

ಹಾಗಾದರೆ ನಾ ಹೋಗಿ ಬರುವೆ
ನಾಗಶಯನನ ಕಂಡು ಪೇಳುವೆ
ಬೇಗನೆ ಪೇಳೊ ಕೃಷ್ಣನ ವಚನವೊ
ರಾಮನ ವಚನವೊ ೧೬

ಅಂದ ಮಾತನೆ ಕೇಳುತ ಶ್ರೀಹರಿ
ಬಂದಿಹ ನಾರದರೆಂದರಿಯುತಲಿ
ಸಂದೇಹವೇತಕೆ ಗಾಲವರೆ
ರಾಮನ ನುಡಿಯೆಂದ ೧೭

ಓಡುತ ಬಂದನು ನಾರದರೆಡೆಗೆ
ಗಾಡನೆ ವಂದಿಸಿ ಪೇಳಿದನಾ ಗ
ರೂಢಿಗೊಡೆಯ ಶ್ರೀರಾಮನ ನುಡಿ ಎಂ–
ದಾಡಿದ ಶ್ರೀ ಹರಿಯು ೧೮

ಇಂದಿವರ್‍ಯಾರೋ ಗಂಧರ್ವರುಗಳು
ಮಂದಾರದ ಪಾರಿಜಾತದ ಹಾರವು
ಕಂದರಗಳಲಿಹ ಚಂದವ ನೋಡುತ
ವಂದಿಸಿ ಸ್ತುತಿಪರು ಮಂದರಧರನಿಗೆ
ಇಂದೇನಿದು ಸೋಜಿಗ ತಿಳಿಯದು ಯದು_
ನಂದನ ತೋರೈ ನಿನ್ನಯ ಮಹಿಮೆಯ
ಎಂದೆನುತಲಿ ಸ್ತುತಿಸುತ ಬಹುಜನಗಳು
ನಂದ ಕಂದ ರಕ್ಷಿಸು ನಮ್ಮನು ಶ್ರೀ
ಸುಂದರ ಕಮಲನಾಭ ವಿಠ್ಠಲ ಹರೆ
ಸಿರಿಕೃಷ್ಣಾ ಸಿರಿಕೃಷ್ಣಾ ಸಿರಿಕೃಷ್ಣಾ

## ಆರ್‍ಯ

ಬಾಗಿ ನಿಂದಿಹ ಯಮಳಾರ್ಜುನರಿಗೆ
ಯೋಗಿ ವಂದ್ಯ ವರಗಳನಿತ್ತು
ಸಾಗಿಸಿ ಅವರನು ಬೇಗದಿ ಬಂದನು
ಬಾಗಿ ಮಾತಾಪಿತರಡಿಗೆ

## ಮಾತು

ಇದು ಏನಮ್ಮಾ ನೀವೆಲ್ಲಾ ಒಟ್ಟುಗೂಡಿ ಬಂದಿರುವಿರಿ?
ಕಾರಣವೇನು? ಎಂದು ಕೇಳಲು ತಾಯಿಯು ಅತಿ
ಆಶ್ಚರ್ಯದಿಂದ ಆತನನ್ನೇ ಕೊಂಡಾಡಿ ಪಾಡುತ್ತಿರುವಳು.

ಪಾಹಿ ಕೃಷ್ಣನೆ ಪಾಹಿ ಪಂಕಜಾಕ್ಷ
ಪಾಹಿ ಪದ್ಮನಾಭ ಪಾಲಿಸೆನ್ನನೀಗ ಪ

ಶಂಖ ಚಕ್ರಧಾರಿ ಬಿಂಕದಿಂ ಕೊಳಲೂದಿ
ಶಂಖ ಚೂಡನ ಕೊಂದ ಶಂಕರಾದಿ ವಂದ್ಯ ೧

ಭಯ ನಿವಾರಣ ಕೃಷ್ಣಾ
ಭಯವ ಪರಿಹರಿಸಯ್ಯಾ ೮

ಕರುಣದಿ ಸಲಹುವ
ದೊರೆಯೆ ನೀ ಸರಿಯೆಂದು
ಮೊರೆಯ ಹೊಕ್ಕೆನು ಕಾಯೊ
ಕಮಲನಾಭ ವಿಠ್ಠಲ ೯

## ವಚನ

ಇಂದಿರಾಪತಿ ಕೃಷ್ಣ ಚಂದದಿಂದಲಿ ನಲಿದು
ಬಂದ ಕಷ್ಟಗಳೆಲ್ಲ ಪರಿಹರಿಸಿ ಸಲಹುವದು
ನಿಂದು ಕರಗಳ ಮುಗಿದು ಪ್ರಾರ್ಥಿಸುವೆ ಮಾಧವನೆ
ಬಂಧನವ ಪರಿಹರಿಸು ಮುಂದೆ ಮಮತೆಯನಿಟ್ಟು
ವಂದಿಸುತ ಬೇಡುವೆನು ಚಂದದಿಂ ಸಲಹೊ ದೇವ

## ಆರ್ಯ

ನಾರದನಾಡಿದ ಈ ವಿಧ ನುಡಿಗಳ
ಶ್ರೀಧರ ಕೇಳುತ ನಸುನಗುತ
ಆದರಿಸುತ ಮನ್ನಿಸುತ ದೇವನು
ಸಾಧುಗಳರಸನ ಸಂತವಿಸಿ ೧

ಭಕ್ತರನುದ್ಧರಿಸುವ ಕಾರ್ಯವು ಎನ-
ಗತ್ಯವಸರವಾಗಿರುವ ಕಾರ್ಯ
ತಕ್ಕವರವ ನೀಡುವೆ ಯಾಚಿಸು ನಿನ
ಭಕ್ತಿಗೆ ಮೆಚ್ಚಿದೆ ಕೇಳೆನಲು ೨

ಕರುಣಾಕರ ಈ ಪರಿ ನುಡಿಯಲು
ನಾರದಮುನಿ ಸಂತೋಷದಿ ಕುಣಿದು
ಹಗಲಿರುಳೆಡೆ ಬಿಡದಲೆ ಎ-
ನ್ನೊಡನಾಡುತಲಿರು ಕಮಲನಾಭ ವಿಠ್ಠಲನೆ ೩

ಸಪ್ತಸಾಗರ ನೀನೆ
ಸಪ್ತಮೇರುವು ನೀನೆ
ಸಪ್ತರುಷಿಗಳು ನೀನೆ
ಸರ್ವತ್ರ ನೀನೆ ೧೨

ಹತ್ತೆಂಟು ಪುರಾಣ ಅಭಿ-
ವ್ಯಕ್ತ ಮಾಡಿದ ನೀನೆ
ಮತ್ತೆ ಸರ್ವತ್ರ ವ್ಯಾಪಕನು
ನೀನೆ ೧೩

ವಿಶ್ವತೋ ಮುಖ ನೀನೆ
ವಿಶ್ವರೂಪನು ನೀನೆ
ವಿಶ್ವವ್ಯಾಪಕ ನೀನೆ
ವಿಶ್ವ ನೀನೆ ೧೪

ಅಂತವಿಲ್ಲದ ಅ-
ನಂತ ರೂಪನು ನೀನೆ ಅ-
ನಂತ ಮಹಿಮನು ನೀನೆ
ಅಚ್ಚುತನು ನೀನೆ ೧೫

ಅಣುರೇಣು ಘನತೃಣವು
ವನ ನದಿಗಳು ನೀನೆ
ಘನಕೃಪಾಂಬುಧಿ ನೀನೆ
ಘನವು ನೀನೆ ೧೬

ಅಕ್ಷರೇಢ್ಯನು ನೀನೆ
ಪಕ್ಷಿವಾಹನ ನೀನೆ
ಶಿಕ್ಷಿಸುವ ದೊರೆ ನೀನೆ
ರಕ್ಷಿಸುವ ನೀನೆ ೧೭

## ಭಾಮಿನಿ ಷಟ್ಪದಿ

ಈ ಪರಿಯಲಿ ನಾರದರು ನುಡಿಯಲು
ಶ್ರೀಪತಿಯು ಕೇಳುತಲಿ ಮುದದಲಿ
ವ್ಯಾಪಿಸುವ ಕಲಿಯುಗದಿ ನಿನ್ನಭೀಷ್ಟಗಳ ಸಲಿಸುವೆನು
ಸ್ವೀಕರಿಸು ನಿನ್ನಯ ಮನೋಗತ

ಏಕೆ ಚಿಂತಿಪೆ ತೆರಳು ಎಂದೆನೆ
ಗೋಪತಿಯ ನುಡಿ ಕೇಳಿ ಅಡಿಗಳಿಗೊಂದಿಸುತ

ಯದುಕುವರಾ ಶ್ರೀ ಶ್रೀಧರಾ
ಯದುಕುವರಾ ಶ್ರೀಧರಾ ಪ

ಮದನ ಗೋಪಾಲನೆ ಮಧುಸೂದನ ಹರಿ ಅ.ಪ

ಸುಂದರ ಸುಗುಣನೆ ಮಂದರೋದ್ಧರ ಸುರ
ವೃಂದವ ಕಾಯ್ದ ಮುಚುಕುಂದ ವರದ ಹರಿ ೧

ಪಾವನ ಚರಿತನೆ ಪಾಪ ವಿದೂರನೆ
ಪಾಲಿಸು ಭಕುತರ ಪರಮ ಪುರುಷ ಹರಿ ೨

ಕರುಣದಿ ಕರಪಿಡಿ ಕರಿವರದನೆ ಕೃಷ್ಣ
ನಿರುತದಿ ಸ್ಮರಿಸುವೆ ಕಮಲನಾಭ ವಿಠ್ಠಲ ೩

## ಆರ‍್ಯ

ಈ ಪರಿ ಸ್ತುತಿಸುತ ಸುರಮುನಿ ಹರುಷದಿ
ಶ್ರೀಪತಿ ಅಡಿಗಳಿಗೆರಗುತಲಿ
ಹೊರಟನು ದ್ವಾರಕ ಪುರವನೆ ಬಿಡುತಲಿ
ಸರಸಿಜಾಸನನಲ್ಲಿಗೆ ಬರಲು

ಕರೆಕರೆಯ ಭವದೊಳಗೆ
ಮುಳುಗಿದೆನೊ ಮಾಧವನೆ
ಭಯವ ಪರಿಹರಿಸಯ್ಯ
ಭಾಗ್ಯನಿಧಿಯೆ ೬

ವರ ಮತ್ಸ್ಯ ಕೂರ್ಮ ಸೂ–
ಕರ ನೃಹರಿ ವಾಮನ
ವರ ಭಾರ್ಗವನೆ ರಾಮ
ಕೃಷ್ಣ ಹರಿಯೆ ೭

ತರುಣಿಯರ ವ್ರತಭಂಗ
ಏರಿ ಮೆರೆದಿಯೊ ಕುದುರೆ
ಕರದಿ ಖಡ್ಗವ ಪಿಡಿದಿ
ಹರಿಯೆ ನೀನು ೮

ದುರುಳರನೆ ಸಂಹರಿಸಿ
ಸುಜನರನೆ ಪೊರೆದ ಹರಿ
ಮರೆಯದೆನ್ನನು ಸಲಹೊ
ಮಂಗಳಾಂಗ ೯

ಸುತ್ತ ಬ್ರಹ್ಮಾಂಡದೊಳು
ವ್ಯಾಪ್ತನಾಗುವ ನೀನೆ
ವ್ಯಕ್ತನಾಗುವ ನೀನೆ ನಿ
ರ್ಲಿಪ್ತ ನೀನೆ ೧೦

ಸೃಷ್ಟಿ ಕರ್ತನು ನೀನೆ
ಮತ್ತೆ ರಕ್ಷಿಪ ನೀನೆ
ಸೃಷ್ಟಿಗಿಂತಲು ಪೂರ್ವ
ದೊರೆಯು ನೀನೆ ೧೧

## ಕಂದ

ಕಳೆಯಲು ಕೆಲವು ಕಾಲದಿ ನಾರದ
ನಳಿನಾಕ್ಷನ ಅಪ್ಪಣೆಯಂತೆ
ಜನಿಸಿದರಾಗಲೆ ಭುವಿಯೊಳು
ಹರಿಮಾಯದ ಲೀಲೆ ಪೊಗಳಲೊಶವೆ

ಜನಿಸಿದರಾಗಲೆ ಹರಿಯಾಜ್ಞೆಯಿಂದಲಿ ಪ

ಪುರಂದರಗಡದೊಳು ಹಿರಿಯನೆಂದೆನಿಸಿದ
ಪರಮ ಸಾತ್ವಿಕನ ಗೃಹದಲಿ ನಾರದ ೧

ಪರಮ ಸಂಭ್ರಮದಿ ಮಾತಾಪಿತೃಗಳು
ನಲಿದರು ಪುತ್ರನ ನೋಡುತ ಪ್ರತಿದಿನ ೨

ಥಳಥಳಿಸುವ ಮುಖಕಾಂತಿಯ ನೋಡುತ
ಹರುಷದಿ ವಿಪ್ರರ ಕರೆಸಿದರಾಗಲೆ ೩

ಪರಮ ಸಂಭ್ರಮದಿ ವರದಪ್ಪನು ತನ್ನ
ತರಳಗೆ ವೆಂಕಟಪತಿ ನಾಮವನಿಡೆ ೪

ರುಳಿಕಾಲ್ಗೆಜ್ಜೆಯು ಘಲುಘಲುರೆನುತಲಿ
ಕುಣಿಯಲು ಕಮಲನಾಭ ವಿಠ್ಠಲನೆಂದು ೫

## ಆರ್ಯ

ಹದಿನೆಂಟನೆ ವತ್ಸರದಲಿ ತನಯಗೆ
ಮುದದಿ ವಿವಾಹೋತ್ಸವ ನಡಿಸೆ
ತರುಣಿಯು ಸಾಧ್ವೀಮಣಿಯಾಗಿರುತಿರೆ
ಹಿರಿಯರಿಗತಿ ಸಾತ್ವಿಕಳಾಗಿ ೧

ಶ್ರೀ ತುಳಸಿ ಬೃಂದಾವನದ ಮುಂದೆ ನಿಲ್ಲಿಸುತ
ಮಾರಮಣ ನಿಂತಂಥ ಸ್ಥಳವು ಇದು ಎಂದೆನಲು
ಭಾರಿ ದು:ಖದಿ ಬಿದ್ದು ಹೊರಳಿದನು ಆ ಸ್ಥಳದಿ
ಕರುಣಿಸೈ ಕಮಲನಾಭ ವಿಠ್ಠಲನೆ ಕಡುದ್ರೋಹಿಗೆನುತ

ಶರಣು ಸಜ್ಜನಪ್ರಿಯ
ಶರಣು ಸುರಮುನಿಗೇಯ
ಶರಣು ಭಕ್ತರ ಪೊರೆವ
ಭಯ ರಹಿತ ಜೀಯ ೧

ಶ್ರೀಶ ನಿನ್ನಯ ಪಾದ
ದಾಸನಾಗುವೆ ಬಿಡದೆ
ಪೋಷಿಸೈ ಕರುಣದಿಂ
ವಾಸುದೇವ ೨

ಭಕ್ತವತ್ಸಲ ಸ್ವಾಮಿ
ಭಯನಿವಾರಣನೆಂದು
ಭೃತ್ಯರು ಪೊಗಳಿ ಪಾ-
ಡುವರೊ ದೇವ ೩

ಕರಿರಾಜ ಪಾಂಚಾಳಿ
ಮೊರೆ ಇಡುತಲಿರೆ ಕೇಳಿ
ತ್ವರದಿಂದ ರಕ್ಷಿಸಿದೆ
ದೀನ ಬಂಧು ೪

ಅರಿತು ಸ್ತುತಿಪರೊ ನಿತ್ಯ
ಅಜಭವಾದಿಗಳೆಲ್ಲ
ಮರುತಾಂತರ್ಯಾಮಿ ಶ್ರೀ
ಹರಿಯೆ ನಿನ್ನ ೫

ಮನೆಧನವೆಲ್ಲವೂ ಭ್ರಮಿಸದೆ ತ್ಯಜಿಸುವ
ನಿಶ್ಚಲ ಮನದಲಿ ನಿಲಲಾಗ ೨

ಕಮಲಾಕ್ಷಿಯೆ ಕಡು ಹರುಷದಿ ಒಲಿವೆನು
ಇನಯನಿಗೀ ಪರಿ ತಿಳುಹೆನಲು
ಕಮಲನಾಭ ವಿಠ್ಠಲಗೊಂದಿಸಿದೆನು
ಕ್ಷಣದಲಿ ಮರೆಯಾದನು ದೇವ ೩

## ಕಂದ

ಏನಿದು ಅತಿಶಯ ತರುಣಿಯೆ
ನೀನೆಲ್ಲಿ ನೋಡಿದೆ ನಿಗಮಗೋಚರನ
ನಾನಲ್ಲಿಗೆ ಬರುವೆನು ತೋರಿಸು
ವಾರಿಜಾಕ್ಷನ ಚಾರುಚರಣಗಳೆನಗೆ

## ವಚನ

ನಾರಿ ಪೇಳಿದಳಾಗ ನವನೀತಧರ ಕೃಷ್ಣ
ಸಾರಿ ಬಂದನು ಶ್ರೀ ತುಳಸಿ ಬೃಂದಾವನದ ಬಳಿಯಲ್ಲಿ
ನೋಡಿ ನೇತ್ರಗಳು ಆನಂದಾಶ್ರು ತುಂಬಿರಲು
ಬೇಡಿದೆನು ಪಾದಗಳಿಗೊಂದಿಸುತ ಭಕ್ತಿಯಲಿ
ನೋಡು ಎನ್ನ ಪತಿದೇವ ಮಾಡುವಂತ ವ್ರತವ
ನೋಡಿ ದಯಮಾಡೆಂದು ಬೇಡುತಿರಲಾಕ್ಷಣದಿ
ಕೇಳು ತ್ರಿರಾತ್ರಿವ್ರತದಿ ತೃಪ್ತನಾಗಿಹೆನು ನಾನು
ಅದರಿಂದ ನಿನ್ನ ಪತಿಗನುಗ್ರಹವು ಮಾಡಿಹೆನು
ಪೇಳಿದಂದದಿ ಮಾಡು ಎಂದೆನುತ ಮರೆಯಾಗೆ
ತೋರದಿರೆ ಎನಗೊಂದು ಆನಂದ ಸಂಭ್ರಮದಿ
ಪೇಳ ಬಂದೆನು ಇಲ್ಲಿಗೆನುತ ಪೇಳಲು ಸತಿಯು
ಧಾರೆ ಕಣ್ಣಿಂದುದುರಿಸುತ್ತ ನಾಯಕನಾಗ
ತೋರು ಶ್ರೀಹರಿನಿಂದ ಸ್ಥಳವಾವುದೆಂದೆನಲು
ತೋರುವೆನು ಎಂದೆನುತ ಕರಪಿಡಿದು ಕರತಂದು

ತಂದೆಯು ಪುತ್ರನ ನೋಡುತ ಹರುಷದಿ
ಚಂದದಿ ವಿದ್ಯಾಭಾಸ್ಯಗಳ
ಬಂಗಾರವು ವಜ್ರದ ಆಭರಣಗಳಿಂದ
ತುಂಬಿರೆ ತನ್ನ ಗೃಹದಲ್ಲಿ ೨

ಕನಕಾಭರಣಗಳಣಿ ಮಾಡುತಲಿ
ತನಯನಿಗೆಂದನು ಶೀಘ್ರದಲಿ
ಘನವ್ಯಾಪಾರಕೆ ತೆರಳೈ ಕಂದನೆ
ಕಮಲನಾಭ ವಿಠ್ಠಲ ಒಲಿವ ೩

## ಸೀಸಪದ್ಯ

ತಂದೆಯಾಡಿದ ವಾಕ್ಯ ಕಂದ ಸಿರದಲಿ ವಹಿಸಿ
ಚಂದದಾಭರಣದ ಸಹಿತ ಪೊರಟು
ಚಂದುಳ್ಳ ರಾಜರಲಿ ಪೊಂದಿ ಸ್ನೇಹವ ಮಾಡಿ
ಬಿಂದಿಗೆ ಹಣಗಳನು ಪೊಂದಿಸುತಲಿ
ಈ ರೀತಿಯಿಂದ ವ್ಯಾಪಾರ ಮಾಡುತಲಿರಲು
ಯಾರು ಸರಿಯಿಲ್ಲ ತನಗೆಂದು ಮುದದಿ
ಭಾರಿದ್ರವ್ಯವು ಕೊಡಲಾಗ ನೋಡುತ ಮುದದಿ
ಲೋಭ ಇಮ್ಮಡಿಸೆ ಶ್ರೀ ಹರಿಯ ಮರೆತು
ದಾರಿದ್ರ್ಯ ಪೀಡಿತರ ನೋಡದಲೆ ಕಂಗಳಲಿ
ನೀಡದೆ ಭಿಕ್ಷವನು ಲೋಭದಿಂದ
ಯಾಚಕರು ಬಂದರೆ ಬಡಿವೆನೆಂದು
ಶಾಸನವಮಾಡಿ ತನ್ನ ಸತಿಯಕರೆದು
ಆ ಸಮಯಕಾದಷ್ಟು ದವಸವಳೆದು
ಕಾಸು ಬಿಡದಲೆ ಕಮಲನಾಭವಿಠ್ಠಲನಮರೆತ

## ಆರ‍್ಯ

ಈ ಪರಿ ಲೋಭದ ಮನುಜನ ಕಾಣುತ
ಶ್ರೀಪತಿ ಯೋಚಿಸಿ ಮನದಲ್ಲಿ

ವ್ಯಾಪಾರದ ಲೋಭದಿ ಮದ ತುಂಬಿರೆ
ಜ್ಞಾಪಿಸುವೆನು ಹಿಂದಿನ ಚರಿತಾ ೧

ಹೀಗೆನುತಲಿ ಯೋಚಿಸುತಲಿ ಶ್ರೀಹರಿ
ಬೇಗ ವೃದ್ಧ ಬ್ರಾಹ್ಮಣನಾಗಿ
ಬಾಲಕನೊರ್ವನ ಒಡಗೂಡುತಲಿ
ಶೀಘ್ರದಿ ಬಂದನು ಆಪುರಕೆ ೨

ಶಿಸ್ತಿನಿಂದ ಶ್ರೀಹರಿ ಬರಲಾಕ್ಷಣ
ವಿಸ್ತಾರದ ಬಾಗಿಲಮುಂದೆ
ಕತ್ತೆತ್ತದೆ ವಿತ್ತದ ಕಡೆ ಮನವಿರೆ
ಕರ್ತೃ ಕಮಲನಾಭ ವಿಠ್ಠಲ ನೋಡಿ ೩

## ಕಂದ

ನವಕೋಟಿ ನಾರಾಯಣನೆಂಬುವ
ಬಿರುದನು ಕೇಳುತ ಇಲ್ಲಿಗೆ ಬಂದೆ
ತನಯನಿಗೆ ಉಪನಯನದ ಕಾಲವು
ಎನಗೆ ಸಹಾಯವು ದೊರಕಿಪುದೆಂದೆ

## ಭಾಮಿನಿ ಷಟ್ಪದಿ

ತಲೆಯನೆತ್ತದೆ ತಿರುಗಿ ನೋಡದೆ
ಧನದ ಮದದಿಂ ಬೀಗಿ ಮೆರೆಯುತ
ತಿಳಿಯದಲೆ ಅನ್ಯರ ದುಃಖಗಳ ಮನ್ನಿಸದಿರಲು
ಮನಕೆ ತಂದು ನುಡಿದ ಶ್ರೀಹರಿ
ತನಯನಿಗೆ ಉಪನಯನ ಮಾಡಿದ
ಫಲವು ಬಾಹುದು ನೀಡೆ ಧರ್ಮವು ಬಡ ವಿಪ್ರನಿಗೆ

ಮರೆಯದೆ ಒಲಿದೀಗಲೆ ಪಾಲಿಸು ನರ–
ಹರಿ ನಿನ್ನಯ ಪಾದ ಭಜಕರನು ೪

ಅಗಣಿತ ಮಹಿಮನ ಪಾದಗಳ ಕಾಣದೆ
ಇರಲಾಗದು ಈ ತನುವೆನುತ
ಬಗೆ ಕಾಣದೆ ಕಳವಳಿಸುವ ಪತಿಯನು
ಕಮಲನಾಭ ವಿಠ್ಠಲ ಕಾಯೊ ೫

## ವಚನ

ಸತಿಯು ಈ ಪರಿಸ್ತುತಿಸೆ ವಿತತ ಮಹಿಮನು ಕೇಳಿ
ನಸುನಗುತ ನುಡಿದನು ಪತಿವ್ರತೆ ಕೇಳೆನುತ
ಪತಿಯ ದು:ಖಕೆ ಹಿತದ ದಾರಿ ಪೇಳುವೆ ಕೇಳು
ಅತಿಶಯದ ಐಶ್ವರ್ಯವೆಲ್ಲ ದಾನವ ಮಾಡಿ
ಶ್ರೀ ಪತಿಯೆ ಗತಿಯೆಂದು ದಾಸನಾಗುವ ತನಕ
ಹಿತವು ಮನಕಾಗದೆಂದೆನಲು ಕೇಳುತ ಸತಿಯು
ನುತಿಸಿದಳು ಮತ್ತೊಮ್ಮೆ ಅತಿಶಯದ ಭಕ್ತಿಯಲಿ
ಶ್ರೀ ಪತಿಯು ಅದೃಶ್ಯವಾಗಲಾಕ್ಷಣದಲ್ಲಿ
ಪತಿ ಬಳಿಗೆ ಬಂದಳಾ ಸರಸ್ವತಿಯು
ಅತಿ ತವಕದಲಿ

## ಆರ‍್ಯ

ನೋಡಿದೆ ನೀ ಕ್ಷಣ ಶ್ರೀಹರಿ ಮೂರ್ತಿಯ
ಮಾಡಿದೆ ವಂದನೆ ಭಕ್ತಿಯಲಿ
ಮಾಡುತಿಹೆನು ಪತಿವ್ರತ ನಿನ್ನ ಕಾಣಲು
ನೀಡು ಅಭಯವೆಂದೆನಲಾಗ ೧

ತಿಳಿದಿಹೆ ತೆರಳೌ ತರುಣಿಯೆ ಶೀಘ್ರದಿ
ಇನಿಯನಿಗೀ ಪರಿ ತಿಳುಹೆನುತ

## ವಚನ

ನೋಡುತಲೇ ಶ್ರೀಹರಿಯ ಮಾಡಿ ವಂದನೆಯನ್ನು
ಬಾಗಿ ಸಿರವನು ಆನಂದಭಾಷ್ಪವ ಸುರಿಸಿ
ಬೇಗ ಪುಳಕಾಂಕಿತದಿ ಗದ್ಗದ ಸ್ವರದಿಂದ
ಯೋಗಿವಂದ್ಯನ ಸ್ತುತಿಸಿ ಕೊಂಡಾಡಿ
ಪಾಡಿದಳು ಮುದದಿ

ಇಂದಿರೇಶನೆ ನಾ ಒಂದೆ ಮನದಿ ನಿನ್ನ
ಸುಂದರ ಚರಣಕೆ ವಂದಿಸುವೆ ಪ

ಇಂದಿಗೆನ್ನ ಕಂಗಳಿಗ್ಹಬ್ಬವು ಗೋ-
ವಿಂದ ಮುಕುಂದನ ನೋಡಿದೇನು ಅ.ಪ

ಮಂದರೋದ್ಧರ ಮುಚುಕುಂದ ವರದ ಹರಿ
ಕುಂದರದನ ಕಂಜನಾಭ
ಅಂಜುವೆ ಈ ಭವ ಬಂಧವ ತಪ್ಪಿಸು
ಮಂಗಳ ಚರಿತ ಮುರಾಂತಕನೆ ೧

ತಂದೆ ತಾಯಿ ನೀನೆಂದು ನಂಬಿದೆನೊ
ಮುಂದೆ ದಾರಿ ತೋರುವ ದೇವ
ಕಂದನೆಂದು ನೀ ಚಂದದಿ ಸಲಹೋದು
ಪೊಂದಿದ ಕಾರ್ಯ ನಿನ್ನದೊ ದೇವ ೨

ಕಂತುಜನಕ ಕುರಣಾಕರ ಶ್ರೀಹರಿ
ಸಂತತ ಭಕ್ತರ ಪೊರೆಯುವನು
ದಂತಿವರದ ಅನಂತಮಹಿಮ ಸ-
ರ್ವಾಂತರಾತ್ಮ ಸಲಹೆಂದೆನುತ ೩

ಕ್ಷರಾಕ್ಷರದೊಳು ಪರಮ ಪುರುಷನೆಂದು
ನಿರುತವು ಪೊಗಳುತಲಿಹ ವೇದ

## ವಚನ

ಮಾತನಾಡದೆ ಸುಮ್ಮನಿರಲು ವಿಪ್ರನು ನೋಡಿ
ಯಾತಕೀ ಪರಿ ಮೂರ್ಖತನವು ಬೇಡೆಂದೆನುತಾ
ಯಾಚಿಸುವ ನುಡಿ ಕೇಳು ಸಾವಧಾನದಿ ಬಾಳು

ನಾಯಕರೇ ಎನ್ನಯ ಪುತ್ರನಿಗೆ
ಕಾಲಕ್ಕೆ ಉಪನಯನವು ಮಾಡೇ
ಬಹಳ ಬಡತನವಾದ ಕಾರಣ
ಬಂದೆನು ನಿಮ್ಮಲ್ಲಿ ೧

ಮೂರು ಲೋಕದೊಳಗೆ ನಿನ್ನ
ಕೀರುತಿಗಳು ಕೊಂಡಾಡುವದು
ಮಾರುತೀಶನ ಭಕ್ತರಲ್ಲಿ
ಕರುಣವು ಮಾಡುವದು ೨

ಮೂರು ಮೂರು ಬಾರಿ ಕೇಳೆ
ಮಾರುತ್ತರವು ಕೊಡದಲೆ ಕುಳಿತ
ನಾಯಕರನ್ನೆ ಮತ್ತೆ ಮತ್ತೆ
ಕೇಳಲುಪಕ್ರಮಿಸಿ ೩

ಚಕ್ರವರ್ತಿಗಳಲ್ಲಿ ನಿಮ್ಮ
ರತ್ನ ಮುತ್ತು ಆಭರಣಗಳು
ಚಿತ್ರ ಲಾಭದ ವ್ಯಾಪಾರ
ಮತ್ತೆಲ್ಲಿಯು ಕಾಣೆ ೪

ಸತ್ಯವಂತರು ಅತಿಥಿಗಳನ್ನು
ಮತ್ತೆ ಕಾಪಾಡುವರು ಎಂದು
ಚಿತ್ತದಿ ಸ್ಮರಿಸುತ ಬಂದೆನು ಕಾರ್ಯ
ಸತ್ಯವು ಮಾಡುವದು ೫

ಕೇಳಿ ಕೋಪದಿಂದ ನಾಯಕ
ಪೇಳಿದನು ತನ್ನ ಭೃತ್ಯರ ಕರೆದು
ತೋಳುಗಳನ್ನೆ ಹಿಡಿದೆಳೆಯಿರಿ ಹೊರಗಡೆ
ಧಾಳಿ ಬಹಳಾಯ್ತು ೬

ಬಡವರಿಗೆ ಬಲ್ಲಿದವರ ಸ್ನೇಹದ
ದೊರಕುವದುಂಟೇ ಲೋಕದಲ್ಲಿ
ಒಡೆಯನ ಪ್ರೇರಣೆಯಾದದ್ದು ಕೊಟ್ಟು
ತಡೆಯದೆ ಕಳುಹುವದು ೭

ತಡೆಯದೇ ಇಲ್ಲಿಂದಲೆ ಹೊರಡು
ಬಡವರ ಮಾತು ಸಲ್ಲದು ಎನಗೆ
ಕೊಡುವದು ಯಾರ ಗಂಟೆಂದೆನುತ
ನುಡಿದನು ಘರ್ಜಿಸುತಾ ೮

ಬಡವರುಂಟು ಲೋಕದಲ್ಲಿ
ಬಿಡದೆ ಯಾಚನೆಗಾಗಿ ಬರಲು
ನುಡಿವರೆ ನಿಷ್ಠುರದ ಮಾತು
ನಡತೆಯು ಸರಿಯಲ್ಲ ೯

ಯೋಚನೆ ಗೀಚನೆ ನಮ್ಮಲಿಲ್ಲ
ಸೂಚಿಸಿದಂತೆ ನಡೆಯುವುದಿನ್ನು
ಯೋಚನೆ ಮಾಡದೆ ನಡೆಯಿರಿ ಮುಂದಕೆ
ಸಾಕಿನ್ನೀ ವಚನ ೧೦

ತಡೆಯದೆ ಹೊರಡುವೆ ನಿನ್ನನುಗ್ರಹ
ಬಿಡದೆ ಆಗುವ ತನಕ ಕಾಡಿ
ಬಡವನಲ್ಲಿ ಇಡುತ ಕೃಪೆಯನು
ಬಿಡದೆ ಸಲಹೆಂದ ೧೧

ನೀಲವರ್ಣನ ತೋರು ನಿತ್ಯಕಲ್ಯಾಣಿ
ಕಾಳಾಹಿವೇಣಿ ಕಮಲಾಯತಾಕ್ಷಿ
ಸೋಮ ಸಹೋದರಿಯ ಪ್ರಿಯನರಸಿಯೆ ನಿನ್ನ
ಪಾದಗಳಿಗೊಂದಿಸುವೆ ಪರಿಪಾಲಿಸು
ಮಂಗಳಂ ಶ್ರೀ ತುಳಸಿ ಜಯಮಂಗಳಂ ೧

ಪಕ್ಷಿವಾಹನನ ವಕ್ಷಕ್ಕೆ ಮಾಲಿಕೆಯಾಗಿ
ಅಕ್ಷಯ ಗುಣಪೂರ್ಣನಿಗೆ ಅರ್ಚಿಸುವಳಾಗಿ
ಹೆಚ್ಚಿನಾಭಾರಣಗಳಿಗ್ಹೆಚ್ಚಾಗಿ ಮೆರೆಯುವ
ಅಚ್ಚುತನರಾಣಿ ಮತ್ಸ್ಯ ಮೂರುತಿಯ ತೋರೆ
ಮಂಗಳಂ ಶ್ರೀ ತುಳಸಿ ಜಯಮಂಗಳಂ ೨

ಥಳ ಥಳಿಪ ಮಕುಟ ಮುತ್ತಿನ ಹಾರ ಪದಕಗಳು
ಗಳದಿ ಧರಿಸಿದ ನಮ್ಮ ನಳಿನಾಕ್ಷನಾ
ಕ್ಷಣಬಿಡದೆ ಧ್ಯಾನಿಸುವೆ ಕ್ಷಣಬಿಡದೆ ತೋರಮ್ಮ
ಕಮಲನಾಭ ವಿಠ್ಠಲನರಸಿ ಶ್ರೀ ತುಳಸಿ
ಮಂಗಳಂ ಶ್ರೀ ತುಳಸಿ ಜಯಮಂಗಳಂ ೩

## ಕಂದ

ಹಾ ಕೃಷ್ಣನೆ ಹಾರಕೇಯೂರ
ಶ್ರೀ ವತ್ಸಾಂಕಿತನೆ ಶ್ರೀ ಮನೋಹರನೆ
ಕಾಪಾಡೆನ್ನಯ ಪತಿಯನು
ಯಾಕಿಂತುಪೇಕ್ಷಿಸುವೆ ಯದುಪತಿ ಕೃಷ್ಣಾ

## ಆರ‍್ಯ

ಭಕ್ತವತ್ಸಲ ಭಕ್ತಿಗೆ ಒಲಿವನು
ಮತ್ತೆ ಸಾಧ್ವಿ ಭಕ್ತಿಗೆ ಮೆಚ್ಚಿ
ವ್ಯಕ್ತನಾದ ಆ ವಿಪ್ರನ ಸತಿಗೆ
ಪುರುಷೋತ್ತಮ ನಲಿನಲಿದಾಡುತಲಿ

ಬಡವರನ್ನು ನೋಡುವಂಥ
ನಡತೆ ಎನ್ನ ಘಣೆಯಲಿಲ್ಲ
ಬಿಡಿ ನುಡಿಗಳು ನಡೆಯುತ ಕಾಲವನು
ಕಳೆವುದು ತರವಲ್ಲ ೧೨

ವಡವೆ ವಸ್ತುಗಳನ್ನೆ ಕೇಳಿ
ವಡಲುರಿಸುವನಲ್ಲ ನಾಯಕರೆ
ಬಡವನ ತನಯನ ಉಪನಯನವು
ನಿಮ್ಮೊಡಲಿಗೆ ಬಿದ್ದಿಹುದು ೧೩

ಹೆಚ್ಚು ನುಡಿಯಲಿ ಬೇಡ ವಿಪ್ರ
ಬೆತ್ತದ ಪ್ರಹರ ತಪ್ಪದು ನಿನಗೆ
ವ್ಯರ್ಥಕಾಲ ಕಳೆಯುತಲಿರುವಿ
ಚಿತ್ತಕೆ ಬೇಸರದೆ ೧೪

ಹಿಂದೆ ಬಲಿಯನು ವಾಮನ ಬೇಡೆ
ಸಂದೇಹಿಸದಲೆ ಕೊಟ್ಟನು ದಾನ
ಇಂದು ನೀನೀ ಪರಿ ನುಡಿಯುವದು
ಚಂದವೆ ನಾಯಕರೆ ೧೫

ಹಿಂದೆ ಮುಂದಿನ ಸುದ್ದಿಗಳನ್ನು
ಒಂದೂ ಕೇಳೆನು ಬಡಬ್ರಹ್ಮಣನೆ
ಬಂದ ದಾರಿಗೆ ಸುಂಕವ ಕೇಳದೆ
ಮುಂದಕೆ ನಡೆಯೆಂದ ೧೬

ಕರೆ ಕರೆ ಮಾಡದೆ ತೊಲಗೊ ಎಂದು
ಸರಸರ ನುಡಿಯೆ ವಿಪ್ರನು ಕೇಳಿ
ಕಮಲನಾಭ ವಿಠ್ಠಲ ವಿಠ್ಠಲ
ವಿಠ್ಠಲ ಎಂದೆನುತಾ ೧೭

ಅಂಬುಜಾಕ್ಷಿಯೆ ನೀನು
ಅಂಬುಧಿಶಯನನ
ಸಂಭ್ರಮದಲಿ ಪೊಂದಿ
ಚಂದದಿ ಮೆರೆಯುವಿ
ಅಂದಿಗೆ ಕಾಲ್ಗೆಜ್ಜೆ ಘಲುರೆನೆ
ಬಂದಿ ಬಾಪುರಿ ಚಂದ ತೋಳಿಗೆ
ಚಂದ್ರನಂದದಿ ಪೊಳೆವ ನಗೆಮುಖ
ಮಂದಹಾಸದ ಕೃಷ್ಣನರಸಿಯೆ ೧

ಸೋಮಸೂರ್ಯರ ಸೋಲಿಪ ಮುಖಕಾಂತಿಯ
ಕಾಮನ ಜನಕನಿಗೆ
ಪ್ರೇಮದಿಂದಲಿ ಒಲಿದು ಹೂಮಾಲೆ ಹಾಕಿದ
ಕಾಮನಯ್ಯನ ತೋರು
ಕರುಣಾಂಬುನಿಧಿ ದೇವಿ
ಭೂಮಿಜೆಯಪತಿ ಭುವನ ಸುಂದರ
ಸಾಮಗಾಯನ ಸರ್ವ ವ್ಯಾಪಕ
ಶ್ರೀಮನೋಹರ ಸುಜನ ಪ್ರಿಯ ಮಂ-
ದಾರ ಕೊರಳಲಿ ಧರಿಪ ನರಸಿಯೆ ೨

ಇಂದಿರೇಶನ ಮಡದಿ ಎನ್ನಯ ದುರಿ-
ತಂಗಳು ಹರಿವಂದದಿ
ಸುಂದರಿ ಮಣಿಯೆನ್ನ ಕುಂದುಗಳೆಣಿಸದೆ
ಮಂದಿರೋದ್ಧರ ಮುಚು-
ಕುಂದ ವರದನ ತೋರು
ಕಂದು ಗೊರಳನ ಸಖನ ಪ್ರಿಯಳೆ
ಪೊಂದಿ ಸ್ತುತಿಸುವೆ ನಿನ್ನ ಪಾದವ
ಸಿಂಧು ಶಯನ ಶ್ರೀ ಕಮಲನಾಭ ವಿ-
ಠ್ಠಲ ಪಾದಾಂಬುಜವ ತೋರಿಸು ೩

## ವಚನ

ಹೀಗೆ ನುಡಿಯುವ ನಾಯಕರು ತನ್ನ ಸೇವಕರ
ಸಹಾಯಕ್ಕೆ ಕರದು ಹೇಳಿದ ವಾಕ್ಯವನು ಕೇಳಿ
ಚಾರಕರು ವಿಪ್ರನನು ದೂರಕ್ಕೆ ಕಳುಹಿಸಲು
ಮಾರನಯ್ಯನು ಬಿಡದೆ ಆರುಮಾಸವು ಅವನ
ದ್ವಾರಕ್ಕೆ ಬಂದು ಮತ್ತವನ ಬೇಡುತಲಿರಲು
ಕ್ರೂರ ಮನದಿಂದ ಶ್ರೀಹರಿಯೆಂದು ಅರಿಯದಲೆ
ಚೀರಿ ಒದರುತಲವನ ಧಾಳಿ ಇಮ್ಮಡಿಸುತಲಿರೆ
ಹೇರೆರಡು ಸವೆದ ರೊಕ್ಕತಂದು ಸುರಿಸಿದರು
ನೋಡು ಇದರಲ್ಲಿ ಒಂದು ದುಡ್ಡು ಆರಿಸಿ ತೆಗೆದು
ತೀರಿಸಿಕೊ ನಿನ್ನ ಋಣವು ಎಂದೆನಲು
ನೋಡಿ ನಸುನಕ್ಕು ಇಂಥ ಲೋಭಿಗಳ ನಾಕಾಣೆ
ಪೂರ್ವದಲಿ ನಾ ಕೊಟ್ಟ ವರವ ಸಲ್ಲಿಸಬೇಕು
ಕರುಣಾ ಸಮುದ್ರ ನೆಂಬುವ ಬಿರುದು ಬಿಡಲಾರೆ
ಹರಿಯೆಂಬ ಸ್ಮರಣೆ ನಾಯಕನಿಗೆ ತಿಳಿವುದಕ್ಕೆ
ಲೋಭವೇ ಮೂಲಧನ ಅಜ್ಞಾನ ಸಾಧನೆಗೆ
ಇದಕೆ ಒಂದುಪಾಯವನೆ ಮಾಡುವೆನೆಂದು
ಪರಮ ಪತಿವ್ರತೆಯಾದ ಸರಸ್ವತಿಯ ಮಂದಿರಕೆ
ಸರಸರನೆ ಬಂದ ಬಾಲಕನ ಸಹಿತದಿ ಹರಿಯು
ನೋಡುತಲಿ ಆ ಸತಿಯು ಗಾಢದಿ ವಂದಿಸಲು
ಕೇಳೆ ಭಿಕ್ಷವನು ಕಮಲನಾಭವಿಠ್ಠಲನು ಮುದದಿ

## ಆರ್‍ಯ

ಆಲಿಸಮ್ಮ ನಾ ನುಡಿಯುವ ವಚನವ
ನೀಡು ಭಿಕ್ಷವನು ವಿಪ್ರನಿಗೆ
ನೋಡು ನಿನ್ನ ಪತಿ ರೀತಿಯು ತರವೆ
ಬಾಲಗೆ ಉಪನಯನದ ಸಮಯ ೧

ಗೋಪತಿ ಕೃಷ್ಣನ್ನ ಧ್ಯಾನಿಸುತ ಹಗಲಿರುಳು
ಪಾಪ ಪರಿಹಾರಕನ ಪಾದಕಾಂಬೆನು ಮನದಿ
ಯಾತಕೀ ಸಂಸಾರದ್ದಂಬಲವು ಬೇಡೆನುತ
ಲೋಕೈಕನಾಥನ ಧ್ಯಾನಿಸುತ ಮನದಲ್ಲಿ
ಏಕ ಚಿತ್ತದಿ ಸ್ತುತಿಸೆ ಲೋಕವಿಖ್ಯಾತ ಹರಿಯ

## ಆರ್ಯ

ಪತಿ ಹರಿಧ್ಯಾನದಿ ಪರವಶದಲಿ ಮೈ–
ಮರೆತು ಸ್ತುತಿಸೆ ಅತಿಭಕ್ತಿಯಲಿ
ಪತಿವ್ರತೆ ಪತಿಯಂದದಿ ಆಚರಿಸುತ
ಹಿತದಿ ಕಳೆಯಲಾ ಕಾಲವನು

## ಭಾಮಿನಿ ಷಟ್ಪದಿ

ನಾಲ್ಕು ದಿನ ಹೀಗಿರಲು ಪತಿವ್ರತೆ
ಪ್ರೀತಿಯಿಂ ಪತಿಸೇವೆ ಮಾಡುತ
ಸೋತು ಮಾತಾಡಿದಳು ಆಹಾರವನೆ ಭುಜಿಸಿರೆಂದು
ಮಾತಿಗುತ್ತರ ಕೊಡದೆ ಧ್ಯಾನದಿ
ಆತುರದಿ ಕುಳಿತಿರಲು ನೋಡುತ
ಆ ತರುಣಿ ಶ್ರೀ ತುಳಸಿ ಪೂಜೆಗೆ ಹೊರಟಳಾಕ್ಷಣದಿ

ಕಮಲಾಕ್ಷಿ ಶ್ರೀತುಳಸಿ ಎನ್ನಯ ಮನದ
ಶ್ರಮವೆಲ್ಲಾ ಪರಿಹರಿಸಿ ಪ

ಕಮಲನಾಭನ ರಾಣಿ
ನಮಿಸಿ ಬೇಡುವೆ ನಿನ್ನ
ಅಮರವಂದಿತ ಅಚ್ಯುತನ ಪಾದ
ಕ್ಷಣದಿ ತೋರಿಸು ಸುಂದರೀಮಣಿ ಅ.ಪ

ವೃಂದಾವನಿ ಜನನಿ ವಂದಿಪೆನು ಮು–
ಕುಂದನ ನಿಜರಮಣಿ

ಪಾದಾರವಿಂದಗಳಿಗೆ ನಮಸ್ಕರಿಸಿ ಅರ್ಪಿಸಿದ ಶ್ರೀಕಮಲನಾಭ ವಿಠ್ಠಲ ದಾಸ ವಿರಚಿತ ಶ್ರೀ ಪುರಂದರದಾಸರ ಚರಿತ್ರೆಯು- ನಿಡಗುರುಕಿ ಜೀವೂಬಾಯಿ.

## ೬ ಶ್ರೀ ಹರಿಮಾನಸ ಪೂಜಾ

ಯಾಕೆನ್ನನೆಬ್ಬಿಸಿದೆ ಶ್ರೀ ಹರಿಯ ಪೂಜೆಯ
ಧ್ಯಾನದೊಳಿರುತಿದ್ದೆನು ಪ

ಲೋಕವಂದ್ಯನ ಪೂಜೆ ಏಕಚಿತ್ತದಿ ಮಾಳ್ಪ ಸಮಯದಿ
ಶ್ರೀಕಾಂತನ ಸ್ಮರಣೆ ಮಾಡುತ ಅನೇಕ ವಿಧ
ಭಕ್ತಿ ಮಾಳ್ಪ ಸಮಯದಿ ಅ.ಪ

ಉದಯಕಾಲದೊಳೆದ್ದು ನದಿಯ ಸ್ನಾನಕೆ ಪೋಗಿ
ವಿಧಿ ಪೂರ್ವಕದ ಕರ್ಮಗಳ ಮುಗಿಸಿ
ಸದಮಲಾನಂದನ ನದಿಯ ಜಲದ ಮಧ್ಯ ಸ್ಮರಿಸುತ್ತ
ಮುದದಿನಾಗನ ಮೇಲೆ ಮಲಗಿರುವ ಹರಿಯ ಭಜಿಸುತ್ತ
ಪಾದಗಳನೊತ್ತುತ ಸಿರಿಯು ಭೂದೇವಿಯರು ಇಹರೆಂದು ಧ್ಯಾನಿಸುತ
ಪದಕದಂತಿಹ ಕಮಲಮಧ್ಯದಿ ನಾಲ್ಮೊಗನು ಇಹನೆಂದು ಚಿಂತಿಸುತ
ಸುರರು ಗಂಧರ್ವರುಗಳೆಲ್ಲರು ಸುರಿಸುತಿಹ ಪುಷ್ಪಗಳ ನೋಡುತ
ಪರಮ ವೈಭವದಿಂದ ಮೆರೆಯುವ ಹರಿಯ ರೂಪ
ಚಿಂತಿಸುವ ಸಮಯದಿ ೧

ಹರಿಯ ರಥವ ತೊಳೆವೆನೆಂಬನು ಸಂಧಾನದಿ
ಹರಿಪಾದೋದ್ಭವೆಯನ್ನು ಸ್ಮರಿಸುತಲಿ
ತ್ವರದಿಂದ ಸ್ನಾನವ ಮುಗಿಸುತ ಹರಿಯನ್ನು ಧ್ಯಾನಿಸುತ
ಹರಿಯರಥ ಶೃಂಗರಿಪೆನೆಂದು ನಾಮ ಮುದ್ರೆಗಳ ಧರಿಸುತ್ತ
ಹರಿಯ ಪೂಜೆಗೆ ಹರುಷದಿಂದ ಗ್ರೋದಕಗಳನು ತುಂಬಿಡುತ
ಪರಮ ಪುರುಷನ ಕೊಂಡಾಡಿ ಸ್ತೋತ್ರಗಳ ಮಾಡುತ್ತ

ಭಾಷೆಕೊಡಬೇಕೆನ್ನುತ ಕೇಳಲು
ಮೋಸವು ಮುನಿತಂತ್ರವು ಇದು ಎಂದು
ಲೇಸಾಯಿತು ನಾರದ ಮುನಿಗೈದ ವಿ–
ಲಾಸದ ತಂತ್ರವಿದು ೭

ತಂದೆತಾಯಿಗಳಾಣೆ ಕೊಡುವೆ
ಬಂಧು ಬಳಗಗಳಾಣೆ ಕೊಡುವೆ
ಮುಂದೆ ಅಗ್ರಜ ಬಲರಾಮನ ಆಣೆ
ಚಂದದಿ ನಂಬುವದು ೮

ಕೇಳುತಲೆ ಅಲ್ಲಿಂದಲೆ ಹೊರಟು
ಬಹಳ ಸಂಭ್ರಮದಿಂದ ಗಾಲವ
ಪೇಳಿದನು ಅಲ್ಲಿನ ಸುದ್ದಿಗಳು
ಕೇಳುತ ನಾರದರು ೯

ತಂದೆತಾಯಿಗಳಿಲ್ಲದವನ
ಬಂಧು ಬಳಗಗಳಿಲ್ಲದವನ
ಮುಂದೆ ಅಗ್ರಜನೆಂಬುವನರಿಯದ
ನಂದಜ ಹರಿ ತಾನು ೧೦

ಕೊಟ್ಟ ಭಾಷೆಯ ಸಾಲದು ಎಂದು
ಗಟ್ಟಿ ವಚನವ ಕೊಡಬೇಕೆಂದು
ಗಟ್ಯಾಗ್ಹರಿಯ ಚರಣವ ಪಿಡಿದು
ರಕ್ಷಿಸೆನ್ನುತ ಕೇಳಿ ೧೧

ಸರಸರನೆ ಬಂದ ಗಾಲವ
ಸರಸಿಜಾಕ್ಷನ ಪಾದವ ಪಿಡಿದು
ಸರಿಯಾದ್ಯೋಚನೆಯ ಪೇಳುದೇವನೆ
ಭರವಸೆವಿಲ್ಲೆನಲು ೧೨

ಭೂಸುರ ವೇಷ ಈ
ನೀಚಗಿನ್ನೊಮ್ಮೆ ತೋರೊ
ಯೋಚಿಸಿ ಬೇಡುವೆ
ದೋಷ ದೂರನೆ ರಂಗ ೧೦

ಸಾಗರದಲಿ ದೋಣಿ
ಸಿಕ್ಕಿ ಬಿರುಗಾಳಿಯಿಂದ
ಪೋಗುವಂದದಿಮನ
ಪೋಗುತಿರುವುದೊ ರಂಗ ೧೧

ನಿರಶನ ವ್ರತದಿಂದ
ಹರಿ ನಿನ್ನನರ್ಚಿಸುವೆನು
ದುರಿತ ರಾಶಿಯ ತರಿದು
ಕರುಣದಿ ನೋಡೊ ದೇವ ೧೨

ಕರುಣಸಾಗರ ದೇವ
ಕಮಲಸಂಭವನಯ್ಯ
ಕಮಲನಾಭ ವಿಠ್ಠಲ
ಸ್ಮರಿಸಿಬೇಡುವೆ ದೇವ ೧೩

## ಕಂದ

ಹಾ ಕೃಷ್ಣನೆ ರಕ್ಷಿಸು ರಕ್ಷಿಸು
ದಾನವಾಂತಕನೆ ದೇವ ದೈತ್ಯಕುಲ ವೈರಿ
ದೀನನ ಮನ್ನಿಸು ಮನ್ನಿಸು
ನಾನಿನ್ನ ಮೊರೆಯ ಹೊಕ್ಕೆನೊ ಮರೆಯದೆ ಸಲಹೊ

## ವಚನ

ಈ ಪರಿಯ ಶೋಕದಲಿ ಮರುಗುತಲಿ ನಾಯಕನು
ಆ ಪತಿವ್ರತೆಯ ಕರದ್ಹೇಳಿದನು ಹೀಗೆನುತ

ಬ್ರಹ್ಮ ಪ್ರತಿಷ್ಠೆಗೆ ಮಾಡು ಸಹಾಯವ
ಬ್ರಹ್ಮನ ಪಿತ ಒಲಿವನು ನಿಮಗೆ
ಸಮ್ಮತವಾದರೆ ಮಾಡು ಈ ಕಾರ್ಯವ
ರಮ್ಯವಾಗಿ ತೋರುವುದೆಂದ ೨

ಕೇಳು ನಿನ್ನ ಪತಿ ಮಾತಾಪಿತೃಗಳು
ಸಾಯಲು ಲೋಭವು ಸಾಯದಲೆ
ಹಾನಿಗೈಸುತಿರುವುದು ಅವನಾಯುವು
ಕಾಯ್ವ ಕಮಲನಾಭ ವಿಠ್ಠಲನು ೩

## ಕಂದ

ಈ ಪರಿ ನುಡಿಯಲು ಬಾಲೆಯು
ತಾಪವ ಪಡುತಲಿ ನುಡಿದಳು ದ್ವಿಜಗೆ
ಯಾಕೀಪರಿ ಪತಿ ನಿಂದೆಯ
ನಾ ಕೇಳಲಾರೆ ದಾನವ ನಾನರಿಯೆ

## ಭಾಮಿನಿ ಷಟ್ಪದಿ

ಎನುತ ನುಡಿಯಲು ವಿನತಸುತವಾಹನ
ವನಿತೆಗೆಂದನು ಸಂತವಿಡುತಲಿ
ಮನಕೆ ಬಂದದ್ದು ಕೊಡುತ ದಾನವ ಧನ್ಯಳಾಗೆನುತ
ಎನಗೆ ಏನಿಹುದೈ ಸ್ವತಂತ್ರವು
ಇನಿಯನೆ ಎಲ್ಲಕ್ಕು ಸ್ವಾಮಿಯು
ತನುವು ಮನ ಧನವೆಲ್ಲ ಪತಿಯ ಅಧೀನವೆಂದೆನಲು

## ಕಂದ

ಹೀಗೆನ್ನುವೆಯಾ ಸಾಧ್ವಿಯೆ
ಹೋಗುವವ ನಾನಲ್ಲ ಬರಿದೆ ಕೊಡು ದಾನವನು
ಭಾಗವತ ಪ್ರಿಯವಲಿವನು
ಬೇಗದಿಂದೆನ್ನ ಮಾತನು ಕೇಳೌ ತರುಣಿ

ಅಸ್ಥಿರಂ ಜೀವನಂ ಲೋಕೇ
ಅಸ್ಥಿರಂ ಯೌವನಂ ಧನಂ ।
ಅಸ್ಥಿರಂ ದಾರ ಪುತ್ರಾದಿ
ಧರ್ಮಂ ಕೀರ್ತಿ ದ್ವಯಂ ಸ್ಥಿರಂ

## ವಚನ

ಈ ರೀತಿ ಧರ್ಮ ಸೂಕ್ಷ್ಮವನರಿತು ನೀನೀಗ
ಮಾಡುದಾನ ಧರ್ಮ ಮಾಧವನು ಮೆಚ್ಚುವನು
ಏನು ಗತಿಯಿಲ್ಲೆಂದು ದೀನಳಾಗಲಿಬೇಡ
ಏನು ಕೊಟ್ಟರು ಸರಿಯೆ ಹಾನಿಯಾಗದು ಪುಣ್ಯ
ನೋಡು ನಿನ ಮೂಗುತಿಯ ನೀಡು ತಡಮಾಡದಲೆ
ನಾಡೊಳಗೆ ನಿನ್ನ ಪುಣ್ಯ ಪಾಡಿ ಪೊಗಳುವೆನೆನಲು
ಮಾಡಿ ಮನವನು ಮಾತನಾಡಿದಳು ಅಂಬುಜಾಕ್ಷಿ

## ಭಾಮಿನಿ ಷಟ್ಪದಿ

ಕಡಲಶಯನನ ಗುಣವ ಪಾಡುತ
ಬಡವ ವಿಪ್ರನು ಬರಲು ಅವರಿಗೆ
ಹಿಡಿಯ ತಂಡುಲ ಕೊಡಲು ಅಸ್ವತಂತ್ರಳಾಗಿರುವೆ
ವಡವೆ ವಸ್ತುಗಳನ್ನೆ ಯಾಚಿಸಿ
ಕೊಡಲು ಎನಗದು ಸಾಧ್ಯವಲ್ಲವು
ಕೊಡದಿರಲು ಈ ವಿಪ್ರನಾಗ್ರಹ ಬಿಡದೆವದಗುವದು

## ಆರ್ಯ

ಆದದ್ದಾಗಲಿ ಅನುಭವ ಮಾಳ್ವೆನು
ಶ್ರೀಧರನಿಗೆ ಪ್ರೀತಿಯಾಗಲೆಂದೆನುತ
ಸಾಧುಗಳರಸನಿಗಿತ್ತಳು ಮೂಗುತಿ
ಯಾದವ ಪತಿಗರ್ಪಿತವೆನುತ

ಕೊಟ್ಟಳು ಮೂಗುತಿ ಸೃಷ್ಟಿ ಕರ್ತನಿಗೆ
ದಿಟ್ಟತನದಿ ಬಂದ ಶ್ರೇಷ್ಠ ಶ್ರೀಹರಿಗೆ ಪ

ಮೂಗುತಿ ವಿಕ್ರಯ ಮಾಡಿ
ಬೇಗ ನೀ ಬಂದಿರಲು
ಆಗಲಾದರು ಎನಗೆ
ಅರಿವು ಬೇಡವೆ ರಂಗ ೪

ವಿಠ್ಠಲ ನಿನ್ನುಡುಕಲು
ಭಟರ ಕಳುಹಿದೆನೊ ದೇವ
ವಿಠ್ಠಲನ ಗುಡಿಮುಂದೆ
ಮಟಮಾಯವಾದ್ಯಂತೆ ೫

ಅಂಗಡಿಯಲ್ಲಿಟ್ಟು
ಮಂಗನಂದದಿ ಪೋಗಿ
ಅಂಗನೆಯನು ಕೇಳಿ
ಭಂಗ ಪಟ್ಟೆನೊ ರಂಗ ೬

ಸುಳ್ಳು ಪೇಳಲು ನಿನ್ನ
ಕೊಲ್ಲುವೆನೆಂದು ಎನ್ನ
ವಲ್ಲಭೆಯನು ಕೇಳೆ
ತಲ್ಲಣಿಸಿದಳೊ ರಂಗ ೭

ವಡವೆಯ ತೋರದಿರಲು
ಬಿಡದೆ ಶಿಕ್ಷಿಪೆನೆಂದು
ಕುಡಿಯೆ ಪೋಗಲು ವಿಷ
ಒಡನೆ ಮೂಗುತಿಯನಿತ್ತ್ಯೋ ೮

ಬಡವ ಬ್ರಾಹ್ಮಣ ಇಷ್ಟು
ನಡಸೆ ಯೋಗ್ಯತೆಯುಂಟೆ
ಬಡವರಾಧಾರಿಯೆಂದು
ಅಡಿಗೆರಗದ್ದೋದೆ ರಂಗ ೯

ಚಂದದಿ ಕೊಡುತಲಿ ವಂದಿಸಿ ನುಡಿದಳು
ಇಂದಿರೇಶನೆ ಸಲಹೆಂದು ಪ್ರಾರ್ಥಿಸುತ ೧

ಹರುಷದಿಂದಲಿ ಅವಳ ಹರಸಿ ಮೂಗುತಿಕೊಂಡು
ತ್ವರಿತದಿ ಬಂದ ವ್ಯಾಪಾರಿಯ ಬಳಿಗೆ ೨

ತೋರಿ ಆಭರಣ ನಾನೂರು ಶುಭ್ರಕೊಡೆಂದು
ವಾರಿಜಾಕ್ಷನು ಪೇಳೆ ಮೋರೆ ನೋಡಿದನು ೩

ಯಾರಿವ ಮಹಾಚೋರ ನೋಡಲು ಭಯಂಕರ
ನೀಡುವುದೆಂತು ರೊಕ್ಕ ತೋರದು ಎನಗೆ ದಿಕ್ಕು ೪

ಕಳವಳ ಪಡುತ ಆಭರಣ ಕೈಯಲಿ ಕೊಂಡು
ದುರು ದುರು ನೋಡೆ ಕಮಲನಾಭ ವಿಠ್ಠಲನ ೫

## ಕಂದ

ಏನಿದು ಸಂಶಯ ತಿಳಿಯದು
ಆಭರಣವು ನಮ್ಮದಾಗಿಹುದೆ
ತೋರದು ನಿಶ್ಚಯ ಮನಸಿಗೆ
ಯಾರನು ಕೇಳಲೆಂದೆನುತ ಬಳಲಿದನು

ಶ್ರೀಶಾ ಈ ಪರಿಗೈದನು ಮೋಸ ಪ

ಸಾಸಿರ ನಾಮನು ಭೂಸುರನಾಗುತ
ಶ್ರೀಮಂತನ ಮನೆ ಬಾಗಿಲ ಕಾಯ್ದನು ಅ.ಪ

ಮೂಗುತಿ ನೋಡಿದನು ಮನದಿ
ನಾನಾ ಬಗೆ ಸ್ಮರಿಸಿದನು
ಆದರೆ ಇದು ನಮ್ಮನೆಯೊಳಗಿರದಿರೆ
ನೀಡದೆ ರೊಕ್ಕವ ಶಿಕ್ಷಿಪೆನೆಂದನು ೧

ಎನಗೆ ಸ್ವತಂತ್ರವ್ಯಾವದು ಇಲ್ಲೆನಲು
ನಗುತ ಭೂಸುರ ನುಡಿದ ಮೂಗುತಿಯ ನೀಡೆಂದು
ತನಯನಿಗೆ ಉಪನಯನ ಬಡವನಾನೆಂದೆನಲು
ಪಡುತ ಭಯ ಮನದಲ್ಲಿಬಡವಬ್ರಾಹ್ಮಣನೆಂದು
ತಡೆಯದಲೆ ನೀಡಿದೆನು ತೃಪ್ತನಾಗಲಿ ಹರಿಯು ಎಂದು

## ಆರ್‍ಯ

ಕೇಳುತಲಾನುಡಿ ನಾಯಕ ಹರುಷದಿ
ರೋಮಗಳುಬ್ಬಿ ನಯನದಿ ಜಲವು
ಧಾರೆಧಾರೆಯಾಗುದುರುತಲಿರೆ ಗದ್ಗದ
ಸ್ವರದಿಂ ಭಜಿಸಿದ ಹರಿಯಾ

ಪ್ರಕಟನಾಗೆಲೊ ದೇವನೆ
ಹಟವ ಮಾಡದಲೆ ಪ

ವಟಪತ್ರಶಾಯಿ ನೀ
ವಟುವಿನಂದದಿ ಬಂದು
ಕುಟಿಲ ದೈತ್ಯರ ಗೆಲಿದು
ಹಟವ ಸಾಧಿಸಿದಂತೆ ೧

ಅಜ ಭವಾದಿಗಳಿಂದ
ತ್ರಿಜಗ ಪಾಲಕರಿಂದ
ಭಜಿಸಿಕೊಳ್ಳುವೆ ನಿತ್ಯ
ಮುಕ್ತಳ ಪತಿ ಶ್ರೀಶಾ ೨

ಸಾಸಿರ ನಾಮನೆ
ಭೂಸುರನಾಗಿ ಬಂದ್ಯ
ಕಾಸು ಕೊಡದಲೆ ನಿನ್ನ
ಘಾಸಿ ಮಾಡಿದೆ ಕೃಷ್ಣ ೩

ವಡವೆಯ ಬಚ್ಚಿಡುತಾ ನೋಡಲು
ಬಡವನ ಕಾಣದಿರೆ
ಮಿಡುಕುತ ಮನದಲಿ ಹುಡುಕಿಸಿ ನೋಡಲು
ನುಡಿದನು ಸೇವಕನೊಬ್ಬನು ವಿನಯದಿ ೨

ಪೋದೆವು ಅವನ್ಹಿಂದೆ ಪೋದನು
ವಿಠ್ಠಲನ ಗುಡಿಮುಂದೆ
ಕಾಣದೆ ಕಣ್ಮರೆಯಾದನೆಂತೆಂದನು
ಕಮಲನಾಭ ವಿಠ್ಠಲ ಕರುಣದಿ ಒಲಿಯುತ
ಸಾಸಿರ ನಾಮನ ಸ್ಮರಣೆಯ ಮರೆತಿರೆ
ಶ್ರೀಪತಿ ದಯತೋರಿದ ನಾಯಕನಿಗೆ ೩

## ಆರ‍್ಯ

ಸರಸರ ಬೀಗಗಳ್ಹಾಕುತ ನಾಯಕ
ಸರಸ್ವತಿ ಇರುವಲ್ಲಿಗೆ ಬಂದು
ಬರಿಯ ನಾಸಿಕವು ಕಾಣುತ ಕೋಪದಿ
ಸರಸಿಜಾಕ್ಷಿಗೆಂದನು ಹೀಗೆ

ಎಲ್ಲೆ ಮೂಗುತಿ ಇಲ್ಲೆ ತೋರು ಬೇಗ ಪ

ಸುಳ್ಳು ಪೇಳೆ ನಿನ್ನ ಕೊಲ್ಲದಿಹೆನೆ ನಾರಿ ಅ.ಪ

ಹಿರಿಯರಿಂದ ಬಂದ
ಸರಕು ಕಳೆವರೇನೆ
ತರಿವೆ ನಿನ್ನ ಸಿರವ
ತ್ವರದಿ ತೋರದಿರಲು ೧

ಮಾತನಾಡದಿರುವಿ
ಭೀತಿ ಪಡುವ ತೆರದಿ
ಭೂತವೇನೆ ನೀನು
ಯಾತಕಿಂತು ಕುಳಿತಿ ೨

ಆಕೆ ಯೋಚಿಸದೆನ್ನ ಕೇಳದೆ ಶ್ರೀಪತಿಗೆ
ಮೂಗುತಿಯನಿತ್ತು ವಂದಿಸಿದಳೇಕೆ
ಮರಳಿ ಆ ಬ್ರಾಹ್ಮಣನು ತರುತ ಮೂಗುತಿಯನ್ನು
ಇರಿಸಿ ಎನ್ನೊಳು ಬರಿದೆ ಪೋದನೇಕೆ
ಅರಸಿ ಸೇವಕರೆಲ್ಲ ಹುಡುಕಿ ಬೆನ್ಹತ್ತಲು
ಕಾಣದಲೆ ಕಣ್ಮರೆಯಾದನೇಕೆ
ಭದ್ರಪಡಿಸುತ ಬಂದು ತೋರು ಮೂಗುತಿ ಎನಲು
ವಜ್ರದ ಬಟ್ಲಿನಲಿ ಇದ್ದುದೇಕೆ
ಅರಸಿಗಿಹ ಜ್ಞಾನ ನನಗಿಲ್ಲವೇಕೆ
ಅವಳ ಪಾಲಿಸಿ ಎನ್ನ ಬಿಟ್ಟೆಯಾಕೆ
ಸರಸಿಜೋದ್ಭವನಯ್ಯ ಸಲಹು ಎನ್ನ
ಪರಿ ಪರಿಯ ಕ್ಲೇಶ ಪಡುತಿಹೆನೊ ದೇವ

### ಆರ‍್ಯ

ಪೇಳೆಲೆ ತರುಣಿಯೆ ಶ್ರೀ ರಮಣನು ನಿನ್ನ
ಏನೀವುದು ಎಂದ್ಯಾಚಿಸಿದ
ಆ ವೃದ್ಧನ ಪೂಜಿಸಿದ ವಿಧಾನವು
ಸಾವಧಾನದಿಂ ಪೇಳೆನೆಗೆ

### ಭಾಮಿನಿ ಷಟ್ಪದಿ

ಪತಿಯ ದು:ಖವ ನೋಡಿ ಮಾನಿನಿ
ಅತಿಶಯದ ವಾರ್ತೆಗಳು ಪೇಳಲು
ಪತಿಯ ಪಾದಕೆ ವಂದಿಸಿದಳಾಸತಿಯು ವಿನಯದಲಿ
ವಿತತ ಮಹಿಮನು ವಿಶ್ವರೂಪನು
ಸತತ ಭಕ್ತರ ಪೊರೆವ ದೇವನು
ಪ್ರತಿ ನಿಮಿಷ ಬಿಡದಲೆ ಸಂರಕ್ಷಿಸುತಿಹನು ಲೋಕಗಳ

### ವಚನ

ಪತಿಯ ಪಾದಕ್ಕೆರಗಿ ನುಡಿದಳಾ ಸಾಧ್ವಿಯು
ಬಡವ ಬ್ರಾಹ್ಮಣ ಬಂದು ಕೇಳಲಾದಾನವನು

ಕಷ್ಟಪಡುವಿ ಬಹಳ
ಶ್ರೇಷ್ಠಾಭರಣ ಕೊಡದೆ
ದಿಟ್ಟೆ ನಿನ್ನ ಧೈರ್ಯ
ಎಷ್ಟು ಪೇಳಲಿನ್ನೂ ೩

ಭಯವು ನಿನ್ನ ಹೃದಯ
ದೊಳಗೆ ಇಲ್ಲವೇನೆ
ನಯದಿ ಕೇಳ್ವೆ ನಿನ್ನ
ಕಮಲಮುಖಿಯೆ ಪೇಳು ೪

ಕನಕ ರತ್ನಾಭರಣ
ವನಿತೆ ನಿನ್ನಾಧೀನ–
ವೆನಲು ನಗುತಲಿದ್ದ
ಕಮಲನಾಭ ವಿಠ್ಠಲ ೫

## ಆರ್ತ

ಎದೆ ಝಲ್ಲೆನ್ನುತ ಗಡಗಡ ನಡುಗುತ
ಮಧುಸೂಧನನ ಪ್ರಾರ್ಥಿಸುತ
ಒದಗಿದ ಕಷ್ಟವು ಪರಿಹರವಾಗಲಿ
ಎನುತ ನಯನಂಗಳು ಮುಚ್ಚಿ

ಪಾಲಿಸು ಪಾಲಿಸು ಪಾಲಿಸು ಶ್ರೀಶಾ
ಪಾಲಿಸು ಪಾಲಿಸು ಪರಮ ಕೃಪಾಳೊ ಪ

ನಿನ್ನ ನಂಬಿರುವೆ ಎನ್ನ ನೀ ಸಲಹೊ
ಚಿನ್ಮಯ ರೂಪ ಪ್ರಸನ್ನವದನನೆ ೧

ಘೋರ ದು:ಖಕೆ ದಾರಿ ಕಾಣೆನು ಶ್ರೀಶಾ
ಪಾರುಗಾಣಿಸೆ ನಿನ್ನ ನಂಬಿದೆ ಈಶಾ ೨

## ಆರ್ಯ

ಹರಿ ಎಂಬುದು ತಿಳಿಯದೆ ಪರಿಪರಿಯಲಿ
ವರವೃದ್ಧನ ದೂಷಿಸಿ ಬೈದೆ
ಮರಳಿ ಆ ಮೂರ್ತಿಯ ನೋಡದೆ ವೃಥಾ
ಧರಿಸಲ್ಯಾಕೆ ದೇಹವು ವ್ಯರ್ಥ ೧

ಕೆಟ್ಟೆನು ಕೆಟ್ಟೆನು ಕಡುಲೋಭದಿ ಮನ
ಮುಟ್ಟಿ ಪೂಜಿಸದೆ ಮುರಹರನ
ದೃಷ್ಟಿಗೆ ಗೋಚರನೆಂತಾಗುವನು ಶ್ರೀ-
ವಿಠ್ಠಲ ಈ ಪಾಪಿಷ್ಟನಿಗೆ ೨

ಹೋಯಿತು ಆಯುವು ಪರಧನಾರ್ಜನೆಯಲಿ
ಸೋರುವ ಕುಂಭದ ಜಲದಂತೆ
ಶ್ರೀ ರಮಣನೆ ಭವಸಾಗರ ತಪ್ಪಿಸಿ
ಕಾಯೊ ಕಮಲನಾಭ ವಿಠ್ಠಲನೆ ೩

## ಸೀಸಪದ್ಯ

ಇಂದಿರಾಪತಿ ಕೃಷ್ಣ ಬಂದನ್ಯಾತಕೆ ಇಲ್ಲಿ
ಮುಂಜಿ ಸುತನಿಗೆಂದು ಯಾಚಿಸಿದನೇಕೆ
ಚಂದದಿಂದಲಿ ನಾನು ವಂದಿಸುತ ಬ್ರಾಹ್ಮಣಗೆ ಮು-
ಕುಂದನೆಂತೆಂದು ಪೂಜಿಸದೆ ಯಾಕೆ
ನಿಂದಿಸಿದೆ ಬಹು ವಿಧದಿ ಕಂದರ್ಪಪಿತನೆಂಬ
ಸಂದೇಹವು ತೋರಲಿಲ್ಲವೇಕೆ
ತಿರುತಿರುಗಿ ಬೇಡಿದರೆ ಕೊಡದೆ ರೊಕ್ಕವು ಸವೆದ
ನಾಣ್ಯಗಳ ತಂದು ಸುರಿಸಿದೆನು ಏಕೆ
ಆತನಾದರು ಒಂದು ಕಾಸುಮುಟ್ಟದೆ ಪೊರಟು
ಆ ಸರಸ್ವತಿಯ ಯಾಚಿಸಿದನೇಕೆ

ಕನಕ ಗರ್ಭನ ಪಿತ ಕರುಣದಿ ಸಲಹೊ
ನಮಿಸಿ ಬೇಡುವೆ ಕಮಲನಾಭ ವಿಠ್ಠಲನೆ ೩

ಈ ಪರಿ ಬಿಸುಸುಯ್ಯುತಲಾ ತರುಣಿಯು
ತಾಪದಿ ಬಳಲುತಲಿ
ಗೋಪತಿ ಕೃಷ್ಣನೆ ರಕ್ಷಿಸೆಂದೆನುತಲಿ
ಶೋಕವ ಮಾಡುತಿರೆ

ಆರ್ಯ

ತಡವೇತಕೆ ಆ ವಡವೆಯ ಕೊಡುಕೊಡು
ಕೊಡದಿರೆ ಬಿಡುವವ ನಾನಲ್ಲ
ವಡಲುರಿ ಹೆಚ್ಚಿತು ಮಿಡುಕುವಿಯಾತಕೆ
ಕಡಿವೆ ನಿನ್ನ ನೀ ತಕ್ಷಣದಿ

ಮೂಗುತಿ ಮುರಿದಿದೆ ಹಾಗೆಯೆ ಇರಿಸಿಹೆ
ಬೇಗದಿ ತಂದೀವೆ
ಕೂಗುವಿರೇತಕೆ ಕರೆಕರೆ ಸಲ್ಲದು
ನಾಗಶಯನ ಒಲಿವಾ

ಆರ್ಯ

ಮಾತಿನಲ್ಲೆ ಬೆರಗಾಗುತಲಿದೆ ಮನ
ಆತುರ ಪಡುತಿಹ ಕಾರಣದಿ
ನೀ ತೋರದೆ ತಡೆದರೆ ಕ್ಷಣಮಾತ್ರದಿ
ಘಾತಿಸಿ ಕೊಲ್ಲುವೆ ಈ ಕ್ಷಣದಿ

ಕಮಲ ಮುಖಿಯು ಕಡುತಾಪವ ಪಡುತಲಿ
ಸ್ಮರಿಸುತ ನರಹರಿಯಾ
ಗರುಡಗಮನ ಪರಿಪಾಲಿಸು ಕಮಲ–
ನಾಭ ವಿಠ್ಠಲ ದೇವ

## ಆರ್ಯ

ಹೀಗೆನುತಲಿ ಕುಡಿಪೋಗಲು ವಿಷವನು
ಸಾಗರಶಯನನು ನೋಡುತಲಿ ಮುದದಿ
ನೀಡಿದ ಮೂಗುತಿ ಬೀಳಲು ವಿಷದಲಿ
ಸೋಜಿಗದಲಿ ಕಂಗಳ ತೆರೆದು ೧

ನೋಡಿದಳಾ ಮೂಗುತಿಯನೆ ನೋಡುತ
ಗಾಡನೆ ಕಂಗಳಿಗೊತ್ತುತಲಿ
ನೀಡಿದಳಾಗಲೆ ನಾಯಕರಿಗೆ ಪರ–
ಮಾದರದಿಂದಲೆ ಈಕ್ಷಿಸುತ ೨

ಏನಿದು ಸೋಜಿಗ ನೋಡಿ ಬರುವೆನೆಂದು
ಗಾಡನೆ ಬಂದಂಗಡಿ ಪೊಕ್ಕು
ನೋಡಲು ಮೂಗುತಿ ಕಾಣದೆ ಕಮಲ–
ನಾಭ ವಿಠ್ಠಲನೆ ಎಂದರಿತಾ ೩

ದೇವಿಯೆ ಕೇಳಿದು ಸೋಜಿಗ ತೋರ್ಪುದು
ನೀಗಿದೆ ದುಃಖವ ಪೇಳೀಗ ಮುದದಿ ಪ

ವಡವೆಗೋಸುಗ ನಿನ್ನ ಪಡಿಸಿದೆ ಬಾಧೆಯ
ಮೃಡಸಖ ಒಲಿದನೆ ಕಡುಭಾಗ್ಯವಂತೆಯೆ ೧

ಕಡು ಭದ್ರಮಾಡಿದ ವಡವೆಯ ತಿಳಿಯುತ
ಕಡಲ ಶಯನನು ಬಿಡದೆ ಕೊಡಿಸಿದ ನಿನಗೆ ೨

ಕರುಣಾಕರ ಕೃಷ್ಣ ವರವೃದ್ಧನಾಗುತ
ಭರದಿ ಯಾಚಿಸೆ ಕಮಲನಾಭ ವಿಠ್ಠಲನು ೩

## ವಚನ

ದೇವದೇವನೆ ಪಾಲಿಸೆನ್ನ ಪ್ರಾರ್ಥನೆಯನ್ನು
ನಾಯಕರ ಗುಣವನ್ನು ನೀನೆ ಬಲ್ಲೆಯೋ ದೇವ
ನಿನ್ನ ಭಕ್ತರ ಪ್ರಾರ್ಥನೆಯನು ನಿರಾಕರಿಸುವದು
ಸಲ್ಲದೋ ಸರ್ವೇಶ ಸಲಹೋ ನಿನ್ನವಳನ್ನು
ನಿನ್ನ ಮರೆ ಹೊಕ್ಕಿರುವೆ ಅನ್ಯರಾರಿಲ್ಲೆನಗೆ
ಬಿನ್ನಹವು ಕೇಳುವದು ಭಕ್ತವತ್ಸಲ ದೇವ
ನಿನ್ನ ಪ್ರೇರಣೆಯಂತೆ ಬಂದ ಬಡಬ್ರಾಹ್ಮಣನು
ನಿನ್ನ ಪ್ರೇರಿಸಿದಂತೆ ಕೇಳಲಾ ದಾನವನು
ನಿನ್ನ ಇಚ್ಛೆಗೆ ಬಂದು ನೀನು ಪ್ರೇರಿಸಿದಂತೆ
ನೀನೆ ಕೊಡಿಸಲು ದಾನ ಕೊಟ್ಟಿಹೆನೊ ಸರ್ವೇಶ
ನಿನ್ನ ಪ್ರೇರಣೆಯಿಲ್ಲದೇನು ನಡಿಯದೋ ಕೃಷ್ಣ
ಕೊಲ್ಲಲು ಸಿದ್ಧನಾಗಿರುವ ಪತಿ ಕಾರ್ಯಕ್ಕೆ
ನಿನ್ನ ಪ್ರೇರಣೆ ಇಲ್ಲದನ್ಯರಾಧೀನವೆ
ಸನ್ನುತಾಂಗನೆ ಕೃಷ್ಣ ಸಕಲ ವ್ಯಾಪಕ ನೀನೆ
ಮನ್ನಿಸಿ ಅಪರಾಧ ಇನ್ನು ಕಾಪಾಡೆನುತ
ಕಂಗಳನು ಮುಚ್ಚಿ ಕಡುಚಿಂತೆಯಿಂದಾ ಬಾಲೆ
ಇನ್ನು ತಡಮಾಡಿದರೆ ಕೊಲ್ಲದಿಹ ಪತಿಯೆಂದು
ಮೆಲ್ಲನಲ್ಲಿಂದೆದ್ದು ವಲ್ಲಭಗೆ ನಮಸ್ಕರಿಸಿ
ಪುಲ್ಲನಾಭನ ಸತಿಯ ಪೂಜಿಸಿ ಬಹೆನೆಂದು
ಕಂಗಳಿಂದುದುಕ ಸುರಿಸುತಲಿ ಸ್ಮರಿಸಿದಳಾಗ
ಕಮಲನಾಭ ವಿಠ್ಠಲನೆ ಸಲಹು ಸಲಹೆಂದೆನುತ ಸಾಧ್ವಿ

## ಆರ್ಯ

ಈ ಪರಿ ಸ್ತುತಿಸುತ ಪ್ರಾರ್ಥಿಸಿ ಹರಿಯನು
ಶ್ರೀ ತುಳಸಿ ಪೂಜೆಯ ಮಾಡಿ
ಪ್ರೀತಿಯಿಂದ ಪುಷ್ಪಾಕ್ಷತೆ ಪಿಡಿದು

ಬಹುಪರಿ ಬೇಡಿದಳಾ ಬಾಲೆ
ಪರಿಪಾಲಿಸು ತಾಯೆ ಶ್ರೀ ತುಳಸಿಯೆ
ಪರಮಾತ್ಮನ ಜಾಯೆ ಪ

ಸೆರಗೊಡ್ಡಿ ಬೇಡುವೆ ಸಲಹೆಮ್ಮ ದೇವಿಯೆ
ಸ್ಮರ ಕೋಟಿತೇಜನ ಅರಸಿ ಶ್ರೀ ತುಳಸಿಯೆ ಅ.ಪ

ಅಂಬುಧಿ ಶಯನನು ಮೆಚ್ಚಿಸಿ
ಕಾಂಬುದಿ ಚರಣವನು
ತುಂಬುರು ನಾರದರಿಂಬಾಗಿ ಪಾಡಲು
ಕಂಬು ಕಂಧರ ದೇವ ನಂಬಿದವರ ಪೊರೆವ ೧

ಶ್ರೇಷ್ಠಳೆ ಶ್ರೀ ತುಳಸಿ ನಂಬಿದೆ ಎನ್ನ
ಕಷ್ಟಗಳನು ಹರಿಸಿ
ಕೃಷ್ಣಮೂರುತಿ ನಿನ್ನ ಮೆಚ್ಚಿಸಿ ಬಂದನೆ ದೇವಿ
ಇಷ್ಟಾರ್ಥ ಕೊಡುವಳೆ ಕೃಷ್ಣವೇಣಿಯೆ ಎನ್ನ ೨

ಕೊಡು ಎನಗಭಯವನು ಶ್ರೀ ತುಳಸಿಯೆ
ಕುಡಿವೆ ಈ ವಿಷವನ್ನು
ಕಡಲೊಡೆಯನ ಪಾದ ಬಿಡದೆ ತೋರಮ್ಮ ದೇವಿ
ಕಮಲನಾಭ ವಿಠ್ಠಲನರಸಿ ಶ್ರೀ ತುಳಸಿಯೆ ೩

## ಕಂದ

ಶ್ರೀನಾಥನೆ ರಕ್ಷಿಸು ರಕ್ಷಿಸು
ಅನಾಥ ಬಂಧು ಎಂಬ ಬಿರುದು ಪೊತ್ತಿರುವೆ
ಏನಾಗಲಿ ಕುಡಿವೆನು ವಿಷವನು
ದಾನವಾರಿಯೆ ನಿನ್ನ ಧ್ಯಾನವನು ಕೊಡಿಸೈ

ಅಸುರೆ ಪೂತಣಿಯ ಅಸುವ ಹೀರಿ ಕೊಂದ
ವಸುದೇವನ ಕಂದ ಶಿಶುರೂಪಿನ ನಂದ ೨

ಕೊರಳ ಕೌಸ್ತುಭಹಾರ ಉರದಿ ಲಕ್ಷ್ಮಿ ಸಹಿತ
ಧರಿಸಿ ಮೆರೆವ ಕಮಲನಾಭವಿಠ್ಠಲ ಕಾಯೊ ೩

## ಮಾತು

ಹೀಗೆ ಆ ಪರಮಾತ್ಮನನ್ನು ಕೊಂಡಾಡಿ ಅತಿ ಸಂತೋಷದಿಂದ ಕೃಷ್ಣ ಬಾರೆಂದು ಎತ್ತಿ ಮುದ್ದಾಡುವಳು.

ಬಾ ಬಾ ಬಾ ಹರಿ
ಬಾ ಬಾ ಭಕುತರ ಭಯ ಪರಿಹರಿಸುತ ಪ

ಮುಂಗುರುಳನೆ ತಿದ್ದಿ ಮುಖ ಬೆವರೊರೆಸುತ
ಕಂದನೆ ನಿನಗ್ಹೊಸ ಅಂಗಿ ತೊಡಿಸುವೆನು ೧

ಅಂದಿಗೆ ಬಾಪುರಿ ಚಂದದಿಂದಿಡುವೆನು
ಕಂದನೆ ನೀ ಎನ್ನ ಮುಂದೆ ಕುಣಿಯುತಲಿ ೨

ಸರಸಿಜನಾಭನೆ ಸರಿಗೆಳೆಯರ ಕೂಡಿ
ಮುರಳಿ ಧರಿಸಿ ವರ ಕಮಲನಾಭ ವಿಠ್ಠಲ ಬೇಗ ೩

## ಕಂದ

ಹೀಗೆಂದು ಮುದ್ದಿಸೆ ಕುವರನ
ದೇವಕನ್ನಿಕೆಯರೆಲ್ಲರು ನೋಡುತ ಮುದದಿ
ಗಾನದಿ ಪಾಡುತ ಕುಣಿದರು
ದೇವನ ಸಿರದಲಿ ಪುಷ್ಪದ ವೃಷ್ಟಿಯನು ಸುರಿಸಿ

## ಮಂಗಳ

ಮಂಗಳವೆನ್ನಿ ಶ್ರೀ ಹರಿಗೆ ಜಯ
ಮಂಗಳವೆನ್ನಿ ಶ್ರೀ ದೊರೆಗೆ ಪ

ವಟಪತ್ರಶಾಯಿ ನೀ ಸ್ಫುಟವಾಗಿ ಸ್ತಂಭದಿ
ಕುಟಿಲ ದೈತ್ಯನ ತಂದೆ
ಹಟವ ಮಾಡಿದ ಮುದ್ದು ಬಾಲ ಪ್ರಹ್ಲಾದನಿಗೆ
ಪ್ರಕಟ ಮಾಡುತ ಪೊರೆದೆ
ಕುಟಿಲ ದಿತಿಜರನೆಲ್ಲ ತರಿದು ಸಜ್ಜನರಿಗೆ
ಹಿತವ ತೋರುತ ಮೆರೆದೆ
ಅಮಿತ ವಿಕ್ರಮ ಅಪ್ರಾಕೃತನೆ ನಿನ್ನ
ನಮಿಸಿ ಬೇಡುವ ಭಕ್ತವೃಂದಕೆ
ವಿವಿಧ ಭೋಗಗಳಿತ್ತು ಪಾಲಿಪಿ
ಭುವನ ಸುಂದರ ಭಕ್ತ ಹೃದಯಕೆ ೨

ಕಂತುಪಿತನೆ ಬಾರೋ ಕಮಲಸಂಭವನಯ್ಯ
ಕುಂತಿಸುತನ ಸಖನೆ
ಭ್ರಾಂತರಾದರೊ ನಿನ್ನ ಮಹಿಮೆಯ ತಿಳಿಯದಲೆ ಏ-
ಕಾಂತ ಭಕ್ತರು ಹರಿಯೆ
ಚಿಂತಿಸಿ ತಿಳಿಯರೊ ಶ್ರೀಕಾಂತ ನಿನ್ನಯ ಮಹಿಮೆ
ಎಂತು ಉದ್ಧರಿಸುವೆಯೊ
ಸಂತತವು ಬಿಡದಂತೆ ಸ್ಮರಿಸುವ
ಚಿಂತೆ ಪಾಲಿಸು ಶ್ರೀ ಮನೋಹರ
ಪಂಥಮಾಡಲಿ ಬೇಡ ಕಮಲ-
ನಾಭ ವಿಠ್ಠಲನೆ ನಮಿಸಿಬೇಡುವೆ ೩

## ಆರ್ತ

ಹರಿಕೃಷ್ಣನೆ ಮುರವೈರಿಯೆ ಪಾಲಿಸು
ಮುರಳೀಧರ ಮಧುಸೂಧನನೆ
ಸರಸವಾಡುವಿ ಹರುಷವು ಹೃದಯದಿ
ಮರಳಿ ಮಾಯವಾಗದ ತೆರದಿ

## ಆರ‍್ಯ

ನಾರದರಿಪರಿ ಹರಿಯನು ಸ್ತುತಿಸುತ ಅ-
ಪಾರ ಮಹಿಮೆಗಳ ಸ್ಮರಿಸುತಲಿ
ಭಾರಿ ಆನಂದಾಶ್ರುಗಳುದುರಲು
ಮೀರಿ ಪೊಗಳೆ ಪುಳಕಾಂಕಿತದಿ

## ವಚನ

ದೇವ ರುಷಿ ನಾರದರು ದೇವೇಶನನು ಸ್ಮರಿಸಿ
ಅಪಾರ ಮಹಿಮೆಗಳು ಮನಸಿಗೆ ಹರುಷ ಕೊಡುತಿರಲು
ಮಾರನಯ್ಯನು ಮುಂದೆ ಕುಣಿವಂತೆ ಕಾಣಿಸಲು
ಆನಂದ ಪರವಶದಿ ಆ ಮೂರ್ತಿಯನೆ ನೋಡಿ
ನಾರದರು ನಲಿನಲಿದು ಕುಣಿದಾಡಿ ಪಾಡಿದರು ಹರಿಯ

ಬಾರೋ ಸುಂದರ ಶಾಮ
ಬಾರೋ ಭಕ್ತರ ಪ್ರೇಮ
ಬಾರೋ ಬಾ ಬಾ ದೊರೆಯೆ ಪ

ಬಾರೋ ಬಾ ಭಕ್ತರುದ್ಧಾರ ಕರ್ತನೆ ನಿನ್ನ
ಬಾರಿ ಬಾರಿಗೆ ಸಿರಬಾಗಿ ನಮಿಸುವೆನು ಅ.ಪ

ಎಳೆಯ ತಳಿರು ಪೋಲುವ ದಿವ್ಯ ಚರಣ ಕ-
ಮಲಕೆ ನಾ ನಮಿಸುವೆನು
ಶಿಲೆಯಾದ ಅಹಲ್ಯೆಯ ಪರಿಪಾಲಿಸಿದ ದಿವ್ಯ
ಚರಣಕ್ಕೆ ನಮೋ ಎಂಬೆನು
ಕಲಿ ಸುಯೋಧನನ ಓಲಗದಿ ಕೆಡಹಿದ ಪಾದ-
ಸ್ಮರಣೆಯ ಮಾಡುವೆನು
ಚರಣದಲಿ ರುಳಿಗೆಜ್ಜೆ ಘಲುರೆನೆ
ಮೆರೆವ ಪೈಜನ ಪಾಡಗವುರುಳಿ
ಮೆರೆವ ಪೀತಾಂಬರದ ಅಂಚಿನ-
ಲೊಲಿವ ಗಿಣಿಗಳು ನಲಿದು ಪಾಡ್ವವು ೧

ಮಂಗಳ ಮದನ ಗೋಪಾಲ ಶ್ರೀ ಕೃಷ್ಣಗೆ
ಮಂಗಳ ಮಾಧವ ಮಧುಸೂದನಗೆ ಅ.ಪ

ಭಕ್ತರ ಮೊರೆಯನು ಕೇಳಿ ದೇವ
ಉತ್ತಮ ರೂಪವ ತಾಳಿ
ಎತ್ತಿ ಗೋವರ್ಧನ ರಕ್ಷಿಸಿ ಮೆರೆವಂಥ
ಲಕ್ಷ್ಮೀರಮಣ ಶ್ರೀಕೃಷ್ಣನ ಪಾಡುತ ೧

ಮುರಳಿಯ ಧ್ವನಿಗೈಯುತಲಿ ರಂಗ
ಮರುಳು ಮಾಡಿ ಸಖಿಯರನು
ಮುರಮರ್ದನ ಕಾಳಿ ಮಡುವನೆ ಧುಮಕುತ
ವರ ಪಾದದಿ ಕಾಳಿಯಸಿರದಿ ಕುಣಿದನೆಂದು ೨

ಕರುಣಿಗಳರಸನೆ ದೇವ ಸುರ
ಮುನಿಗಳಿಗ್ವರವಿತ್ತು ಕಾವ
ಸುರ ಸಂಪಿಗೆ ವನಮಾಲೆಯ ಧರಿಸಿದ
ಕಮಲನಾಭ ವಿಠ್ಠಲನ ಗುಣಪಾಡುತ ೩

## ೪. ಸಮುದ್ರ ಮಥನ

ಗೌರೀ ತನಯ ಪಾಲಿಸೊ
ಶೌರಿಯ ಪಾದ ಧ್ಯಾನ ಪ

ಸುಂದರ ಸುಗುಣ ಅರವಿಂದಲೋಚನ ಶ್ರೀ ಮು_
ಕುಂದನ ಚರಣ ದ್ವಂದ್ವಭಜನೆಯನು ೧

ನಿತ್ಯ ವಿನೋದನ ಚಿತ್ತದಿ ಭಜಿಸುವ
ಅತ್ಯುತ್ಸಾಹವ ಕೊಟ್ಟು ಭಕ್ತಿಮಾರ್ಗವ ತೋರೊ ೨

ಕನಕ ಕಶ್ಯಪನ ಕಂದ ಸಲಹಿದನಮ್ಮ
ಕಮಲನಾಭವಿಠ್ಠಲನೊಲುಮೆ ಎಮಗೆ ಕೊಟ್ಟು ೩

## ಆರ‍್ಯ

ಕರುಣದಿ ಗುರು ಹಿರಿಯರ ಅಡಿಗೊಂದಿಸಿ
ವರಮಹಲಕ್ಷ್ಮಿಗೆ ಎರಗುತಲಿ
ಪರಮ ಪುರುಷನನು ಸ್ಮರಿಸುತ ಮನದಲಿ
ಅರುಹುವೆ ನಾ ಮುಂದಿನ ಕಥೆಯ ೧

ಎಂದೆನುತಲಿ ಮುಕುಂದಗೆ ವಂದಿಸಿ
ಮಂದರ ಗಿರಿಯನು ಬೇಗದಲಿ
ಸಿಂಧುವಿನೊಳಗಿಟ್ಟು ಚಂದದಿ ಮಥಿಸಿದ
ಸುಂದರ ಚರಿತೆಯ ಪೇಳುವೆನು ೨

ಸುರರು ಸತ್ಯಲೋಕಾಧಿಪನಲಿ ಪೋಗಿ
ಮೊರೆಯನಿಟ್ಟು ಪ್ರಾರ್ಥಿಸುತಿರಲು
ಸುರಪತಿ ವಚನವ ಕೇಳುತ ಬ್ರಹ್ಮನು
ವರಪಿತನಿದ್ದಲ್ಲಿಗೆ ಬರಲು ೩

ಕ್ಷೀರ ವಾರಿಧಿಯೊಳು ಶ್ರೀ ರಮಾನಾಥನು
ವಾರುಣಿಪತಿ ಶಯ್ಯದೊಳಿರಲು
ಸಾರಿದರಾಕ್ಷಣ ದೇವತೆಗಳು ಕಂ_
ಸಾರಿಯ ಪೊಗಳುತ ಹರುಷದಲಿ ೪

ಕರುಣಾಕರ ಶ್ರೀ ಹರಿ ನೋಡುತ ಸು_
ಮ್ಮನೆ ಮೌನದೊಳಿರುತಿರಲಾಗ
ಕರಮುಗಿಯುತ ಈ ಪರಿ ಸ್ತುತಿಸಿದರು
ಕಮಲನಾಭವಿಠ್ಠಲ ಹರಿಯ ೫

ದೇವ ದೇವೋತ್ತಮ, ದೇವ ದೇವೇಶನೆ ದೇವತಾ ಸಾರ್ವಭೌಮ ಅಖಿಳಾಂಡಕೋಟಿ ಬ್ರಹ್ಮಾಂಡ ನಾಯಕ, ಆದಿಮಧ್ಯಾಂತ ರಹಿತ, ಅನಂತ ಮಹಿಮ,

ವೇದನಗೋದ್ಧಾರ ಹರಿನಾರಾಯಣನೆ
ಕೋಲ ಶ್ರೀ ನರಹರಿ ಹರಿನಾರಾಯಣನೆ ೧

ವಟು ಭಾರ್ಗವ ರಾಮ ಹರಿನಾರಾಯಣನೆ
ಕುಟಿಲಾಳಕಿ ಸೀತಾ ಹರಿನಾರಾಯಣನೆ ೨

ಗೋಕುಲದಲ್ಲಿ ಗೊಲ್ಲ ಹರಿನಾರಾಯಣನೆ
ಪಾತಕಿ ಕಂಸನ ಅರಿ ನಾರಾಯಣನೆ ೩

ತ್ರಿಪುರ ಸತಿಯರ ಗೆದ್ದ ಹರಿನಾರಾಯಣನೆ
ಚಪಲ ಚಿತ್ತರಿಗೊಲಿದ ಹರಿನಾರಾಯಣನೆ ೪

ಕುದುರೆಯನೇರಿದ ಸಿರಿನಾರಾಯಣನೆ
ಅದ್ಭುತ ಮಹಿಮ ಶ್ರೀ ಹರಿನಾರಾಯಣನೆ ೫

ಅಕಳಂಕ ಮಹಿಮ ಶ್ರೀ ಹರಿನಾರಾಯಣನೆ
ಕಪಟನಾಟಕ ಕೃಷ್ಣ ಹರಿನಾರಾಯಣನೆ ೬

ಭಕ್ತವತ್ಸಲ ಸ್ವಾಮಿ ಭಯನಿವಾರಣನೆ
ಭಕ್ತಿಗೆ ಒಲಿವ ಶ್ರೀ ಹರಿನಾರಾಯಣನೆ ೭

ಮುಕ್ತಿದಾಯಕ ಕೃಷ್ಣ ಹರಿನಾರಾಯಣನೆ
ಶಕ್ತ ನೀನಹುದಯ್ಯ ಹರಿನಾರಾಯಣನೆ ೮

ಕಮಲ ಸಂಭವನಯ್ಯ ಹರಿನಾರಾಯಣನೆ
ಕಮಲನಾಭ ವಿಠ್ಠಲ ಹರಿನಾರಾಯಣನೆ ೯

## ಕಂದ

ಈ ಪರಿ ಮಹತಿಯ ನುಡಿಸುತ
ಗೋಪತಿ ಕೃಷ್ಣನ ಪಾಡುತ ಮುದದಿ
ತಾಪಸಿ ಕುಣಿಕುಣಿದಾಡುತ
ಶ್ರೀ ಪರಮಾತ್ಮನೆ ರಕ್ಷಿಸು ರಕ್ಷಿಸೆಂದೆನುತ

ಅಂದ ಮಾತ ಕೇಳಿ ಮುದದಿ
ಮಂದಹಾಸದಿಂದ ನಗುತ
ಇಂದು ನಿಮ್ಮ ಕಾರ್ಯವು ಆಗದು
ಎಂದು ಪೇಳುತಿರೆ ೧

ಕೇಳಿ ಗಾಬರಿಯಿಂದ ಮನದಿ
ತಾಳಿ ಸಂಶಯದಿಂದ ತವಕಿಸಿ
ಹೇಳಿ ಏನು ಕಾರಣ ಅದನು
ಕೇಳುವೆನೆಂದೆನಲು ೨

ಆಗಲಿ ನೋಡೋಣವೆಂದು
ಆಗದ ಹೋಗದ ಮಾತನು ನಂಬಿ
ಈಗ ನಿಮ್ಮ ಶಪಥವು ಎಂತು
ಆಗುವುದೆಂದೆನಲು ೩

ಪುನ: ಹೋಗಿ ಕೇಳುವೆ ನಾನು
ಮನಕೆ ಧೈರ್ಯವ ಮಾಡಿಕೊಂಡು
ಘನಮಹಿಮನು ಏನನ್ನುವನೊ
ಬಂದರುಹುವೆನೆನುತ ೪

ದಡ ದಡ ಬಂದನು ದ್ವಾರಕನಾಥನು
ಮಡದೇರಿಂದ ಸೇವಿತನಾಗಿ
ಕಡಲಶಯನನು ಮಲಗಿರೆ ಕಂಡು
ಅಡಿಗಳಿಗೊಂದಿಸುತ ೫

ಪುನಹ ಬಂದಿರಿ ಯಾತಕೆ ಮುನಿಗಳೆ
ಮನದ ಚಿಂತೆಗಳೇನು ಪೇಳಿ
ಅನುಮಾನಗಳಿಲ್ಲದೆ ಪೇಳಿರಿ ನಿ-
ಮ್ಮನಸಿನ ಕಾರ್ಯಗಳು ೬

ತ್ವರಿತದಲಿ ಮಂದಿರಕೆ ಪೋಗುತ ಹರಿಯ
ಪೂಜಿಪೆ ನೆಂಬ ಹರುಷದಿ
ಇರಿಸಿ ಅರ್ಘ್ಯೋದಕವ ಶೀಘ್ರದಿ ಪರಮ
ಮಂಟಪ ರಚಿಪ ಸಮಯದಿ ೨

ಉತ್ತಮ ಮಂದಿರಮಧ್ಯ ಮಂಟಪವಿರಿಸಿ
ಸುತ್ತಾಸಾರಿಸಿ ರಂಗವಲ್ಲಿಗಳನ್ನಾಕಿ
ಮುತ್ತು ಕೆತ್ತಿದ ನವರತ್ನದ ಮಂಟಪವಿರಿಸುತ್ತ
ರತ್ನಗೋಮೇದಿಕ ವಿಚಿತ್ರಮಾಟದ ಕಂಬಗಳ ನಿಲಿಸುತ್ತ
ಅತ್ಯಂತ ಹರುಷದಿ ರಾಜಾವರ್ತಿ ಚಿನ್ನದ ಮಂಟಪ ಶೋಭಿಸುತ
ಮುತ್ತು ರತ್ನಗಳಿಂದ ಶೋಭಿಪ ರತ್ನ ಖಚಿತದ ಪೀಠವಿರಿಸುತ
ಸುತ್ತ ಚಿನ್ನದ ಪದಕಗಿಳಿಗಳು ಮುತ್ತಿನ ಜಲ್ಲರಿಗಳನೆ ಕಟ್ಟುತ
ಉತ್ತಮದ ಗದ್ದುಗೆಯು ಮಧ್ಯದೊಳಿಟ್ಟು ಕೈ
ಮುಗಿಯುತಿರುವ ಸಮಯದಿ ೩

ಜಂಬೀರ ಕಿತ್ತಲೆ ದಾಳಿಂಬ ದ್ರಾಕ್ಷದ ಕುಚ್ಚು
ಜಂಬು ಫಲವು ಬಾಳೆಯ ಗೊನೆಗಳಿಂದ
ಸೇಬು ಚಕ್ಕೋತ ಅಂಜೂರ ಸೀತಾಫಲ ತೆಂಗುಗಳ
ಕಬ್ಬಿನ ಗಣಿಕೆ ನಾನಾ ಜಾತಿಯ ಫಲಗಳ
ತುಂಬಿರುವ ಪನ್ನೀರು ಮಾದಳದ ದಿವ್ಯ ಫಲಗಳ
ಸಂಭ್ರಮದ ಕೇತಕಿ ಸಂಪಿಗೆಯು ಮಲ್ಲಿಗೆಯ ಮಾಲೆಗಳ
ಲಿಂಬೆ ಸುರಹೊನ್ನೆ ಪಾದರಿ ನಾಗಸಂಪಿಗೆ ಪುಷ್ಪಗಳ
ಹರಿ ಮಂದಿರಕೀಗ ಮಾವಿನ ತಳಿರು ತೋರಣ ಫಲಪುಷ್ಪಗಳ
ಹರುಷದಿಂದಲಂಕರಿಸಿ ದೇವನ ಚರಣ
ಸೇವೆಗೆ ಕರೆವ ಸಮಯದಿ ೪

ತರತರ ಸಾಲುದೀವಿಗೆಗಳನೆ ಇಟ್ಟು ಹೊಳೆವ
ನವರತ್ನದ ಪ್ರಣತಿಗಳನಿಟ್ಟು
ಸುರರೊಡೆಯನಿಗೆ ಸುವರ್ಣದ ಸಮಯಂಗಳಿರಿಸುತ್ತ
ಎರಡು ಪಾರ್ಶ್ವದಿ ಛತ್ರಿಚಾಮರಗಳೆಲ್ಲ ಶೋಭಿಸೆ ದಣಿಯ ಪೊಗಳುತ್ತ
ತರತರದ ದೀಪಂಗಳಿರಿಸಿ ಶ್ರೀ ಪುರುಷೋತ್ತಮನ ಧ್ಯಾನಿಸುತ

ಅಪ್ರಮೇಯ, ಸ್ವಪ್ರಕಾಶ, ಸರ್ವತಂತ್ರ, ಸರ್ವೇಶನೆ ಸರ್ವಜೀವರ ರಕ್ಷಕ ಸರ್ವ ವಂದಿತನೆ ಸರ್ವಾಧಾರಕ ಸರ್ವಸ್ವಾಮಿಯೆ ಸೃಷ್ಟಿಸ್ಥಿತ್ಯಾದಿಲಯ ಕಾರಣಕರ್ತನೆ ಸರ್ವಜೀವೋತ್ತಮನೆ ಈಶನೆ ಸಚ್ಚಿದಾನಂದ ವಿಗ್ರಹನೆ ಸತ್ಯ ಮೂರುತಿಯೇ, ಭಕ್ತ ವತ್ಸಲ, ಭಯ ನಿವಾರಣ, ನಿತ್ಯ ತೃಪ್ತ, ನಿಗಮ ವೇದ್ಯ, ಅಚ್ಚುತನೆ ಶ್ರೀ ಸುದರ್ಶನಧಾರಿ ಶ್ರೀಶ ಕೇಶವನೆ ನಾಶ ರಹಿತ ನರಕಸಂಹಾರ ನಾರಾಯಣನೆ ಮಧು ಕೈಟಭ ಭಂಜನ, ಶ್ರೀ ಮಾಧವ ಮೂರ್ತಿಯೆ ಗೋವರ್ಧನೋದ್ಧಾರಿ ಗೋಪಿಕಾಲೋಲ, ಶ್ರೀ ಗೋವಿಂದ ಪಾಹಿ ವತ್ಸಾಸುರಮರ್ದನ ವಿಷ್ಣುಮೂರ್ತಿಯೇ, ಮಾವಕಂಸನ ಕೊಂದ ಮಧುರಾನಾಥ ಶ್ರೀ ಮಧುಸೂದನನೆ ಶಕ್ರನನುಜನೆನಿಸಿ ಉರುಕ್ರಮದಿ ಮೆರೆದ ತ್ರಿವಿಕ್ರಮನೆ ಶರಣು. ಸುಲಭದಲಿ ಭೂಮಿಯನು ಅಳೆದು ಈರಡಿ ಮಾಡಿ ಬಲಿಯಬಾಗಿಲ ಕಾಯ್ದ ಚಲುವ ವಾಮನನೆ ಸುರರೆಲ್ಲ ಸ್ತುತಿಸುತಿರೆ ಕರುಣದಲಿ ಕಾಯ್ದ ಶ್ರೀ ಶ್ರೀಧರನೆ, ಪಾಹಿ ಹೃದಯ ಭಾವವರಿತು ಮುದದಿಂದ ಪೊರೆ ಶ್ರೀ ಹೃಷೀಕೇಶನೆ ಪದ್ಮಸಂಭವನಯ್ಯ, ಪದ್ಮಜಾತೆಯ ಪ್ರಿಯ ಪದ್ಮಕರದಲಿ ಪಿಡಿದ ಪದ್ಮನಾಭ ಧಾಮತ್ರಯವಾಸಿ ದಾಮೋದರನೆ, ನಿನ್ನ ನಾ ನಮಿಪೆ ಶರಣು ಶಂಖಚೂಡನ ಕೊಂದು ಬಿಂಕದಿಂ ಮೆರೆದ ಶ್ರೀ ಸಂಕರ್ಷಣನೆ ಶ್ರೀಶ ನಮ್ಮನು ಸಲಹೊ ಸಾಸಿರನಾಮ ಶ್ರೀ ವಾಸುದೇವನೆ ಪಾಹಿ ಪ್ರದ್ಯುಮ್ನ ಅನಿರುದ್ಧ ಪುರುಷೋತ್ತಮ ಅಧೋಕ್ಷಜ ನಾರಸಿಂಹನೆ ನಮಿಪೆ ಅಚ್ಚುತ ಜನಾರ್ದನ ಉಪೇಂದ್ರ ಶ್ರೀ ಹರೆ ಶ್ರೀ ಕೃಷ್ಣ ಶೌರೆ ಪಾಹಿಮಾಂ ಪದ್ಮ ಪತ್ರದಳಾಯತೇಕ್ಷಣ ಕರುಣಿಸೈ ಕಮಲನಾಭವಿಠ್ಠಲ ಕರುಣಿ ಸೈ ಕಮಲನಾಭ ವಿಠ್ಠಲ.

## ಆರ್ಯ

ಈ ಪರಿಯಲಿ ಸುರರೆಲ್ಲರು ಸ್ತುತಿಸಲು
ಆ ಪರಮಾತ್ಮನು ನಸುನಗುತ
ಶ್ರೀಪತಿ ನುಡಿದನು ತನ್ನಯ ಭಕುತರಿ_
ಗೀಪರಿ ಸಂತೋಷದ ನುಡಿಯ ೧

ಏನಿದು ನೀವೆಲ್ಲರು ಈ ಪರಿಯಲಿ
ದೀನರಾಗಿ ಬಳಲುತಲಿ ಹಿರಿ

## ಭಾಮಿನಿ ಷಟ್ಪದಿ

ಈ ಪರಿಯ ವೈಭವದಿ ಮೆರೆಯುತ
ಶ್ರೀ ಪತಿಯು ಸಭೆಯಲ್ಲಿ ಕುಳಿತಿರೆ
ಲೋಕಪಾಲಕರೆಲ್ಲ ಸಂಭ್ರಮದಿಂದ ಪ್ರಾರ್ಥಿಸುತಾ
ಶ್ರೀ ಕಳತ್ರನು ಮೆಚ್ಚುವಂದದಿ ವಿ-
ನೋದದಿಂದಪ್ಸರರು ಗಾನದಿ
ಪಾಡುತಲೆ ನೃತ್ಯವನು ಮಾಡುತಲಿರುವ ಸಮಯದಲಿ

## ಆರ್ಯ

ನೋಡುತ ಶ್ರೀಹರಿ ನಟಿಸಿ ಆಶ್ಚರ್ಯವ ವಿ-
ನೋದದಿಂದ ಮಾತಾಡಿದರು
ಗಾನ ನೃತ್ಯದಿ ವೀರರು ಯಾರೆಂ-
ದೆನುತಲಿ ಪ್ರಶ್ನೆಯ ಮಾಡುತಿರೆ

## ಕಂದ

ಹರಿ ನುಡಿ ಕೇಳುತ ತ್ವರದಲಿ
ಸಭೆಯೊಳಗಿದ್ದವರೆಲ್ಲರು ತ್ವರದಿ
ಬಿರಿ ಬಿರಿ ಕಣ್ಬಿಡುವಂದದಿ
ದುರುದುರು ನೋಡುತಲಿದ್ದರು ಮುಖವ

## ಆರ್ಯ

ಮೌನದೊಳಿರೆ ಸಭೆ ನೋಡುತ ತ್ವರದಲಿ
ಯಾರಿದರೊಳು ಶ್ರೇಷ್ಠನೆಂದೆನುತ
ಮಾರಪಿತನು ನುಡಿಯುವ ಸಮಯದಲಿ
ನಾರದರೈತರೆ ಸಭೆಗಾಗ

ಹರಿನಾರಾಯಣ ಕೃಷ್ಣ ಹರಿನಾರಾಯಣ ಕೃಷ್ಣ
ಹರಿನಾರಾಯಣ ಕೃಷ್ಣ ಹರಿನಾರಾಯಣನೆ ಪ

ದಾನವರುಪಟಳದಿಂದಲಿ ಬಹುವಿಧ
ನೋವನಾಂತ ಪರಿಯಂತಿಹುದು ೨

ಕರುಣಾಕರ ಶ್ರೀಹರಿ ನುಡಿ ಕೇಳುತ
ಸುರರೆಲ್ಲರು ಸಂತೋಷದಲಿ
ವರದಾಯಕ ಶ್ರೀ ಕಮಲನಾಭ ವಿ_
ಠ್ಠಲನ ಚರಣಕೊಂದಿಸಿ ಬೇಗ ೩

ಲಾಲಿಸು ಶ್ರೀಶನೆ ಈ ನುಡಿಗಳನು
ಲಾಲಿಸು ಭಕುತರ ಪಾಲಿಸು ತವಕದಿ ಪ

ನೊಂದೆವೊ ಬಹುವಿಧ ಕುಂದುಗಳಿಂದಲಿ
ಬಂಧವ ಹರಿಸೊ ಮುಕುಂದನೆ ಕರುಣದಿ ೧

ದಾನವರಿಗೆ ಶುಭಕಾಲವು ಮಾಧವ
ದೀನರ ಮೊರೆಯನು ಸಾನುರಾಗದಿ ಕೇಳು ೨

ಸುರಮುನಿ ವಂದಿತ ಚರಣನೆ ನಮಿಪೆವು
ಉರಗಶಯನ ಸಿರಿವರ ಶ್ರೀನಿವಾಸನೆ ೩

ಕಂತುಪಿತನೆ ಕೃಷ್ಣ ಚಿಂತೆಬಿಡಿಸಿ ಕಾಯೊ
ಪಂಥ ಬೇಡವೊ ಹರಿ ನಿಂತು ಪ್ರಾರ್ಥಿಸುವೆವೊ ೪

ಕಮಲ ಸಂಭವನಯ್ಯ ಕಮಲ ಜಾತೆಯ ಪ್ರಿಯ
ಕಮಲದಳಾಕ್ಷನೆ ಕಮಲನಾಭ ವಿಠ್ಠಲ ೫

## ಆರ್ಯ

ಈ ಪರಿ ಸ್ತೋತ್ರವ ಕೇಳುತ ಶ್ರೀ ಹರಿ
ಮಾತಾಡದೆ ಮೌನದೊಳಿರಲು

ಅರುಹಿಸಲಿ ಗುರುಗಳೆಂದೆನುತ ಸ್ತೋತ್ರವಮಾಡಿ
ಸರ್ವರಿಗೆ ವಂದಿಸುತ ಸಿರಬಾಗಿ ಬೇಡುವೆನು
ವರ ಕಮಲನಾಭ ವಿಠ್ಠಲ ಕರುಣದಿಂ ನುಡಿಸೆ
ಅರುಹುವಂದದಿ ಆಜ್ಞೆ ಮಾಡಿದುದ ವರ್ಣಿಸುವೆನು

## ಆರ‍್ಯ

ದ್ವಾರಕಾಪುರ ಶೃಂಗಾರವ ವರ್ಣಿಸೆ
ಮಾರಾರಿಗೆ ಮಿಗಿಲೆಂದೆನುತಾ ದ್ವಿ–
ಸಾವಿರ ಜಿಹ್ವೆಗಳಿಂದಲಿ ಪೊಗಳಲು
ಆದಿಶೇಷನಿಗು ಮಿಗಿಲೆನುತ ೧

ದ್ವಾರದ್ವಾರದಿ ಕಲಶ ಕನ್ನಡಿಗಳು
ಬೀದಿ ಬೀದಿ ಶೃಂಗಾರಗಳು
ಭೂ ದೇವತೆ ಪರಮಾದರದಿಂದಲಿ
ಆದಿ ಪುರುಷನನು ಸೇವಿಸುತ ೨

ಸುರರೆಲ್ಲರು ಸಂತೋಷವ ಪಡುತಿರೆ
ಸರ್ವಜೀವರಾಶಿಗಳೆಲ್ಲ
ಪರಮಾತ್ಮನ ಪಾದ ಸ್ಮರಣೆಯ ಮಾಡುತ
ಹರುಷದಿಂದ ತಲೆ ಬಾಗಿರಲು ೩

ಈ ಪರಿ ವೈಭವದೊಳಗಿಹ ದೇವನು
ಶ್ರೀ ಭೂದೇವಿಯರ‍್ಹರುಷದಲಿ
ವಾಸುದೇವನೊಡಗೂಡುತ ಕುಳಿತಿರೆ
ನೋಟಕೆ ಪರಮಾನಂದದಲಿ ೪

ಯಾದವರೆಲ್ಲರು ಮೌನದಿ ಕುಳಿತಿರೆ
ಸಾಧುಗಳೆಲ್ಲರು ಶ್ರೀಧರನಾ
ಮಾಧವ ಕಮಲನಾಭ ವಿಠ್ಠಲ ಸಲ–
ಹೆನ್ನುತ ಪ್ರಾರ್ಥನೆ ಮಾಡುತಿರೆ ೫

## ವಚನ

ಬಂದ ವಿಘ್ನಗಳನೆಲ್ಲ ಹಿಂದೆ ನೂಕುತ ಭರದಿ
ಇಂದಿರೇಶನ ಪಾದದ್ವಂದ್ವ ಭಜನೆಯ ಮಾಡಿ
ಮುಂದೆ ಮುಕುತಿಯ ಪಥಕೆ ಚಂದದಿ ವರವಿತ್ತು
ಚಂದದಿಂ ಪಾಲಿಸು ಎಂದು ವರಬೇಡುವೆನು
ಸುಂದರಾಂಗಿ ಉಮೆಯ ಚಂದದಿಂ ಕೊಂಡಾಡಿ
ಚಂದ್ರಶೇಖರಗೆರಗಿ ವಂದಿಸಿ ಸ್ತುತಿಮಾಡಿ
ಮಂದಗಮನೆ ಭಾರತಾದೇವಿಗಭಿನಮಿಸಿ
ಚಂದುಳ್ಳ ಕರದಲ್ಲಿ ವೀಣೆ ಪುಸ್ತಕ ಧರಿಸಿ
ಮಂದಹಾಸದಿ ಹರಿಯ ಗುಣವ ಕೊಂಡಾಡುತಿಹ
ಚಂದದಿಂ ಮೆರೆವ ಸರಸ್ವತಿಯ ಪಾದಕೆ ನಮಿಸಿ
ಸರ್ವದಾ ಸರ್ವ ಜೀವರ ಹೃದಯದಲಿ ನಿಂತು
ಸರ್ವ ಕಾರ್ಯಗಳ ತಾಮಾಡಿಸಿ ಹರಿಗೆ ಪೂಜಿಸುವ
ಸರ್ವ ಪ್ರೇರಕನಲ್ಲಿ ಸರ್ವವನು ಅರ್ಪಿಸುವ
ವಾಯು ಮೂರುತಿಯ ಪಾದಗಳನ್ನು ಸ್ಮರಿಸುತ ನಿತ್ಯ
ವರಮಹಾಲಕ್ಷ್ಮಿಯೇ ಪರಮ ಧನ್ಯಳು ಎಂದು
ಸುರರೆಲ್ಲಾ ಸ್ತುತಿಸುತ್ತ ಕರ ಮುಗಿವ ದೇವಿಯನು
ಕರಣ ಶುದ್ಧ ಬೇಡಿವರಗಳನು ಯಾಚಿಸುತ
ಪರಮಾತ್ಮನಲಿ ಭಕ್ತಿ ವಿರಕ್ತಿಯನು ಕೊಡು ಎನುತ
ಪರಮ ಪುರುಷೋತ್ತಮನ ಚರಣಗಳಿಗೊಂದಿಸುತ
ಸ್ಥಿರ ಜ್ಞಾನ ಬುದ್ಧಿಯನು ಕೊಟ್ಟು ಕಾಪಾಡೆನುತ
ಸಿರ ಬಾಗಿ ಬೇಡುವೆನು ವರವಿತ್ತು ಪಾಲಿಪುದು
ಪರಮ ಪಾವನ ಮೂರ್ತಿ ಪರಮಾತ್ಮನ ವ್ಯಾಪಾರ
ಅರಿತು ಪೇಳುವರ್‍ಯಾರು ಶ್ರೀಹರಿಯ ಅದ್ಭುತ ಕಾರ್ಯ
ಸುರಮುನಿ ನಾರದರೆ ಸರಸಿಜಾಕ್ಷನ ಮಹಿಮೆ
ಅರಿತು ಪೊಗಳುವರಿನ್ನು ಸುರಿಸಿ ಅಮೃತದ ರಸವ
ಸವಿಯ ಬಲ್ಲವರೆಲ್ಲ ಸವಿದು ಪಾನವ ಮಾಡಿ
ಹರಿಧ್ಯಾನ ಪರರಾಗಿ ಹರುಷದಿಂದಿಹರೆಂದು
ವರ ಕವಿಗಳೆಲ್ಲ ಪೇಳುತಿರುವ ಸುದ್ದಿಯನು

ದಾತನ ಚರಣಕೆ ನಮಿಸುತಲಾಕ್ಷಣ
ಈ ತೆರ ಸ್ತುತಿ ಮಾಡುತಲಾಗ

ಸ್ತುತಿಸ ಬಂದೆವೊ ದೇವ ಕಮಲಾಕ್ಷ ಕಾಯೊ
ಹಿತದಿ ಪಾಲಿಸಬೇಕೊ ಕಮಲಾಕ್ಷ
ಅತಿಶಯ ಲೀಲೆ ತೋರಿ ಕಮಲಾಕ್ಷ ನಮ್ಮ
ಸತತ ಪಾಲಿಸಬೇಕೊ ಕಮಲಾಕ್ಷ ೧

ಸರ್ಪಶಯನ ಕಾಯೊ ಕಮಲಾಕ್ಷ ಬಲು
ಕ್ಷಿಪ್ರದಿ ಪೊರೆಯೆಮ್ಮ ಕಮಲಾಕ್ಷ
ಅಪ್ರಮೇಯ ಪೊರೆ ಕಮಲಾಕ್ಷ
ಕಂದರ್ಪನ ಪಿತ ಕಾಯೊ ಕಮಲಾಕ್ಷ ೨

ಸೃಷ್ಟಿಕರ್ತನೆ ಕಾಯೊ ಕಮಲಾಕ್ಷ
ಪರಮೇಷ್ಠಿ ವಂದಿತಪಾದ ಕಮಲಾಕ್ಷ
ಕಷ್ಟವ ಬಿಡಿಸಯ್ಯ ಕಮಲಾಕ್ಷ
ಬಾಯಬಿಟ್ಟು ಪ್ರಾರ್ಥಿಸುವೆವೊ ಕಮಲಾಕ್ಷ ೩

ಪೊಡವಿಗೊಡೆಯ ರಂಗ ಕಮಲಾಕ್ಷ
ಪಾಲ್ಗಡಲಶಯನ ಹರಿ ಕಮಲಾಕ್ಷ
ಮೃಡವಂದ್ಯನೆ ಕೃಷ್ಣ ಕಮಲಾಕ್ಷ ಇನ್ನು
ತಡಮಾಡ ಬೇಡವೊ ಕಮಲಾಕ್ಷ ೪

ಪಕ್ಷಿ ವಾಹನನೆ ಕಮಲಾಕ್ಷ ಸಿರಿ
ಅಕ್ಷಯ ಫಲದನೆ ಕಮಲಾಕ್ಷ
ರಕ್ಷಿಸು ರಕ್ಷಿಸು ಕಮಲಾಕ್ಷ ಉ_
ಪೇಕ್ಷೆಯ ಮಾಡದಿರು ಕಮಲಾಕ್ಷ ೫

## ೫. ಪುರಂದರ ವಿಠಲದಾಸರ ಚರಿತ್ರೆ

### ಆರ‍್ಯ

ತಂದೆ ಮುದ್ದು ಮೋಹನ ವಿಠ್ಠಲದಾಸಾರ್ಯರ
ಕಂದರೆಂಬ ಕೀರ್ತಿ ಪಡೆದವರ
ಚಂದದಿಂದ ಉರಗಾದ್ರಿವಾಸ ವಿ
ಠ್ಠಲ ದಾಸರ ಪಾದಕೊಂದಿಸುತ ೧

ಬಂಧು ಬಳಗ ಸರ್ವೇಶ್ವರನೆನ್ನುತ
ಚಂದದಿ ಭಕ್ತವೃಂದಕೆ ತಿಳಿಪ
ತಂದೆ ವೆಂಕಟೇಶ ವಿಠ್ಠಲ ದಾಸರಿ–
ಗೊಂದಿಸಿ ಸಿರ ಬಾಗುತ ಮುದದಿ ೨

ಕಮಲಾಕ್ಷನ ಸದ್ಭಕ್ತ ಶಿಖಾಮಣಿ
ಪುರಂದರ ದಾಸರ ಚರಿತೆಯನು
ಪವನಾಂತರ್ಗತ ಕಮಲನಾಭ ವಿ–
ಠ್ಠಲನ ಪ್ರಾರ್ಥಿಸುತಲರುಹುವೆನು ೩

ಗಜ ಮುಖ ಪಾಲಿಸು ಭಜಿಸುವೆ ಸತತ
ಭುಜಗ ಭೂಷಣನ ನಿಜ ಕುವರನೆ ವರ ಪ

ಪಾರ್ವತಿಸುತ ನಿನ್ನ ಕೀರುತಿ ಪೊಗಳುವೆ
ಪಾರುಗಾಣೆನೊ ಮತಿ ಪಾಲಿಸೆಂದೆನುತಲಿ ೧

ಇಂದು ಶೇಖರನಿಗೆ ಕಂದನೆಂದೆನಿಸಿದಿ
ವಂದಿಪೆ ನಾ ನಿನ್ನ ಸುಂದರ ಮೂರುತಿ ೨

ಕರುಣದಿ ಭಕ್ತರಿಗೊಲಿದು ವರವನೀವೆ
ಕರುಣಿಸು ಮತಿ ಕಮಲನಾಭ ವಿಠ್ಠಲನಲಿ ೩

ಪನ್ನಗಶಯನನೆ ಕಮಲಾಕ್ಷ ಆ_
ಪನ್ನರಕ್ಷಕ ಕಮಲಾಕ್ಷ
ಬಿನ್ನಹ ನುಡಿ ಕೇಳಿ ಕಮಲಾಕ್ಷ ಪ್ರ_
ಸನ್ನನಾಗು ಬೇಗ ಕಮಲಾಕ್ಷ ೬

ಕಂಗಳ ನೋಟದಿ ಕಮಲಾಕ್ಷ ಜ_
ಗಂಗಳ ಪಾಲಿಪೆ ಕಮಲಾಕ್ಷ
ಭಂಗವ ಬಿಡಿಸಯ್ಯ ಕಮಲಾಕ್ಷ ಕಾ_
ಳಿಂದಿ ರಮಣನೆ ಕಮಲಾಕ್ಷ ೭

ನಾರದ ವಂದ್ಯನೆ ಕಮಲಾಕ್ಷ ನರ
ನಾರಾಯಣ ರೂಪ ಕಮಲಾಕ್ಷ
ವಾರಿಜ ನಾಭ ಶ್ರೀ ಕಮಲಾಕ್ಷ ವರ
ವಾರಿ ವಿಹಾರನೆ ಕಮಲಾಕ್ಷ ೮

ಕಮಲ ನಾಯಕ ಕಮಲಾಕ್ಷ ಹೃ_
ತ್ಕಮಲದಿ ವಾಸ ಶ್ರೀ ಕಮಲಾಕ್ಷ
ಕಮಲ ಸಂಭವನಯ್ಯ ಕಮಲಾಕ್ಷ ಕಾಯೊ
ಕಮಲನಾಭ ವಿಠ್ಠಲ ಕಮಲಾಕ್ಷ ೯

## ಆರ‍್ಯ

ಈ ಪರಿ ಸ್ತುತಿಸಿದ ನುಡಿಗಳನಾಲಿಸಿ
ಶ್ರೀಪತಿ ಯೋಚಿಸಿ ಮನದಲ್ಲಿ
ತಾಪದಿ ಬಳಲಿದ ತನ್ನಯ ಭಕ್ತರಿ_
ಗೀಪರಿ ಪೇಳಿದ ಹರುಷದಲಿ ೧

ಮಂದಿಗಳೆಲ್ಲರು ಇಂದುಕೇಳಿರಿ
ಚಂದದ ಅಮೃತದ ಬಲದಿಂದ
ಪೊಂದಿದ ಕಷ್ಟವು ಪರಿಹರವಾಗಿ ಸುಖ_
ದಿಂದ ಬಾಳುವಿರೆಂದೆನಲು ೨

ತಂದೆಯ ಮಾತಿಗೆ ಕಂದರು ಹರುಷವ
ಪೊಂದುವ ತೆರನಂದದಿ ತಾವು
ಮಂದ ಹಾಸದಲಿ ವಂದಿಸಿ ದೇವಗೆ
ಚಂದದಿಂದ ಮಾತಾಡಿದರು ೩

ಇಂದಿರೆ ರಮಣನೆ ಚಂದದಿ ಅಮೃತವು
ಮುಂದೆ ದೊರಕುವದು ಹೇಗೆನಲು
ಮಂದರಪರ್ವತ ತಂದು ಸಾಗರದಲಿ
ಚಂದದಿ ಮಥಿಸಲು ದೊರಕುವದು ೪

ಅಂದ ವಚನವ ಕೇಳುತ ತ್ವರದಲಿ
ಮಂದರ ಪರ್ವತ ಇರುವಲ್ಲಿ
ನಿಂದರು ನೋಡುತ ಸುಂದರ ಕಮಲ_
ನಾಭವಿಠ್ಠಲಗೊಂದಿಸಿ ಬೇಗ ೫

## ಭಾಮಿನಿ ಷಟ್ಪದಿ

ಇಂದಿರೇಶನೆ ಮಂದರವು ನ_
ಮ್ಮಿಂದ ಎತ್ತಲು ಸಾಧ್ಯವಿಲ್ಲವು
ಮುಂದೆ ಹಿತ ಪೇಳೆನಲು ನುಡಿದ ಗೋವಿಂದನಾಕ್ಷಣದಿ
ಮಂದ ಮತಿಗಳು ದಾನವರು ಅವ_
ರಿಂದ ನಿಮ್ಮಯ ಕಾರ್ಯ ತ್ವರದಲಿ
ಚಂದದಿಂ ನಡಿಯುವದು ಸಖ್ಯವುಮಾಡಿ ಅವರಲ್ಲಿ ೧

ವಿನುತಸುತನನು ಸ್ಮರಿಸಿ ಬೇಡಿರಿ
ಘನತರದ ಕಾರ್ಯವನು ಸುಲಭದಿ
ಅನುನಯದಿ ಮಾಡುವನು ಶೀಘ್ರದಿ ಮಾಡಿರೆಂದೆನಲು
ಅನುಪಮ ಶ್ರೀ ಹರಿಯ ನುಡಿಗಳ
ವಿನಯದಿಂದಾಲಿಸಿದರೆಲ್ಲರು
ಘನಪರಾಕ್ರಮ ಗರುಡನನು ಸ್ತುತಿಸಿದರು ಅವರೆಲ್ಲ ೨

## ಭಾಮಿನಿ ಷಟ್ಪದಿ

ಪರಮ ಪುರುಷನ ಅಡಿಗೆ ವಂದಿಸಿ
ವರಮಹಾಲಕ್ಷ್ಮಿಯ ವಿಲಾಸವು
ವರಗುರುಗಳಿಗೆ ಅರ್ಪಿಸಿದ ಮಂಗಳ ಚರಿತ್ರವನು
ಹರುಷದಿಂ ಬರೆದೋದಿ ಕೇಳಲು
ತ್ವರದಿ ದುರಿತಗಳೆಲ್ಲ ಕಳೆವದು
ಹರಿಯು ತನ್ನಯ ಮಡದಿ ಸಹಿತ ವಾಸಿಪನವರ ಮನದಲಿ

## ಮಂಗಳ

ಮಂಗಳ ಮಂಗಳ ಮಾಧವಗೆ
ಮಂಗಳ ಮಂಗಳ ಮಹಲಕ್ಷ್ಮಿಗೆ ಜಯ ಪ

ಚಂದದ ಜಲದೊಳು ಮುಳುಗಿ ವೇದವ ತಂದು
ಮಂದರಗಿರಿ ಧರಿಸಿದ ದೇವಗೆ
ಸುಂದರ ವರಹನೆನಿಸಿಕೊಂಡ ಸ್ವಾಮಿಗೆ
ಕಂದನಿಗೊಲಿದ ಮುಕುಂದನಿಗೆ ೧

ಪೊಡವಿಯನಳೆದ ಈರಡಿಗಳ ಚಲುವಗೆ
ಕೊಡಲಿಯ ಪಿಡಿದಿಹ ಭಾರ್ಗವಗೆ
ಮಡದಿಯ ನರಸುತ ನಡೆದ ಶ್ರೀರಾಮಗೆ
ತುಡುಗತನದಿ ಪಾಲ್ಬೆಣ್ಣೆ ಮೆದ್ದವಗೆ ೨

ಬುದ್ಧನಾಗಿ ತ್ರಿಪುರರ ಗೆಲಿದವಗೆ
ಶುದ್ಧನಾಗಿ ಹಯವೇರಿದಗೆ
ಮುದ್ದು ಮೂರುತಿ ಕಮಲನಾಭ ವಿಠ್ಠಲನಿಗೆ
ಹದ್ದನೇರಿದ ಶ್ರೀಹರಿ ಕೃಷ್ಣಗೆ ೩

## ಆರ್ಯ

ವೈನತೇಯನನು ಸ್ಮರಿಸಿದರಾಗಲೆ
ದೇವತೆಗಳು ಸಂಭ್ರಮದಿಂದ
ನೀ ಈಮಂಧರ ತರಬೇಕೆನಲು
ಸ್ವಾಮಿ ದಯದಿ ತಂದಿರಿಸಿದನು ೧

ದೇವತೆಗಳು ದೈತ್ಯರ ಬಳಿ ಬರಲು ಅ_
ಪಾರ ಸಂಭ್ರಮದಿ ಅವರೆಲ್ಲ
ದೇವೇಶನ ನುಡಿ ನಡೆಸಲು ಸಮ್ಮತ_
ರಾಗಿ ಬಂದರು ಮಂಧರದೆಡೆಗೆ ೨

ದೇವದೈತ್ಯರು ಒಂದಾಗುತ
ಆ ಪರ್ವತ ಮೆಲ್ಲನೆ ತಂದು
ಕ್ಷೀರಸಾಗರದಲ್ಲಿಡುತ ಮಥಿಸಲು
ನಾಗಸರ್ಪನನು ಸುತ್ತುತಲಿ ೩

ದೈತ್ಯರು ಪಿಡಿದರು ವಾಸುಕಿ ಮುಖವನು
ದೇವತೆಗಳು ಪುಚ್ಛವ ಪಿಡಿದು
ಬೇಗದಿ ಮಥಿಸಲು ಸಾಗಿತು ಪರ್ವತ
ಸಾಗರದಲಿ ಮುಳುಗುತ ಬೇಗ ೪

ಕಳವಳ ಪಡುತಲಿ ಮುಳುಗುತ
ಗಿರಿಯು ಇಳಿದುದು ಕಂಡರು ಸುರರೆಲ್ಲ
ಕಮಲನಾಭ ವಿಠ್ಠಲನಿಗೊಂದಿಸಿ
ವಿಮಲಪಿತನನು ಸ್ತುತಿಸಿದರು ೫

## ಕಂದ

ಮಂದರ ಪರ್ವತ ಮುಳುಗಲು
ಮುಂದೋರದೆ ಯೋಜಿಸುತವರು

## ಆರ್ಯ

ಸುರರೆಲ್ಲರು ಸಂತೋಷವ ಪಡುತಿರೆ
ಸಿರಿಯರಸನ ಸಿರಿ ಮುಡಿಯಲ್ಲಿ
ಸುರಿಸಿದರಾಕ್ಷಣ ಸುರಪಾರಿಜಾತದ ಪರಿ–
ಪರಿ ಕುಸುಮದ ಮಳೆಯನು ೧

ದೇವ ದುಂದುಭಿ ವಾದ್ಯಗಳಾಗಲು
ದೇವನ ವೈಭವ ನೋಡುತಲಿ
ದೇವರುಷಿ ನಾರದರೈತರಲು
ಶ್ರೀವರನಡಿಗಳಿಗೆರಗುತಲಿ ೨

ಅಪ್ಸರ ಸ್ತ್ರೀಯರು ನೃತ್ಯಗಾನದಿಂ
ಪಕ್ಷಿವಾಹನನ ಸಮ್ಮುಖದಿಂ
ಕ್ಷಿಪ್ರದಿ ಬಂದರು ತಮ್ಮಯ ಸೇವೆಯ
ಅಪ್ರಮೇಯನಿಗೆ ಅರ್ಪಿಸುತ ೩

ಈ ಪರಿ ವೈಭವದೊಳಗಿಹ ದೇವನ
ತಾಪಸಿಗಳು ನೋಡುತ ಬರಲು
ರೂಪವತಿಯರು ರತ್ನದ ಆರತಿಗಳು
ಆ ಪರಮಾತ್ಮಗೆ ಬೆಳಗಿದರು ೪

ಕಮಲಾಕ್ಷಿಯನೊಡಗೂಡುತ ತ್ವರದಲಿ
ಕಮಲನಾಭ ವಿಠ್ಠಲ ಹರಿಯು
ಅಮರರಿಗೆಲ್ಲ ಅಭೀಷ್ಟವ ಕೊಡುತಲಿ
ರಮೆಯ ರಮಣ ಕಂಗೊಳಿಸುತಿರೆ ೫

## ಕಂದ

ಈ ಪರಿ ವೈಭವದಿಂದಲಿ ಆ ಪರಮಾತ್ಮನ
ರಾಣಿಯನು ಸ್ತುತಿಸಿ
ಶ್ರೀಪತಿಯನು ಕೊಂಡಾಡುತ ಆ ಪರಮಾತ್ಮ
ಲಕುಮಿಗಾರತಿ ಎತ್ತಿದರು.

ನಂದ ಮುಕುಂದನ ಭಜಿಸುತ
ವಂದಿಸಿ ಸ್ತೋತ್ರವಗೈದರು ಮುದದಿ

ಯದುಕುಲೇಶ ಮದನಜನಕ ಮುದದಿ ಪಾಲಿಸು
ಸದಯನಾಗಿ ನಮಗೆ ಒಲಿದು ವರವ ಕರುಣಿಸು ಪ

ಇಂದಿರೇಶ ನಿನ್ನ ವಚನದಂತೆ ನಡೆಸಲು
ಇಂದು ಈ ಪರ್ವತವು ಜಲದಿ ನಿಂದು ಕಾಣದೆ ೧

ಮುಂದೆ ನಮಗೆ ಗತಿಯ ತೋರೋ ಇಂದಿರಾಪತೆ
ನಿಂದು ಪ್ರಾರ್ಥಿಸುವೆವು ನಿನ್ನ ಪಾರ್ಥಸಾರಥೆ ೨

ನಿನ್ನ ನಂಬಿ ಭಜಿಸುವರಿಗೆ ಇನ್ನು ಬವಣೆಯೆ
ಸನ್ನುತಾಂಗ ಸಲಹಬೇಕೊ ಪ್ರಸನ್ನನಾಗುತ ೩

ಪಕ್ಷಿವಾಹನ ದೇವ ದೇವ ರಕ್ಷಿಸೆಮ್ಮನು
ಸೂಕ್ಷ್ಮಮುಣುಗಿಸುವಿ ಮಹಾಸ್ಥೂಲ ತೇಲಿಸುವಿ ೪

ತಡವು ಮಾಡಬೇಡ ಲಕ್ಷ್ಮಿಒಡೆಯ ನಮಿಪೆವು
ಮೃಡನ ಸಖನೆ ಕಮಲನಾಭವಿಠ್ಠಲ ಪಾಲಿಸು ೫

## ಆರ‍್ಯ

ಈ ವಿಧ ನುಡಿಗಳ ಕೇಳುತ ಶ್ರೀ ಹರಿ
ಬೇಗ ಕೂರ್ಮನಾಗುತ ತಾನು
ಸಾಗರದಲಿ ಮುಳುಗಿದ ಗಿರಿಯನು ಬೆ_
ನ್ನಲಿ ಧರಿಸಿದ ಹರಿ ಮಾಧವನು

ಶರಧಿಯ ಮಥಿಸಿದರು ಸುರರು ಅಸುರರು ಪ

ಶರಧಿಯ ಮಥಿಸಲು ಸುರರು ಅಂಬರದೊಳು
ನೆರೆದು ನೋಡುತಲಿರಲು ಪರಮ ವೈಭವದೊಳು ೧

ಯಮಧರ್ಮರಾಯನೊಲ್ಲೆ ಭಯವ ಕೊಡುವವನ
ಚಿಗರೆವಾಹನನನ್ನು ಒಲ್ಲೆ ವಾಯು ಎಂಬನ ೪

ಚಂದದ ಕುಬೇರನೊಲ್ಲೆ ಮುಂದೆ ಧನಪನ
ಅಂದದ ಈಶಾನನೊಲ್ಲೆ ದಿಕ್ಕಿಗಧಿಪನ ೫

ವರುಣದೇವನನ್ನು ಒಲ್ಲೆ ಎರಳೆವಾಹನನ
ತರುಣಿ ಗಿರಿಜೆ ಪತಿಯ ಒಲ್ಲೆ ಗರಳ ಕುಡಿದನ ೬

ಸ್ವಚ್ಛ ಜಲನಿವಾಸಿಯಾದ ಮತ್ಸ್ಯನೊಲ್ಲೆ ನಾ
ಮುಚ್ಚಿ ಕೈಕಾಲು ನಡೆವ ಕೂರ್ಮನೊಲ್ಲೆನಾ ೭

ಹುಡುಕಿ ನಾರು ಬೇರು ಮೆಲುವ ವರಹನೊಲ್ಲೆ ನಾ
ಕಿಡಿಕಿಡಿಯುದುರುವ ನಯನದ ನರಸಿಂಹನೊಲ್ಲೆ ನಾ ೮

ಬೆಡಗಿಲಿ ಭೂಮಿಯನೆ ಅಳೆದ ಹುಡುಗನೊಲ್ಲೆ ನಾ
ಕೊಡಲಿ ಪಿಡಿದು ಬಿಡದೆ ನೃಪರ ಕಡಿವನೊಲ್ಲೆ ನಾ ೯

ಮಡದಿ ನೀಗಿ ವನವನಗಳ ಚರಿಪನೊಲ್ಲೆ ನಾ
ಬಿಡದೆ ಗೋಪ ಸ್ತ್ರೀಯರಿಗೊಲಿದ ತುಡುಗನೊಲ್ಲೆ ನಾ ೧೦

ಶುದ್ಧನಾರೇರ ವ್ರತವನಳಿದ ಬೌದ್ಧನೊಲ್ಲೆ ನಾ
ಮುದ್ದು ತೇಜಿ ನೇರಿ ಮೆರೆದ ಕಲ್ಕ್ಯನೊಲ್ಲೆ ನಾ ೧೧

ನಾಗವೇಣಿ ನಗುತ ನಾಗಶಯನ ದೇವಗೆ
ಯೋಗಿ ಅರಸಗಾಗ ವನಮಾಲಿಕೆಯನೆ ಹಾಕಿದಳು ೧೨

ಕರುಣಸಾಗರ ಕಮಲನಾಭ ವಿಠ್ಠಲ ನಗುತಲಿ
ಕಮಲನೇತ್ರೆಯೊಡನೆ ಕೂಡಿ ಹರುಷಪಡುತಲಿ ೧೩

ಅಂಬರದೊಳು ದೇವ ದುಂಧುಬಿಗಳು ಮೊಳಗೆ
ತುಂಬುರರು ನಾರದರು ಸಂಭ್ರಮದಲಿ ಪಾಡೆ ೨

ಅಪ್ಸರ ಸ್ತ್ರೀಯರು ನೃತ್ಯಗಾಯನದಿಂದ
ಸರ್ಪಶಯನನ ಪಾಡಿ ಸ್ತೋತ್ರವ ಮಾಡುತಲಿರೆ ೩

ಮಂದರೋದ್ಧರ ಗೋವಿಂದನ ಸಿರಿಮುಡಿಗೆ
ಮಂದಾರ ಪಾರಿಜಾತಗಳ ಮಳೆ ಕರೆಯಲು ೪

ಸುರಸುಂದರಿಯರೆಲ್ಲರು ಮುತ್ತಿನಾರತಿ
ಪರಮಾತ್ಮನಿಗೆ ಎತ್ತಿ ಹರುಷ ಪಡುತಲಿರಲು ೫

ಸುರತರು ಕಾಮಧೇನು ಚಿಂತಾಮಣಿ ಐರಾವತವು
ಪುಟ್ಟಲು ಸುರಲೋಕಕೆ ಕಳುಹಿದರಾಗಲೆ ೬

ಗರಳ ಪುಟ್ಟಲು ಗಂಗಾಧರನು ಸ್ವೀಕರಿಸಿದ
ವರ ಶಶಿ ಪುಟ್ಟೆ ಧರಿಸಿದ ತನ್ನ ಸಿರದೊಳು ೭

ಕ್ಷೀರಸಾಗರದಲಿ ಜನಿಸಿದಮೃತ ಕಂಡು
ದೇವತೆಗಳು ಹರುಷದಲಿ ಓಲ್ಯಾಡುತ ೮

ಧನ್ವಂತರಿ ರೂಪದಿಂದಲಿ ಹರಿ ಉದಿಸಲು
ಧನ್ಯರಾದೆವೆಂದು ಚಂದದಿ ಕುಣಿಯುತ ೯

ಹರಿಸಿರಿರಾಣಿ ಉದ್ಭವಿಸಲಾಕ್ಷಣದಲಿ
ಸುರರು ಪುಷ್ಪದ ವೃಷ್ಟಿ ಕರೆದರು ಹರುಷದಲಿ ೧೦

ಕಮಲ ಮುಖಿಯು ಕಮಲದ ಮಾಲಿಕೆಯ ಪಿಡಿದು
ಕಮಲನಾಭವಿಠ್ಠಲನ ಸ್ಮರಿಸಿದಳಾಗ ೧೧

ದೈತ್ಯರ ಬಳಿ ಕಾಲಿಡುತಲಿ ನಡೆಯುತ
ದೇವತೆಗಳಿಗಮೃತನುಣಿಸಿ
ಮಾತನಾಡದೆ ಮೌನದಿ ನಡೆಯಲು ಬಲು
ಭೀತಿಪಡುತ ದಾನವರೆಲ್ಲ ೪

ಕಲಕಲ ಕೂಗುತ ಯುದ್ಧಕೆ ಬರುತಿರೆ
ಕಮಲನಾಭ ವಿಠ್ಠಲ ತಿಳಿದು
ಸುಮಹಿಮ ಅನಂತಾಸನ ಸುಮ್ಮನೆ ಇರೆ
ವಿಮುಖರಾಗಿ ಪೋದರವರೆಲ್ಲ ೫

## ಆರ್ಯ

ದೇವತೆಗಳ ಬಲ ಹೆಚ್ಚಾಗಿರಲು
ದೈತ್ಯರೆಲ್ಲ ಮುರಿದೋಡಿದರು
ಆದಿಲಕ್ಷ್ಮಿ ವನಮಾಲಿಕೆ ಪಿಡಿದು
ಮಾಧವನನು ಹುಡುಕುತಲಿರಲು

ಕಮಲ ಮುಖಿಯು ಕಮಲದ ಮಾಲಿಕೆಯ ಪಿಡಿಯುತ
ಹರುಷದಿಂದ ಬಂದಳಾಗ ಹರಿಯ ಹುಡುಕುತ ಪ

ವೇದ ಪುರುಷನನು ಮನದಿ ಧ್ಯಾನ ಮಾಡುತ
ಆದರದಲಿ ಹರಿಯ ಗುಣಗಳನೆ ಹುಡುಕುತ ಅ.ಪ

ಇಂದ್ರನನ್ನು ಒಲ್ಲೆ ಮಯ್ಯಗಣ್ಣ ಚಲುವನ
ಚಂದ್ರನನ್ನು ಒಲ್ಲೆ ಕಳೆಯಗುಂದಿದಾತನ ೧

ಸೂರ್ಯನನ್ನು ಒಲ್ಲೆ ಕೇಳು ಸುತ್ತ ಸುಡುವನ
ವಾಯುದೇವರನ್ನು ಒಲ್ಲೆ ಗಾಳಿ ಬೀಸುವನ ೨

ಅಗ್ನಿ ದೇವರನ್ನು ಒಲ್ಲೆ ಶುದ್ಧನಾಗಿಹನ
ನರನವಾಹನನನ್ನು ಒಲ್ಲೆ ನಿರುತಿ ಎಂಬುವನ ೩

## ಆರ್ಯ

ದಾನವರೆದ್ದರು ಮಾಧವನರಸಿಯ
ಮೋಹನಾಕಾರವ ನೋಡುತಲಿ
ಈ ವಿಧ ಸುಂದರಿ ಯಾರೆಂದೆನುತಲಿ
ಬಹು ಪರಿ ಅಲೋಚಿಸುತಿರಲು ೧

ಶ್ರೀಧರ ತಿಳಿದನು ಈ ವಿಧ ಅಸುರರು
ಮೋಹಗೊಂಡಿಹ ಪರಿಯನ್ನು
ದಾನವ ವೈರಿಯು ಮೋಹಿನಿಯಾದಳು
ಈ ವಿಧ ಬಣ್ಣಿಸಲಸದಳವು ೨

ನವಮೋಹನ ಸುಂದರ ಮೂರ್ತಿಯು
ಸುಂದರ ರೂಪವ ಧರಿಸಿದನಂದು
ಬಹು ಮಿಗಿಲೆನಿಸುವ ಸೊಗಸಿನ ಶೃಂಗಾರ
ಕಮಲನಾಭ ವಿಠ್ಠಲ ಹರಿಯು ೩

ಶ್ರೀಧರ ತಾಳಿದ ಶ್ರೀರೂಪ ಸುಂದರ ರೂಪ
ದಿವ್ಯ ಮೋಹಿನಿ ರೂಪ ಪ

ಸುರರೆಲ್ಲ ಸ್ತುತಿಮಾಡುತಿರಲು ಬೇಗ
ಅಸುರರೆಲ್ಲರು ನೆರೆದು ಬರಲು
ಕುಸುಮನಾಭನು ಮೆರೆಯುತಿರಲು
ಸುರರು ಕುಸುಮದಮಳಗರೆಯುತಿರಲು
ವಸುಧೆಯೊಳಗೀರೀತಿ ಹರಿಯ ಕೀರ್ತಿ
ವಸುದೇವ ಸುತತಂದ ಪರಿಯು
ಶಶಿಮುಖಿ ಶ್ರೀರಮಣ ಶ್ರೀಹರಿಯು ಜನರ
ಕುಶಲದಲಿ ಪೊರೆವ ಸಿರಿದೊರೆಯು
ಸುರರಿಗೆ ಅಭಯವನಿತ್ತನು ಸರ್ವಶಕ್ತನು
ಸರ್ವನಿಯಾಮಕನು
ಭಕ್ತವತ್ಸಲನೆಂಬ ಬಿರುದನು ಪೊತ್ತದೇವನು
ಭಕ್ತರಿಷ್ಟ ಕೊಡುವನು ೧

ಕಮಲನಾಭ ವಿಠ್ಠಲ ರೂಪದ ಮೋಹಿನಿ
ಅಮೃತವ ಬಡಿಸಿದಳಾಗ ೩

ಕಣ್ಣು ಮುಚ್ಚಿ ಕುಳಿತಿಹ ದಾನವರು
ಮೆಲ್ಲನೆ ಮೋಹಿನಿ ಬರುವುದ ತಿಳಿದು
ತಲ್ಲಣಿಸಿದರೀ ಪರಿಯಲಿ ಘಲ್
ಘಲ್ಲೆಂಬ ಪಾದದ ಗೆಜ್ಜೆಯ ಧ್ವನಿಗೆ

ನೋಡಿರಿ ಮೋಹಿನಿ ಬರುತಿಹಳಾಗಲೆ
ಕಾಲ ಪೈಜನ ಧ್ವನಿಯಾಗುತಿದೆ ಪ

ನಾಡೊಳಗಿನ ಸ್ತ್ರೀಯರ ರೂಪಕೆ ಮಿಗಿ-
ಲಾದ ರೂಪ ಪೊಂದಿದ ಚದುರೆ ಅ.ಪ

ಬಡನಡು ಬಳುಕುತ ಬಾಲೆಯು ಬರುತಿರೆ
ಸೊಗಸಿನ ಚಿನ್ನದ ಲತೆಯಂತೆ
ನಡಿಗೆಗಳಂದಕೆ ನಾಚುತ ಹಂಸೆಯು
ನಡೆಯುವದಕೆ ಧಿ:ಕರಿಪಂತೆ ೧

ಅಕ್ಕೋ ಬರುತಿಹಳಕ್ಕೋ ಚರಣಗ-
ಳಕ್ಕೋ ಶಬ್ದಗಳಾಗುತಿದೆ
ಸಕ್ಕರೆ ತುಟಿ ಕನ್ನಡಿ ಕದುಪಿನ ಮುಖ
ಹಿಕ್ಕಿ ಹೆಣೆದ ಜಡೆ ವಲಿಯುತಿದೆ ೨

ಈ ಪರಿ ನುಡಿ ಕೇಳುತ ಕಮಲಾಕ್ಷಿಯು
ಮೋಸದ ಮುಗುಳು ನಗೆಯ ನಗುತ
ಚಾತುರ್ಯದಿ ಮಾಡಿದ ಕಾರ್ಯವು ಬಲು
ಆತುರ ಪಡುತಿಹ ದೈತ್ಯರಿಗೆ ೩

ವೇದವನೆ ಕದ್ದ ಚೋರನ ತರಿದು
ಸಾದರದಿ ವೇದ ತಂದವನು
ಸಾಗರದಿ ಭಾರ ಪೊತ್ತಿಹನು ಬೇಗ
ನಾರು ಬೇರುಗಳ ಮೆಲುತಿಹನು
ಕೂಗುತಲೆ ತರಳ ಗೊಲಿದವನು
ಬೇಗ ಬಾಗುತಲೆ ದಾನ ಬೇಡಿದನು
ಜಾಗು ಮಾಡದೆ ಪರಶುಧರನು
ಕಪಿಗಳ ಕೂಡೆ ವನದೊಳು ಚರಿಸುತಿಹನು
ಗೋಪಿಕಾಲೋಲ ಶ್ರೀಗೋಪಾಲ
ಗೋಪೀಜನರೆಲ್ಲ ಗೋಕುಲದೊಳಗೆಲ್ಲ
ಗೋವಿಂದನಾಡಿದ ಆಟವನೋಡಿ ಸುಖಿಸುವ
ಗೋವೃಂದ ಪಾಲಿಸುವ ೨

ಪಕ್ಷಿವಾಹನ ಪಾರ್ಥಸಖನೂ ತನ್ನ
ಭಕ್ತರಿಷ್ಟಾರ್ಥ ಸಲಿಸುವನು
ಭಕ್ತವತ್ಸಲ ಭೌದ್ಧ ತಾನು ಕಲ್ಕಿ
ಸದ್ಧರ್ಮಗಳ ನಡೆಸುತಿಹನೂ
ಸುತ್ತ ಸನಕಾದಿ ವೃಂದದಲಿ ಮೆರೆವ
ಉತ್ತಮೋತ್ತಮನ ಭಜಿಸುತಲಿ
ಎತ್ತಿಕರಗಳನು ಮುಗಿಯುತಲಿ ಭಜಿಪ
ಭಕ್ತರಿಗೆ ಸುರಧೇನೆನುತಲಿ
ವನಜಜಾಂಡದಿ ಮೆರೆಯುವ ಧೀರ
ಸುರಪರಿವಾರ ಸಂರಕ್ಷಿತ ಲೋಕೋದ್ಧಾರ
ಸತ್ಯ ಸಂಕಲ್ಪನ ಪೊಗಳುತ್ತಾ ಸ್ತುತಿ ಮಾಡುತ್ತ
ಭಕ್ತರಿಷ್ಟಾರ್ಥ ಸಲಿಸುತ್ತ ೩

ಪ್ರಹ್ಲಾದ ಮುಚುಕುಂದ ವರದನಾರಿ
ದ್ರೌಪದಿಯ ಮಾನವನು ಪೊರೆದ
ನೀರಿನೊಳು ಗಜವ ರಕ್ಷಿಸಿದ ಚಕ್ರ-

ಥಳಥಳನ ಹೊಳೆಯುತಿರೆ ಕನ್ನಡಿಯು
ಕದುಪಿನ ಮೇಲೆ ಬೆಳಕು
ಚಂದಿರನ ಧಿ:ಕರಿಪ ಚಂದುಳ್ಳ ಮುಖ ಕಮಲ
ಸೋಗೆ ಕಣ್ಣಿನ ಕಡೆ ನೋಟದ ಸೊಗಸು ೮

ಕಸ್ತೂರಿ ತಿಲಕಾಂಕಿತ ಫಾಲೇ ಒಪ್ಪೆ ಬೈತಲೆ
ಹೊಸ ಮುತ್ತಿನರಳೆಲೆ
ರವಿಕೋಟಿ ಸೂರ್ಯತೇಜದ ಕಾಂತಿ ಒಪ್ಪೆ ಮೂಗುತಿ-
ನಿಟ್ಟು ಮುಖುರ ಬುಲಾಕು
ನಗೆ ಮುಖದರಸಿಯ ವಯ್ಯಾರ ನೋಡಿ ಗಂಭೀರ
ಅರುಳುಮಲ್ಲಿಗೆ ಸರ
ಕಮಲಾಕ್ಷಿ ಧರಿಸಿ ನಿಂದಿರಲಾಗ ನೋಡುತ ಬೇಗ
ಅಮೃತವು ಹಂಚಲಾಗ
ಕಮಲನಾಭ ವಿಠ್ಠಲನು ನಿಂತ ಸುರರೊಳು ಪಂಥಾ-
ಮಾಡುತಲೆ ಮಹಂತ ೯

## ಆರ್ಯ

ಮೋಹಿನಿರೂಪವ ನೋಡುತಲಸುರರು
ಮೋಹವಗೊಂಡರು ಮನದಲ್ಲಿ
ದಾನವ ವೈರಿಯು ನುಡಿದನು ಅವರಿಗೆ
ಸಾನುರಾಗದ ವಚನಗಳ ೧

ನಯನಂಗಳ ಮುಚ್ಚುತ ನೀವೆಲ್ಲರು
ವಿನಯದಿಂದ ಕುಳಿತಿರಿ ಎಂದ
ಸುರರಿಗೆ ನುಡಿದನು ನೀವುಗಳೊಂದೆಡೆ-
ಯಲಿ ಸುಮ್ಮನೆ ಕುಳಿತಿರಿ ಎಂದ ೨

ಕಮಲಾಕ್ಷನ ನುಡಿ ಕೇಳುತ ಉಭಯರು
ತಮ್ಮ ತಮ್ಮ ಸ್ಥಳದಲಿ ಕುಳಿತಿರಲು

ಸುರರೊಡೆಯನ ಮಂಟಪಕೆ ನಕ್ಷತ್ರ ಮಾಲೆಗಳೆಲ್ಲ ಶೋಭಿಸುತ
ಪರಮವೈಭವದಿಂದ ದೇವನ ಇರಿಸಿ ಮಂಟಪ ಮಧ್ಯ ಪೀಠದಿ
ಸುರರೊಡೆಯ ಶ್ರೀ ಹರಿಯ ಸೇವೆಗೆ ಸರಸದಲಿ
ಕುಳಿತಿರುವ ಸಮಯದಿ ೫

ಗಂಗೆ ಗೋದಾವರಿ ಭಾಗೀರಥಿಯಮುನೆ ಕಾವೇರಿ
ಕಪಿಲೆ ಹೇಮಾವತಿಯು
ತುಂಗಭದ್ರೆಯು ಕೃಷ್ಣವೇಣಿ ಸಂಗಮ ಜಲತರಿಸುತ್ತ
ಗಂಗಾಜನಕಗೆ ಶಾಲ್ಮಲಿ ಸರಸ್ವತಿಯ ಜಲಗಳ ತುಂಬಿಡುತ
ರಂಗನಾಥಗೆ ಭೀಮರಥಿ ಸೀತಾ ಸರಯು ನದಿಯ
ಜಲಗಳ ತುಂಬಿಡುತ
ಅಂಗಜನ ಪಿತನಂಘ್ರಿ ಕಮಲಗಳ ಸ್ಮರಣೆ ಮಾಡುತ್ತ
ರಂಗುಮಾಣಿಕ್ಯ ಬಿಗದ ಕಲಶದಿ ಬ್ರಹ್ಮಪುತ್ರಾನದಿಯ ಜಲಗಳ
ಶೃಂಗರದ ಶ್ರೀದೇವದೇವಗೆ ಮಂಗಳ ಅಭಿಷೇಕ
ಮಾಳ್ಪ ಸಮಯದಿ ೬

ವರಪಾಂಡುರಂಗ ಗಂಡಕಿ ಶಾಲಗ್ರಾಮ
ಮೂರ್ತಿ ವಾಸುದೇವ ಮೂರ್ತಿ
ಸುರರೆಲ್ಲ ಸ್ತುತಿಪ ಪಟ್ಟಾಭಿರಾಮ ಮೂರ್ತಿ ಹರಿ ಮೂರ್ತಿ
ವರಶೇಷ ಶೈಲದ ವರ ಅಭಯಪ್ರದ ಶ್ರೀ ವೆಂಕಟೇಶ ಮೂರ್ತಿ
ಪರಮ ಪದವೀವ ಪದ್ಮನಾಭ ಉಪೇಂದ್ರ ಹರಿ ಮೂರ್ತಿ
ಕರಿರಾಜ ವರದ ಕಂಚಿವರದರಾಜನೆಂಬ ಹರಿ ಮೂರ್ತಿ
ಪರಮ ಪುರುಷನ ಪುಣ್ಯಚರಿತನ ಸುರರೊಡೆಯ
ಶ್ರೀ ಶ್ರೀನಿವಾಸನ
ಗರುಡಗಮನನ ಉರಗಶಯನನ ಪರಿಪರಿಯಲಿ
ಪ್ರಾರ್ಥಿಸುವ ಸಮಯದಿ ೭

ಕಾಳಿ ಮರ್ಧನ ಕೃಷ್ಣ ಕಡಗೋಲ ಪಿಡಿದ ಕೃಷ್ಣ ಕಡಹಲ್ದ
ಮರನೇರ್ದ ಶ್ರೀಕೃಷ್ಣನ

ಪರಿಪರಿ ಕ್ಲೇಶದಿ ಪರಿತಪಿಸುವವರು
ಪರಮಾತ್ಮ ನಿನ್ನ ನಾಮ ಸ್ಮರಣೇಲಿ ಪಾರಾದರೊ ೧

ವೇದಚೋರನ ಕೊಂದೆ ಭೂಧರ ಬೆನ್ನಿಲಿ ಪೊತ್ತೆ
ಆದಿ ಹಿರಣ್ಯನ ಕೊಂದೆ ಕಾದುಕೊಂಡೆ ಬಾಲಕನ ೨

ಮೂರಡಿ ಭೂಮಿ ಬೇಡಿ ಕ್ರೂರದಿ ಕ್ಷತ್ರಿಯರ ತರಿದು
ಘೋರ ಕಲ್ಲಾದಹಲ್ಯೆಯ ಕಾಯ್ದ ಶ್ರೀರಾಮಚಂದ್ರ ೩

ಪೂತಣಿ ಮೊದಲಾದ ಪಾತಕರನೆ ಕೊಂದು
ಪ್ರೀತಿಲಿ ತಾತಗೆ ನೀತಿಲಿ ಕೊಟ್ಟೆ ಪಟ್ಟ ೪

ವ್ರತಗೇಡಿಯಾಗಿ ಹಯ ವನದಿ ಬೇಗ ನಡಸುತ
ಪತಿತ ಪಾವನ ಕಮಲನಾಭ ವಿಠ್ಠಲ ದೇವ ೫

## ವಚನ

ದೇವ ದೇವನೆ ಲಾಲಿಸೆನ್ನ ಮಾತುಗಳನ್ನು
ನೀನೊಲಿದು ಪಾಲಿಸಿ ರಕ್ಷಿಸು ಸರ್ವೇಶ
ಭಾನು ಅಸ್ತಕೆ ಎನ್ನ ವೈರಿಯ ಸಿರ ತರಿವೆ
ಎಂದೆನ್ನ ನಾಲಿಗೆಯಿಂದ ನೀನು ನುಡಿಸಿರುವಿ
ಮುಂದಿನ ಕಾರ್ಯ ನಿನಗೊಪ್ಪಿಸಿರುವೆನೊ ದೇವ
ಎಂದೆನುತ ಕರಮುಗಿದು ಪ್ರಾರ್ಥಿಸಲು ಮುನಿವರನು
ಆಗ ಶ್ರೀಹರಿ ನುಡಿದ ಹೀಗೆಂಬೊ ಮಾತುಗಳು
ಆಗಲಿ ನೋಡೋಣ ಹೋಗಿ ಬನ್ನಿರಿ ಎನಲು
ಗಾಲವರು ಸಂತೋಷವನು ಹೊಂದಿ ಮನದೊಳಗೆ
ಭಾಗವತನು ಮತ್ತೊಮ್ಮೆ ನಮಿಸುತ ಹೊರಟು
ನಾರದರಿಗೀ ವಿವರವನೆಲ್ಲ ಪೇಳುತಲಿರಲು ಕೇಳಿ
ನಾರದರು ಮಾತಾಡುವರು ಮತ್ತೇನೆಂದರೆ

ಪನ್ನಗಾರಿಧ್ವಜನು ಬೇಗ ಆ-
ಪನ್ನ ಭಕ್ತರ ಪೊರೆಯಲೀಗ
ಎಳೆಯ ತಳಿರು ಪೋಲುವ ಪಾದ ಸರಪಣಿ ಮೋದ
ಕಿರುಗೆಜ್ಜೆಯನಾದ ಕಿರುಪಿಲ್ಲಿ ಅಣಿಮೆಂಟಿಕಿಸರ
ಕಾಲ್ಬೆರಳುಂಗುರ ಪಾದಗಳ
ಶೃಂಗಾರ ಪಾದ ಸರವು
ಪೈಜನಿನಿಟ್ಟು ಪಾಪಗಳ ಸುಟ್ಟು
ಬೇಡಿದ್ವೊರಗಳ ಕೊಟ್ಟು ೬

ಬೆಡಗಿನ ಪೀತಾಂಬರ ಒಲಿಯೆ
ಝುಗಝುಗನೆ ಹೊಳೆಯುತ್ತ ಮೆರೆಯೆ
ನೆರೆಗಳಲಿ ದುಂಬಿಗಳು ನಲಿಯೆ ಬಾಳೆ-
ಸುಳಿಯಂತೆ ಬಳುಕುತ್ತ ನಡಿಯೆ
ನಡುವಿಗೆ ನವರತ್ನ ಪಟ್ಟೆನಿಟ್ಟು
ಗಿಳಿಗೆಜ್ಜೆ ಗಂಟೆಗಳ ಕಟ್ಟಿ
ಮಿಸುಣಿ ಮಾಣಿಕ್ಯದ ಸರಪಟ್ಟಿ
ನಡುವಿಗಿಡುತ ಶೃಂಗಾರವಾದ ದಿಟ್ಟೆ
ನವರತ್ನ ಹಾರವು ಕೊರಳಲ್ಲಿ ವಕ್ಷಸ್ಥಳದಲ್ಲಿ
ಮುತ್ತಿನ ಪದಕಗಳು
ಕಠಾಣಿಸರಿಗೆ ತಾಯಿತ ಮುತ್ತು ಪದಕಗಳ್ಹತ್ತು
ಒಪ್ಪಿ ಮೆರೆಯುವಗತ್ತು ೭

ಕರದಿ ಕಂಕಣ ಹಾಸರಗಳು ಗೀರು ಬಳೆಗಳು
ಒಪ್ಪುವ ದಿವ್ಯತೋಳು
ವಂಕಿ ತಾಯಿತ ಬಾಜೋಬಂದಿಯು ಕಮಲಗಂಧಿಯು
ನೇತ್ರಾನಂದ ದಾಯಕಿಯು
ಕರ್ಣದಲಿ ನವರತ್ನದಾಭರಣ ಹೊಳಪು
ಹೊಳೆವ ಮೀನ್ ಬಾವುಲಿಯು
ಗಿಳಿಗೆಜ್ಜೆ ಚಳತುಂಬುಗಳನಿಟ್ಟವಲಪು
ಉಳಿದ ದ್ರಾಕ್ಷಲತೆಯು

ಪಾಣಿ ಮೂರ್ಜಗವನ್ನೆ ಪೊರೆದ
ರತಿಪತಿ ಪಿತನ ಕೊಂಡಾಡಿ ಸತ್ಯ–
ವತಿಯ ಪತಿಯನ್ನು ಸ್ತುತಿಮಾಡಿ
ಸತಿ ಸತ್ಯಭಾಮೆಯೊಡಗೂಡಿ ಕುಳಿತ
ಯತಿಯವರದನನ್ನು ಕೊಂಡಾಡಿ
ಸನಕಾದಿ ಸುರಮುನಿ ಸೇವಿತ ಸುರಸನ್ನುತ
ಸದ್ಗುಣಗಣ ಭರಿತ ಸರ್ವಜೀವರ ಸಂರಕ್ಷಕ
ಸರ್ವಸಾಕ್ಷಿಕ ಸಂರಕ್ಷಿತ ಸರ್ವಲೋಕ
ಸರ್ವನಿಯಾಮಕ ಸರ್ವೇಶ ಹರಿಹೃಷಿಕೇಶ ಉರಗಾದ್ರಿ ನಿವಾಸ ೪

ಸುತ್ತ ತುಂಬುರರು ನಾರದರು ನೆರದು
ಭೃತ್ಯರೋಲಗ ಒಪ್ಪುತಿರಲು
ಸರ್ಪಶಯನನೆ ರಕ್ಷಿಸೆನಲು ಬೇಗ
ಅಪ್ರಮೇಯನ ಪಾಡುತಿರಲು
ಸರ್ವೇಶ ಶ್ರೀಶನೀನೆಂದು ಸ್ವಾಮಿ
ಸರ್ವರನು ಪೊರೆಯಬೇಕೆಂದು
ಪ್ರಹ್ಲಾದ ವರದ ನೀನೆಂದು ಸ್ತುತಿಪ
ಸೊಲ್ಲು ಕೇಳುತ ಬಂದು ಪೊರೆದು
ಮಕರ ಕುಂಡಲ ಧರಿಸಿದ ದಿಟ್ಟ ಭಕುತರ ಇಷ್ಟ
ಸಲಿಸುತಿಹ ಶ್ರೇಷ್ಠ ಪರಮಾತ್ಮ ತನ್ನಿಚ್ಛೆ ಬಂದಂತೆ
ಮಾಡುವನಂತೆ ದೇವ ಸ್ತ್ರೀಯಾದನಂತೆ ಸ್ತ್ರೀಯಾದ
ರೂಪ ನೋಡುವ ಬನ್ನಿ ಪಾಡುವ ಬನ್ನಿ ಪಾಡಿ
ಪೊಗಳುವ ಬನ್ನಿ ೫

ಮೋಹನಾಕಾರ ಶೃಂಗಾರ ದಾನವರಿಗೆ
ಮನೋವಿಕಾರ
ಏನೆಂದು ವರ್ಣಿಸಲಿ ಧೀರ
ಮಾನಿನಿಯ ದಿವ್ಯ ಶೃಂಗಾರ
ಮನ್ಮಥನಯ್ಯ ತಾನಾಗ ಕೋಟಿ
ಮನ್ಮಥನ ರೂಪ ತಾನಾದ

ಶರಣಾಗತರನು ಪೊರೆವಗೆ
ವರ ಕಮಲನಾಭ ವಿಠ್ಠಲಗೆ ೫

ಜಯ ಜಯ ಜಯ ಜಯ ಜಯ
ಜಯ ಜಯತು ಜಯದೇಕ ವೀರನಿಗೆ

## ಭಾಮಿನಿ ಷಟ್ಪದಿ

ಕೇಳು ಕರಿಪುರದೊರೆಯೆ ಶ್ರೀಹರಿ
ಈ ವಿಧದಿ ಭಕ್ತರಿಗೆ ಒಲಿಯುತ
ಲೀಲೆಗಳ ವಿಧ ವಿಧದಿ ತೋರುತ ಹರುಷಗಳ ಕೊಡುತ
ಕೇಳು ನಿನ್ನಯ ತಾತರಿಗೆ ಒಲಿದಿ ಮಹಿ-
ಮಂಡಲದಿ ಮೆರೆಸಿದ ಭೂಮಿ
ಪಾಲಕರೆನಿಸಿದರು ಸಿರಿವರನ ಕೃಪೆಯಿಂದ

## ವಚನ

ಈ ವಿಧದಿ ಶುಕಮುನಿಯು ಮಾಧವನನು ಕೊಂಡಾ
ಡಿ, ವೇದವೇದ್ಯನ ಪಾದಪದ್ಮಕೊಂದನೆ ಮಾಡಿ, ಭೂ
ನೃಪಗೆ ಪೇಳಿದರು ಪಾವನ ಚರಿತ್ರವನು. ಶ್ರೀಧರ
ನ ಚರಿತೆಯನು ಸಾಧು ಗುರು ಕೃಪೆಯಿಂದ
ಮೇದಿನಿಯೊಳಗುಳ್ಳ ಸಾಧುಜನಗಳು ಕೇಳಿ
ಆದರದಿ ತಪ್ಪುಗಳ ತಿದ್ದುತಲಿ ಮನ ನಲಿದು
ದೂರಗೈಸಿರಿ ದೋಷ ರಾಶಿಗಳನೆನುತೆಂದು
ಪಾದಗಳಿಗಭಿನಮಿಪೆ. ಕೋವಿದರು ಮನ್ನಿಪುದು
ಈ ವಿಧದ ವಾಕ್ಯಗಳ ಹಾರಪದಕಗಳನ್ನು ಮಾಧವಗೆ
ಅರ್ಪಿಸುವೆ ಸ್ವೀಕರಿಸಲೆಂದೆನುತ ಸೋಮ ಸೂರ್ಯರ
ಸೋಲಿಸುವ ದಿವ್ಯ ನಿನರೂಪ ಮಾಯವಾಗದೆ
ಎನ್ನ ಹೃದಯಕಮಲದಿ ನಿಂತು ಶೋಭಿಸುತ್ತಿರ
ಲೆಂದು ನಾ ಕೈ ಮುಗಿದು ಸ್ತುತಿಪೆ ಸಾಧು ಭಕ್ತರ

## ಗೀತ

ಗೊಲ್ಲ ಕೃಷ್ಣನು ಅಂಜಿ ನಡುಗುತ
ಬಂದು ಗೋಪಿಗೆ ವಂದಿಸುತ್ತಲಿ
ಅಂಗೈಲಿದ್ದ ಬೆಣ್ಣೆಯನೆ ನೋಡುತ
ಕಂದರೆಲ್ಲ ಒಂದಾಗಿ ಕೂಡುತ

## ಮಾತು

ನಂತರ ಹೇಳುವೆನು ಕೇಳಮ್ಮಾ

## ಕಂದ

ನೆಲುವಿನ ಮೇಲಿರುತಿದ್ದ ಬೆಣ್ಣೆಯು
ನಿಲುಕದಿರಲು ಯೋಚಿಸಿ ಮನದಿ
ತರಳರೆಲ್ಲ ಒಂದಾಗುತ ಒರಳನು
ತವಕದಿಂದ ಏರುತ ನವನೀತವ ಕದ್ದೆವು ತಾಯೆ

## ಮಾತು

ಹೀಗೆ ಹೇಳಿದ ಕೃಷ್ಣನ ಮಾತನ್ನು ಕೇಳಿ ಗೋಪೀ
ದೇವಿಯು ಬಹು ಕೋಪದಿಂದ ಕೃಷ್ಣಾ ನಿಲ್ಲು ನಿನ್ನ
ಜತೆಯಲ್ಲಿ ಈ ಜಡವಾದ ಒರಳು ಸಹ ಕಳ್ಳತನಕ್ಕೆ
ಪ್ರಾರಂಭಿಸಿತೇ? ಒಳ್ಳೆಯದು; ಇರಲಿ_

## ಆರ‍್ಯ

ಎನುತಲಿ ಗೋಪಿಯು ಘನಮಹಿಮನನು
ಒರಳಿಗೆ ಕಟ್ಟುತ ತವಕದಲಿ
ಅನಿಮಿಷರರಸನು ಬಂಧಿತನಾಗಿರೆ
ಮನೆ ಕೆಲಸಕೆ ಪೋದಳು ತಾನು

## ಮಾತು

ಹೀಗೆ ಗಣಪತಿಯ ಪ್ರಾರ್ಥಿಸಿ ಗುರುಹಿರಿಯರಿಗೆ
ತಾರತಮ್ಯವರಿತು ವಂದನೆಯಂ ಮಾಡಿ ಪರಮ
ಮಂಗಳ ಮೂರ್ತಿಯ ಚರಿತ್ರವನು ಅರುಹುವೆನು
ಗುರು ಹಿರಿಯರ ಕರುಣದಿಂದ

## ಆರ‍್ಯ

ಸಿರಿಕೃಷ್ಣನು ಗೋಕುಲದೊಳಗಿರುತಿರೆ
ಪರಿ ಪರಿ ಕ್ರೀಡೆಗಳ ತೋರುತಲಿ
ಇರುತಿರಲೊಂದಿನ ಪರಮಾತ್ಮನು ಬೆಣ್ಣೆಯ
ಕರದಲಿ ಪಿಡಿಯುತ ಬರಲು

## ಕಂದ

ನೋಡುತ ಗೋಪಿಯು ಬೇಗದಿ
ಓಡುತ ಬಂದಳು ಶ್ರೀಹರಿಯೆಡೆಗೆ
ಗಾಡನೆ ಪೇಳ್ಳೈ ಕಂದನೆ
ನೀಡಿದವರ‍್ಯಾರು ನಿನಗೀ ನವನೀತ

## ಗೀತ

ಹೀಗೆ ಕೇಳಲು ಕೇಳಿ ರಂಗನು
ತೂಗಿ ಸಿರವನು ತಾಯ ಕರದನು
ಬಾಲರೊಡನೆ ಈ ಬೆಣ್ಣೆ ತಂದೆನು
ಬೇಡ ಕೋಪವು ನೋಡು ನಮಿಸುವೆ

## ಆರ‍್ಯ

ಕಳ್ಳ ಕೃಷ್ಣನೆ ಬೆಣ್ಣೆಯು ಮೇಲಿರೆ
ಸುಳ್ಳು ಹೇಳಿ ಮರೆ ಮಾಚುವರೆ
ಬಲ್ಲೆನು ನೀ ನೊಯ್ದಿಹ ಬೆಣ್ಣೆಯ ಪರಿ
ಇಲ್ಲೇ ತೋರುವೆ ತಾಳೆನಲು

ಪ್ರಿಯ, ಸಾಧು ಸಂಗವನಿತ್ತು ಹೋಗಗೊಡದಲೆ
ಮನವ ಇತರ ವಿಷಯಗಳಲ್ಲಿ ಕಾದು ಕೊಂಡಿ
ರಲಿ ಕಮಲನಾಭವಿಠ್ಠಲನು ಒಲಿದು

### ಮಂಗಳ

ಮಂಗಳ ಮದನಗೋಪಾಲ ಶ್ರೀಕೃಷ್ಣಗೆ
ಮಂಗಳ ಮಹಲಕ್ಷ್ಮಿ ರಮಣ ಶ್ರೀಹರಿಗೆ ಪ

ನಂದಗೋಪಿಯ ಮುದ್ದುಕಂದ ಗೋವಿಂದಗೆ
ಇಂದಿರೆಯರಸ ಮುಕುಂದ ಶ್ರೀಹರಿಗೆ ೧

ಕೊರಳ ಕೌಸ್ತುಭಹಾರ ಮುರಳಿ ಧರಿಸಿ ಮೆರೆವ
ಗುರುಳು ಮುಖದಿ ಹೊಳೆವ ಚಲುವ ಕೃಷ್ಣನಿಗೆ ೨

ತರಳನ ಯಶೋದೆಯು ಒರಳಿಗೆ ಕಟ್ಟಲು
ಮರವ ಮುರಿದು ಬಂದ ತರಳ ಕೃಷ್ಣನಿಗೆ ೩

ನಾರಿಯೆರಲ್ಲ ಜಲಕ್ರೀಡೆಯನಾಡಲು
ಸೀರೆಗಳನೆ ಕದ್ದ ಚೋರ ಕೃಷ್ಣನಿಗೆ ೪

ಕಮಲಾಕ್ಷ ಕೃಷ್ಣಗೆ ವಿಮಲ ಸ್ವರೂಪಗೆ
ಕಮಲನಾಭ ವಿಠ್ಠಲ ಸುರರ ಪಾಲಿಪಗೆ ೫

## ೨ ಶ್ರೀ ರಾಮಜನನ ಮತ್ತು ಸೀತಾಕಲ್ಯಾಣ

ಗಜವದನನ ಪಾದಾಂಬುಜಗಳಿಗೆರಗುವೆ
ಸುಜನರ ಪೊರೆವನೆ ಭುಜಗ ಭೂಷಣನೆ ಪ

ಪಾಶಾಂಕುಶಧರ ಮೂಷಕವಾಹನ
ದೋಷದೂರನಪಾದ ಧ್ಯಾನ ಕರುಣಿಸು ೧

ನಂಬಿ ಸ್ತುತಿಪೆ ನಿನ್ನ ಲಂಬೋದರನೆ ವರ
ಅಂಬಾತನಯನೆ ಪಾದಾಂಬುಜಕ್ಕೆರಗಿ ೨

ವರ ಕವೀಶ್ವರರಾದ ಗುರು ವಾಲ್ಮೀಕರು
ಭರದಿ ಪೇಳಿದ ರಾಮಚರಿತೆ ನುಡಿಸಲು ೩

ಲವಕುಶರಿಗೆ ರಾಮಚರಿತ್ರೆಯ ಪೇಳ್ದ
ನವನವ ಚರಿತೆಯಲರುಹಿಸಲೆನುತ ೪

ಕಡು ಹರುಷದಿ ನಿನ್ನ ಬಿಡದೆ ಪ್ರಾರ್ಥಿಸುವೆನು
ಕೊಡು ಮತಿ ಕಮಲನಾಭವಿಠ್ಠಲನಲಿ ೫

## ಆರ‍್ಯ

ಈ ಪರಿ ಗಣಪನ ಸ್ತುತಿಸುತ ಬೇಡುವೆ
ಆ ಪರಮಾತ್ಮನ ಚರಿತೆಯನು
ತಾಪಸವಂದ್ಯನ ಗುಣಗಳ ಪೊಗಳಲು
ನೀ ಪಾಲಿಸಿ ಮತಿ ಕೊಡು ಎನುತ ೧

ಒಂದು ದಿನದಿ ಸುರವೃಂದವ ಕೂಡುತ
ಇಂದ್ರಾದಿಗಳೆಲ್ಲರ ಸಹಿತ
ಬಂದರು ಸಪ್ತಋಷಿಗಳೆಲ್ಲರು ಗೋ
ವಿಂದನ ಕಾಣುವ ತವಕದಲಿ ೨

ವಾಸುಕಿ ಶಯನದಿ ಶ್ರೀಶನು ಇರುತಿರೆ
ಶ್ರೀ ಭೂ ಸತಿ ಸೇವಿತನಾಗಿ
ವಾಸುದೇವನನು ಕಾಣುತ ಹರುಷದಿ
ಸಾಸಿರನಾಮವ ಸ್ತುತಿಸಿದರು ೩

ದೋಷಿಗಳುಪಟಳದಿಂದಲಿ ಸುಜನರು
ಘಾಸಿಗೊಂಡು ಮರುಗುತಲಿಹೆವು

ಅಕಳಂಕ ಮಹಿಮಗೆ ಶುಕ ಮುನಿ ಸೇವ್ಯಗೆ
ವಿಖ್ಯಾತನಾದವನಿಗೆ ವಿಕಸಿತ ನೇತ್ರಗೆ
ಸಖಪಾರ್ಥನಿಗೊಲಿದವಗೆ
ಶ್ರೀಹರಿಗೆ ಸುರದೊರೆಗೆ
ಸುರುಸುಂದರಿಯರ್ಹರುಷದಿ ೨

ಬಗೆ ಬಗೆ ಭಕುತರ ವಿಧವಿಧದಲಿ ಕಾಯ್ವ
ಖಗವಾಹನ ಕಮಲನಾಭವಿಠ್ಠಲನಿಗೆ
ಅಗಣಿತ ಮಹಿಮ ಶ್ರೀಹರಿಗೆ
ಸುರದೊರೆಗೆ ಸಿರಿವರಗೆ
ವರ ಕೀಲಕ ವತ್ಸರದಿ ೩

ಶ್ರೀ ಕೀಲಕನಾಮ ಸಂವತ್ಸರ ಯುಗಾದಿ ಪ್ರಯುಕ್ತ ಶ್ರೀ ಪೂಜ್ಯ ಗುರುಗಳ ಅನುಗ್ರಹದಿಂದಲೂ ಶ್ರೀ ಹರಿ ವಾಯು ಗುರುಗಳ ಪ್ರೇರಣೆಯಿಂದಲೂ ಹಿರಿಯರ ಆಶೀರ್ವಾದದಿಂದಲೂ ಕೂಡಿದ ಶ್ರೀರಾಮಜನನ ಮತ್ತು ಶ್ರೀ ಸೀತಾ ಕಲ್ಯಾಣ ಎಂಬ ಪದವನ್ನು ಯಥಾನುಶಕ್ತಿ ಬರೆಯಲಾಗಿರುತ್ತೆ.

## ೩. ಶ್ರೀ ಕೃಷ್ಣಲೀಲಾ

ಗಣನಾಥ ಗಣನಾಥ
ಮಣಿದು ಬೇಡುವೆ ಅನುದಿನ ಪಾಲಿಸು ಪ

ಪಾಶಾಂಕುಶಧರ ಮೂಷಿಕವಾಹನ
ದೋಷ ದೂರನೆ ಪಾದ ಧ್ಯಾನವ ಕರುಣಿಸು ೧

ಬೇಡಿದ ವರಗಳ ನೀಡುವ ದೇವನೆ
ನಾಡೊಳು ನಮಗಿಹ ಕೇಡನೆ ಕಳೆಬೇಗ ೨

ಕಡುಹರುಷದಿ ನಿನ್ನಡಿಗಳಿಗೆರಗುವೆ
ಕೊಡುಮತಿ ಕಮಲನಾಭವಿಠ್ಠಲನಲಿ ೩

ಅಲ್ಲಿಯ ಪ್ರಜೆಗಳಿಗೆಲ್ಲವು ಸುಖಮಯ
ಒಲ್ಲರು ತಾಪತ್ರಯ ದುಃಖ
ಉಲ್ಲಾಸದಿ ಜನರೆಲ್ಲರು ಪಾಡ್ವರು
ಮಲ್ಲಮರ್ದನನ ಗುಣಗಳನು ೪

ಪೊಗಳ್ವರೆಲ್ಲ ಇಕ್ಷಾಕುವಂಶವನು
ಬಗೆಬಗೆಯಿಂ ಭಜಿಸುವ ಜನರು
ಹಗಲಿರುಳೆಡೆ ಬಿಡದಲೆ ಹರಿಧ್ಯಾನವ
ಮಿಗೆ ಸಂತೋಷದಿ ಮಾಡುವರು ೫

ರಾಮ ರಾಮ ರಘುರಾಮರಾಮ ಶ್ರೀ_
ರಾಮ ರಾಮ ದಶರಥರಾಮ
ರಾಮ ರಾಮ ಜಯರಾಮ ರಾಮ ಎಂದು
ರಾಮ ನಾಮ ಪಠಿಸುವ ಜನರು ೬

ಮಾರೀಚ ಸುಬಾಹುಗಳು ಮೊದಲಾದ
ಕ್ರೂರರಕ್ಕಸರೆಲ್ಲರ ತರಿದು
ಸಾಧು ಜನರಿಗೆ ಸನ್ಮಾರ್ಗವ ತೋರಿದ
ಶ್ರೀದ ಕಮಲನಾಭವಿಠ್ಠಲನು ೭

ಸುರರೆಲ್ಲರು ಕೂಡಿ ಮುದದಿ
ಶುಭದಿನದಿ ಬಹು ತ್ವರದಿ
ಸುರ ಸಂಪಿಗೆ ಮಳೆಗರೆಯೆ ಪ

ರಾಮಗೆ ಶುಭಗುಣಧಾಮಗೆ ರವಿಕುಲ
ಸೋಮಗೆ ರಣರಂಗಧೀರ ಶೂರನಿಗೆ
ಕಾಮಿನಿ ಮಣಿಯರು ಭರದಿ
ಹರಿ ಪಾದಕೆ ಬಹು ಮುದದಿ
ಹೂವಿನ ಮಳೆ ಸುರಿಸಿದರು ೧

ಶ್ರೀಶನೆ ಕರುಣಿಪುದೆನ್ನುತ ನುಡಿದರು
ಶೇಷಶಯನನನು ಪ್ರಾರ್ಥಿಸುತ ೪

ಕಳವಳದಿಂದಲಿ ಸುರಗಂಧರ್ವರು
ನಳಿನನಾಭನನು ಪೊಗಳುತಿರೆ
ಸುಲಲಿತ ಕಮಲನಾಭವಿಠ್ಠಲ ನಾ_
ಲಿಸಿ ಮೌನದೊಳಗೆ ಇರುತಿರಲು ೫

## ವಚನ

ಹೀಗೆಂದು ದೇವತೆಗಳೆಲ್ಲಾ ಮೊರೆ ಇಡುತಿರಲು,
ಪರಮಾತ್ಮನು ಏನೂ ಅರಿಯದವನಂತೆ ಸುಮ್ಮ
ನಿರಲು ದೇವತೆಗಳೂ ಗಂಧರ್ವರೂ ಋಷಿಗಳೂ
ಮೊದಲಾದವರು ಪುನಃ ದೇವ ದೇವನನ್ನು
ಪ್ರಾರ್ಥಿಸುವ ಬಗೆ

ಸ್ಮರಪಿತ ಲಾಲಿಸು ಮೊರೆ ಇಡುವುದನು
ತ್ವರಿತದಿ ನಮ್ಮಯ ಭಯ ಪರಿಹರಿಸು ಪ

ದುರುಳ ದೈತ್ಯರು ನಮ್ಮ ಪರಿಪರಿ ವಿಧದಲಿ
ಸ್ಮರಿಸಲಾರದ ಶ್ರಮ ಪಡಿಸುತಲಿರುವರು ೧

ಯಾಗಯಜ್ಞಗಳನು ಸಾಗದಂದದಿ ಮಾಡಿ
ಭಾಗವತರನೆಲ್ಲ ಬಾಧೆ ಪಡಿಸುವರು ೨

ಬಲದ ಕೆಚ್ಚಿನಿಂದಲಿ ಶಿವನ ಪರ್ವತವನು
ಸುಲಭದಿಂದೆತ್ತಿ ತನ್ನ ಕರವ ನೋಯಿಸಿ ಕೊಂಡ ೩

ದಶಶಿರನುಪಟಳ ದಶದಿಕ್ಕುಗಳಲ್ಲಿ
ಪಸರಿಸಿ ಭಯಚಿಂತೆಗೊಳಗಾಗಿಹೆವೊ ದೇವ ೪

ನಯದಲಿ ಲಂಕಾಪುರದಪಟ್ಟವ ಕಟ್ಟಿ
ಬಣಗು ದೈತ್ಯನ ದಶಶಿರವಿಳುಹಿದಗೆ ೧೦

ಮಾರುತನ ಸುತನ ಸಹಿತದಿ ಪುಷ್ಪಕ_
ವೇರುತ ಬರುತಿರಲು
ದೂರದಲಿಹ ಭರತಗೆ ವಾರ್ತೆ ಕಳುಹಿ
ಶ್ರೀರಘುರಾಮಯೋಧ್ಯೆಗೆ ಬಂದವಗೆ ೧೧

ಪುರಕೆ ಬಂದು ಪಟ್ಟಾಭೀಷೇಕವನಾಂತು
ಹರುಷದಿ ಸತಿ ಸಹಿತ
ಸರಸದಿ ಪ್ರಜೆಗಳ ಪರಿಪಾಲಿಸುತಿಹ
ವರ ಕಮಲನಾಭ ವಿಠ್ಠಲಗೆ ಸುದತಿಯರು ೧೨

## ಫಲಶ್ರುತಿ

### ಆರ‍್ಯ

ಗುರುಗಳು ಲವಕುಶರಿಗೆ ಪೇಳಿದ ರಾ–
ಮರ ಚರಿತೆಯ ಕೇಳುತಲವರು
ಹರುಷದಿ ಲಾಲಿಸಿ ಪಠಿಸಿದರಾಗಲೆ
ಪರಮಪಾವನ ಚರಿತೆಯನು ೧

ಹರುಷದಿ ಬರೆದೋದುತ ಕೇಳಲು ಶ್ರೀ_
ನರಹರಿ ಕರುಣದಿ ಒಲಿಯುವನು
ದುರಿತಗಳೆಲ್ಲವ ದೂರಮಾಡುತಲಿ
ಕರುಣದಿ ಕಾಪಾಡುವ ಹರಿಯು ೨

ರಾಮರ ರಾಜ್ಯದಿ ಕಾಮಕ್ರೋಧಗಳು
ನೇಮದಿಂದ ದೂರೋಡುವದು
ತಾಮಸ ಜನರಿಲ್ಲವು ಅಯೋಧ್ಯದಿ
ಹೋಮನೇಮ ಜಪ ತುಂಬಿಹುದು ೩

ಕಂಜನಾಭನೆ ಮನದಂಜಿಕೆ ಬಿಡಿಸಯ್ಯ
ಅಂಜದೆ ಪೊರೆ ಕಮಲನಾಭವಿಠ್ಠಲ ದೊರೆ ೫

## ಆರ್ಯ

ಈ ಪರಿ ಸ್ತುತಿಸುತ ಪ್ರಾರ್ಥಿಸುತಿರುತಿಹ
ಲೋಕಪಾಲಕರ ಮೊರೆಯನು
ಗೋಪತಿ ಶ್ರೀಶನು ಆಲಿಸಿ ಕೇಳುತ
ಈ ಪರಿ ಮೌನದೊಳಿರೆ ಮತ್ತೆ

ಕರಿವರದ ಪಾಲಿಸೊ ಶರಣಾಗತರನು
ಸಿರಿದೇವಿಯರಮಣ ಪ

ಪರಿಪರಿ ಕ್ಲೇಶದಿ ಮರುಗುತಲಿಹರನು
ಕರುಣದಿ ಕಾಯುವ ದೊರೆ ನೀನಲ್ಲವೆ ಅ.ಪ

ಭಯ ಭೀತರ ಭಯ ಪರಿಹರಿಸುವ ಶ್ರೀ –
ಜಯದೇವಿಯ ರಮಣ
ನಯದಿ ಬೇಡುವ ಸಜ್ಜನರ ಮೊರೆ ಕೇಳಿ
ಜಯವಿತ್ತು ಪಾಲಿಸೊ ಭಯನಿವಾರಣ ಹರಿ ೧

ಅಂಬುಧಿಶಾಯಿ ನಿನ್ನ ನಂಬಿ ಬಂದಿರುವೆವೊ
ಶಂಬರಾರಿಯ ಪಿತನೆ
ನಂಬಿದವರ ಮೊರೆ ಚಂದದಿ ಲಾಲಿಸು
ಕಂಬು ಕಂಧರ ಕಮಲಾಂಬಕ ಶ್ರೀಹರಿ ೨

ಕಡು ಜವದಲಿ ಕಯ್ಯಪಿಡಿದು ಉದ್ಧರಿಸೆಂದು
ಅಡಿಗಳಿಗೆರಗುವೆವು
ಮೃಡನ ಸಖನೆ ಕಮಲನಾಭ ವಿಠ್ಠಲ ಸ್ವಾಮಿ
ಸಡಗರದಿಂದೆಮ್ಮ ತೊಡರ ಬಿಡಿಸಿ ಕಾಯೊ ೩

ಪೃಥ್ವೀಶನ ಧನುವನು ಮುರಿದವಗೆ
ಅತಿ ಹರುಷದಿ ಜಾನಕಿಗೊಲಿದವಗೆ ೪

ಪುರಕೆ ಬಂದು ಪಟ್ಟಾಭಿಷೇಕಕೆಂದು
ದೊರೆ ದಶರಥ ನುಡಿಯೆ
ಸರುವರು ಸಂಭ್ರಮದಿಂದಿರುತಿರಲು
ವರವ ಬೇಡೆ ಕೈಕೆ ವನಕೆ ತೆರಳಿದಗೆ ೫

ಗುಹನ ಮನ್ನಿಸಿ ಭರತಗೆ ಪಾದುಕೆ ಇತ್ತ
ಇನಕುಲತಿಲಕನಿಗೆ
ಮುನಿಗಳಂತೆ ಚರಿಸಿದ ಶ್ರೀರಾಮಚಂದ್ರಗೆ
ವನದೊಳು ಸೀತೆ ಲಕ್ಷ್ಮಣರೊಡನಾಡ್ದಗೆ ೬

ವನದೊಳು ಕಾಂಚನ ಮೃಗವನೆ ಕಂಡು
ವನಿತೆಯು ಯಾಚಿಸಲು
ಘನಮೃಗ ಬೆನ್ನಟ್ಟುತ ರಾಘವ ಪೋಗಿ
ವನವನ ಚರಿಸುತ ನಡೆದ ಶ್ರೀರಾಮಗೆ ೭

ದಶರಥ ಸುತರಿಲ್ಲದ ಸಮಯದಲಿ
ದಶಶಿರ ಬರಬರುತ
ಶಶಿಮುಖಿ ಸೀತೆಯ ಕದ್ದೊಯ್ಯಲು ಶ್ರೀ_
ಶಶಿವದನೆಯನರಸುತ ಚರಿಸಿದಗೆ ೮

ವನವನ ತಿರುಗುತ ಬರುತಿರೆ ಕಂಡರು
ಘನವಹ ಕಪಿ ವರರ
ವನಜಾಕ್ಷಿಗೆ ಮುದ್ರಿಕೆ ಕಳುಹುತಲಿ
ಜನಕಜೆ ಚೂಡಾಮಣಿಗ್ರಹಿಸಿದಗೆ ೯

ವನಧಿಯ ಬಂಧಿಸಿ ಘನಕಪಿ ವರರಿಂ
ವಿನಯದ ವಿಭೀಷಣಗೆ

## ಆರ‍್ಯ

ದಶಶಿರನೆನ್ನುವ ಅಸುರನ ಬಾಧೆಗೆ
ಬಿಸುಸುಯ್ಯುತ ಬಂದಿಹೆವೀಗ
ಅಸುರನ ಭಯಗಳ ತಪ್ಪಿಸು ದೇವನೆ
ಬಿಸುಜಾಕ್ಷನೆ ಪೊರೆ ಭಕುತರನು ೧

ವಿಧ ವಿಧ ಪ್ರಾರ್ಥಿಪ ಭಕುತರ ಮೊರೆಯನು
ಮಧುಸೂದನ ಕೇಳುತ ತ್ವರದಿ
ಮುದದಿಂದಲಿ ಹೀಗೆಂದು ನುಡಿದನು
ಮಧುರವಾಣಿಯನು ನುಡಿಯುತಲೆ ೨

ಪೊಡವಿಪನುದರದಿ ಜನಿಸುತ ನಿಮ್ಮನು
ಕಡುಹರುಷದಿ ಪೊರೆಯುವೆ ನೆನಲು
ಕಡಲಶಯನ ಕಮಲನಾಭವಿಠ್ಠಲನ
ಅಡಿಗಳಿಗೆರಗುತ ವಂದಿಸುತ ೩

## ಭಾಮಿನಿ ಷಟ್ಪದಿ

ಲೋಕಪಾಲಕರೆಲ್ಲ ಹರುಷದಿ
ನಾಕಪತಿ ಮೊದಲಾದವರು ಮನ –
ದ್ವ್ಯಾಕುಲವ ಬಿಡುತಲ್ಲಿಂದ ಪೊರಟರು ಹರಿಯ ಧ್ಯಾನಿಸುತ
ಭೀಕರದ ದೈತ್ಯರನು ಗೆಲ್ಲಲು
ಶ್ರೀಕಮಲಜನಪಿತನು ದಶರಥ
ಲೋಕವಂದ್ಯನ ಗೃಹದಿ ಪುಟ್ಟಲಿ ಎಂದು

ಧರಣಿಪ ದಶರಥ ಧರಣಿಯನಾಳುತ
ಪರಮ ಸಂಭ್ರಮದಿಂದ
ತರಳರ ತೆರದಲಿ ಪ್ರಜೆಗಳ ಪಾಲಿಸಿ
ಹರುಷದಿಂದಿರುತಿರಲು ೧

ತನಯರಿಲ್ಲದೆ ಬಹುಪರಿಯಲಿ ಚಿಂತಿಸಿ
ಇನಕುಲ ವಂಶಜನು
ಮುನಿಗಳ ಋಷಿಗಳ ಕುಲ ಪುರೋಹಿತರನು
ಇನಿತು ಪೇಳಿದ ಕರೆಸಿ ೨

ಯಾತರ ಬದುಕಿದು ಯಾತಕೀ ರಾಜ್ಯವು
ಯಾತಕೀ ದೊರೆತನವು
ಯಾತಕೀ ವೈಭವ ಯಾತಕೀ ಅರಮನೆ
ಯಾತಕೀ ಸಂಪದವು ೩

ಈ ಪರಿ ಚಿಂತಿಸಿ ಯೋಜಿಪ ರಾಜನ
ತಾಪಸರರಿಯುತಲಿ
ಶ್ರೀಪತಿದಯದಿ ಪುತ್ರಕಾಮೇಷ್ಟಿಯ
ಭೂಪನೆ ಮಾಡೆನಲು ೪

ಕಡು ಹರುಷದಿ ಯಾಗವ ನಡೆಸುತ ಬಲು
ಸಡಗರ ಪಡುತಿರಲು
ಕಡಲಶಯನ ಕಮಲನಾಭವಿಠ್ಠಲ ಹರಿ
ಪೊಡವಿ ಮೇಲುದಿಸುವನು ೫

## ಕಂದ

ಪುತ್ರ ಕಾಮೇಷ್ಟಿಯ ನಡೆಸಲು
ವಸಿಷ್ಠರೆ ಮೊದಲಾದ ಋಷಿಗಳೆಲ್ಲರು ನೆರೆದು
ಪೃಥ್ವಿಪತಿಯಿಂದ ಮಾಡಿಸೆ ಸಂ
ತುಷ್ಟನಾದನು ಹರಿಯು ದೊರೆಯ ಭಕ್ತಿಗೆ ಮೆಚ್ಚಿ

ಜನಿಸಿದ ರಾಮಚಂದ್ರ ಇನಕುಲ ತಿಲಕನು
ಅನುಜ ಲಕ್ಷ್ಮಣ ಭರತ ಶತೃಘ್ನರಿಂದ ಕೂಡಿ ಪ

ಮುನಿಕುಲೋತ್ತಂಸ ಸಜ್ಜನರನು ಪೊರೆಯಲು
ಇನವಂಶಜನ ದಶರಥನುದರದಲಿ ಅ.ಪ

ರನು ಬಹು ಪ್ರಕಾರ ಉಪಚರಿಸಿ ಪೂಜಿಸಲು
ದಶರಥನು ಮಕ್ಕಳು ಸೊಸೆಯರು
ಬಳಗ ಬಂಧುಗಳೆಲ್ಲರಸಹಿತದಿ
ಪಯಣಮಾಡುತ ಬಂದು ಸೇರಲು ಅಯೋಧ್ಯಾ ಪಟ್ಟಣವ

## ಮಂಗಳ

ಮಂಗಳಂ ರಘುರಾಮಗೆ ಜಯ ಜಯ
ಮಂಗಳ ಮೂರುತಿಗೆ ಪ

ಮಂಗಳಂ ಶ್ರೀರಾಮನಿಗೆ ಜಯ
ಮಂಗಳಂ ಜನಕಾತ್ಮಜೆಗೆ ಜಯ ಅ.ಪ

ದೇವತೆಗಳ ಮೊರೆ ಲಾಲಿಸಿದೇವನು
ಭೂವರ ದಶರಥಗೆ
ಮೋಹದ ಕುವರನಾಗುದಿಸುತಲಿ
ದೇವತೆಗಳ ಋಷಿಗಳ ಭಯ ಹರಿಸಿದಗೆ ೧

ದಶರಥ ಸುತರ ನೋಡಲು ವಿಶ್ವಾಮಿತ್ರರು
ಕುಶಲದಿ ಬರುತಿರಲು
ದಶರಥ ಪುತ್ರರ ಕರೆಯಲು ಹರುಷದಿ
ಎಸೆವ ಧನುರ್ಬಾಣ ಸಹಿತ ಹೊರಟವಗೆ ೨

ಪ್ರಥಮ ಯುದ್ಧದಿ ಅಸುರೆಯ ಮಡುಹಿದಗೆ
ಪೃಥ್ವಿಲಿ ಯಜ್ಞ ಮಾಡಿಸಿದವಗೆ
ಮಿಥಿಲಾಪುರಿಯಿಂ ಲಗ್ನಪತ್ರಿಕೆ ಬರಲು
ಅತಿಶಯದಲಿ ಲಗ್ನಕೆ ಪೊರಟವಗೆ ೩

ಋಷಿಪತ್ನಿಯ ಶಾಪವ ಹರಿಸಿದಗೆ
ಮಿಥಿಲೆಗೆ ಬಂದವಗೆ

## ಆರ‍್ಯ

ನಾಲ್ಕುದಿನ ಈ ಪರಿ ವೈಭವದೊಳು
ನಾಕಪತಿಯು ಪೊಗಳುವ ತೆರದಿ
ಲೋಕೇಶನ ಲಗ್ನವ ಮಾಡುತ ಬಲು
ವೈಖರಿ ಪೇಳುವದಸದಳವು ೧

ಅಳಿಯಂದರಿಗೆ ಪರಿ ಪರಿ ರತ್ನದ
ಬಿಳಿಯ ಮುತ್ತುರತ್ನವು ಬಿಗಿದ
ನವರತ್ನದ ಕಿರೀಟ ಕುಂಡಲಗಳು
ಬಲು ವೈಭವದಿಂ ಕೊಡುತಿರಲು ೨

ಹೆಣ್ಣು ಮಕ್ಕಳಿಗೆ ಸಮ್ಮತವಾಗಿಹ
ಬಣ್ಣ ಬಣ್ಣದ ವಸ್ತುಗಳ
ಚನ್ನ ಬಂಗಾರವು ದಾಸದಾಸಿಯರನು
ಶೃಂಗಾರ ಸಹಿತ ಕೊಡುತಿರಲು ೩

ಆನೆ ಪಲ್ಲಕ್ಕಿಯು ಸಾಲು ಗಜಗಳು
ಮೇನೆಯು ತುರಗ ಪದಾತಿಗಳು
ಕಾಲಾಳುಗಳನ್ನು ಮೇರೆ ಇಲ್ಲದೆ
ದಾನಮಾಡಿದನು ದೊರೆ ತಾನು ೪

ಕಡು ಹರುಷದಿ ದಶರಥನಿಗೆ ವಂದಿಸಿ
ತಡ ಮಾಡದೆ ಜನಕನು ಮುದದಿ
ಕಡಲಶಯನ ಕಮಲನಾಭವಿಠ್ಠಲನ
ಬಿಡದೆ ಧ್ಯಾನಿಸಿ ಉಪಚರಿಸಿದನು ೫

## ಭಾಮಿನಿ ಷಟ್ಪದಿ

ಜನಕರಾಯನು ಘನ ಹರುಷದಲಿ
ಜನಕಜಾತೆಯ ಮಾವ ಅತ್ತೆಯು_

ವರ ಪುನರ್ವಸು ನಕ್ಷತ್ರದಿ ರಘುವರ
ಸುರರು ಸ್ತುತಿಸಿ ಸ್ತೋತ್ರವ ಮಾಡುತಿರಲು
ಪರಮ ಸಂಭ್ರಮದಿ ಮುನಿವರರೆಲ್ಲ ಸ್ತುತಿಸಲು
ಗರುಡ ಗಮನ ಜನಿಸಿದ ಶುಭ ಮುಹೂರ್ತದಲಿ ೧

ಗಂಗಾದಿ ಸರ್ವತೀರ್ಥಗಳುಬ್ಬಿ ಹರಿಯಲು
ಗಂಗಾಜನಕನ ಸ್ತುತಿಸಿ ಪಾಡುತಿರಲು
ಸಂಗರಹಿತ ಸರ್ವೋತ್ತಮ ಜನಿಸಿದನೆಂದು
ಮಂಗಳವಾದ್ಯ ಭೋರ್ಗರೆಯುತಲಿರಲು ೨

ನವಮಿ ಚೈತ್ರ ಶುದ್ಧದಲಿ ಜನಿಸೆ ರಾಮ
ಪ್ರೇಮದಿ ದಶರಥ ಬಹುದಾನಗಳ
ಭೌಮರಾಮನು ಜನಿಸಿದ ಸಂತೋಷದಿ
ಭೂಮಿ ಕನಕ ದಾನ ಮಾಡಿದನು ೩

ದಶರಥ ಸುತರು ನಾಲ್ವರು ಜನಿಸಲು
ಎಸೆವ ಸಂಭ್ರಮದಿಂದ ರಾಜ ಹರುಷದಿ
ದಶದಿಕ್ಕುಗಳಿಗೆ ತಿಳಿಸಲು ಶುಭವಾರ್ತೆ
ವಸುಧೀಶ ಹರುಷದಿ ಮಕ್ಕಳ ನೋಡಲು ೪

ಸಡಗರದಿಂದ ತುಂಬುರುನಾರದರೆಲ್ಲ
ಕಡು ಹರುಷದಿ ಕುಣಿದಾಡಿ ಪಾಡಿದರು
ಪೊಡವಿಗೊಡೆಯ ಕಮಲನಾಭವಿಠ್ಠಲನು
ದೃಢಭಕುತರ ಮನದಭಿಲಾಷೆ ಸಲಿಸುತ ೫

## ಆರ‍್ಯ

ಸುರರೆಲ್ಲರು ಸಂತೋಷವ ಪಡುತಿರೆ
ಸುರಿಸುತ ಪುಷ್ಪದ ವೃಷ್ಟಿಯನು
ಸುರಗಂಧರ್ವರು ಗಾನದಿ ಕುಣಿದರು
ಧರಣಿಪ ಸಂತೋಷದಿ ನಲಿಯೆ ೧

ದಶರಥರಾಯನ ಸತಿ ಕೌಸಲ್ಯೆಯು
ಶಶಿಮುಖಿ ಕೈಕೆ ಸುಮಿತ್ರೆಯರು
ದಶರಾತ್ರಿಯು ಕಳೆಯಲು ತಮ್ಮ ಮಕ್ಕಳ
ಮಿಸುಣಿ ಮಾಣಿಕ್ಯದ ತೊಟ್ಟಿಲೊಳಿಡಲು ೨

ಊರಿನ ಸುವಾಸಿನಿಯರೆಲ್ಲರ ಕರೆಸುತ
ಭಾರಿ ಚಿನ್ನ ವಜ್ರದ ತೊಟ್ಟಿಲ ತರಿಸಿ
ನಾರಿಯರೆಲ್ಲರು ಅಲಂಕರಿಸಿದರು
ನಾರಾಯಣನ ತೊಟ್ಟಿಲುತ್ಸವವೆನುತ ೩

ಜೋ ಜೋ ಜೋ ರವಿಕುಲ ರಘುರಾಮ
ಸುದ್ಗುಣ ಗಣ ಧಾಮ ಪ

ಕೌಸಲ್ಯಾ ದೇವಿಯ ಕಂದನೆ ಜೋ ಜೋ
ಕೌಶಿಕ ಯಜ್ಞವ ಕಾಯ್ದನೆ ಜೋ ಜೋ
ಧ್ವಂಸ ಮಾಡಿದೆ ಖಳತತಿಯನು ಜೋ ರಘು_
ವಂಶಾಧಿಪನಾಗಿ ಮೆರೆದಗೆ ಜೋ ಜೋ ೧

ಸೀತಾದೇವಿ ಕೈ ಪಿಡಿದಗೆ ಜೋ ಜೋ
ಧೂರ್ತರಾವಣನ ಕೊಂದಗೆ ಜೋ ಜೋ
ಆರ್ತವಿಭೀಷಣಗೊಲಿದಗೆ ಜೋ ಜೋ
ಮಾತರಿಶ್ವನ ಒಡೆಯಗೆ ಜೋ ಜೋ ೨

ಕಮಲ ಪತ್ರದಳಾಕ್ಷಗೆ ಜೋ ಜೋ
ಕಮಲ ಪುಷ್ಪಮಾಲೆ ಧರಿಸಿದೆ ಜೋ ಜೋ
ಕಮಲಾಕಾಂತ ಶ್ರೀರಾಮ ಜೋ ಜೋ
ಕಮಲನಾಭ ವಿಠ್ಠಲನಿಗೆ ಜೋ ಜೋ ೩

ಮಂಗಳಾಷ್ಟಕ ಪೇಳುತಿರಲು ವಸಿಷ್ಟರು
ಮಂಗಳ ಸೂತ್ರ ಕಟ್ಟಿದರಾಮ ನಗುತಲಿ ೩

ಪಂಕಜಾಕ್ಷೇರ ಸಹಿತ ಕಂಕಣ ಕಟ್ಟುತ
ಬಿಂಕದಿಂದುರುಟಣೆ ಮಾಡಿಸಿ ಹರುಷದಿ ೪

ಲಾಜಾಹೋಮವ ಕಂಕಣ ಬಿಚ್ಚಿ
ರಾಜಿಪ ಹರಿಭೂಮ ಮೋಜಾಗಿ ನಡೆಸುತ್ತ ೫

ನಾಕಬಲಿಯ ಮುಗಿಸಿ ನಾಗವೇಣಿಯ ಕೂಡಿ
ಬೇಗದಿಂದೋಕುಳಿಗಳನಾಡಿಸಿ ಹರುಷದಿ ೬

ಕಡು ಬೇಗದಲಿ ಕಮಲನಾಭವಿಠ್ಠಲ ಕನ್ಯಾ
ಮಡದಿಯ ಸಹಿತದಿ ನಡಿಯೆ ದೇವರ ಗೃಹಕೆ ೭

**ಆರ್ಯ**

ವರ ಕನ್ನಿಕೆಯರು ಹರಿಯ ದರುಶನಕೆ
ಬರೆ ಸುಂದರಿಯರು ಬಾಗಿಲು ತಡೆದು
ಮದವಣಿಗರ ಕಯ್ಯಿಂದವರವರ
ಹೆಸರುಗಳನು ಹೇಳಿಸಿ ನಗುತಿರಲು

**ಕಂದ**

ಈ ಪರಿ ಸೀತೆಯ ಸಖಿಯರು ಅ–
ನೇಕ ಪರಿಹಾಸ್ಯಗಳಾಡುತ ಸಂಭ್ರಮದಿ
ಪ್ರೀತಿಲಿ ಕಳುಹಲು ಬೇಗನೆ
ಆ ತರುಣಿಮಣಿಯರು ಸೀತೆಯ ನೋಡುತಲಿರಲು

ನಾರದರು ಗಾಲವರು ಹರಿಪುರ
ದ್ವಾರದ ಬಳಿಯಲಿ ಬಂದು ನಿಲ್ಲುತ
ಮಾರಜನಕನ ನೋಡಲು ನುಡಿದರು
ನಾರದರೀ ಪರಿಯ ೧೫

ನಾನಿಲ್ಲಿಯೆ ಕುಳಿತಿರುವೆನು ಮುನಿಗಳೆ
ಸಾನುರಾಗದಿ ಎಲ್ಲವ ಪೇಳಿ
ದಾನವಾಂತಕನಿಂದ ಅಭಯವ
ಧ್ಯಾನಿಸಿ ಪಡೆಯಿರೆಂದು ೧೬

ಕಮಲನಾಭ ವಿಠ್ಠಲನ ಪಾಡಿ
ಶ್ರಮ ಪರಿಹರಿಸೆನ್ನುತ ಕರ ಮುಗಿದು
ನಮಿಸಿ ಸ್ತುತಿ ಮಾಡುತ ಪೊಗಳಿದರು
ರಮೆಯರಸನ ಪಾಡಿ ೧೭

## ಆರ‍್ಯ

ಹೀಗೆ ಗಾಲವರ ಹರಿ ಬಳಿ ಕಳುಹಲು
ಬೇಗದಿ ಬರುತಲಿ ನೋಡಿದರು
ಭೋಗಿಶಯನ ಮಲಗಿರಲಾನಂದದಿ
ನಾಗವೇಣಿಯರು ಸೇವಿಸುತಿರಲು ೧

ಬಾಗಿ ವಂದನೆಯ ಮಾಡುತ ನಿಂತರು
ಯೋಗಿವರರು ಭಕ್ತಿಯೊಳಗಾ
ಸಾಗರಶಯನನ ಸ್ತುತಿಸಿದರಾಗಲೆ
ಆ ಗಾಲವರತಿ ವಿನಯದಲಿ ೨

ಪಾಹಿ ಪಾಹಿ ಕೇಶವ ಪರಮಾತ್ಮ ಮಾಧವ
ದುರಿತದೂರನೆ ಹರಿ ಮೊರೆ ಹೊಕ್ಕವರ ಕಾವ ಪ

ವ್ಯಾಳಶಯನ ಕೃಷ್ಣ ಮಾವಮರ್ದನ ಕೃಷ್ಣ ಮೂರ್ತಿಯನು
ಕಳ್ಳತನದಲಿ ಬೆಣ್ಣೆಸವಿದ ನವನೀತಧರ ಕೃಷ್ಣಮೂರ್ತಿಯನು
ಎಳೆ ಬೆಳದಿಂಗಳೊಳು ನಲಿದಾಡಿದ ತಾಂಡವ ಕೃಷ್ಣಮೂರ್ತಿಯ
ಶಳದು ಕುಬುಜೆಯ ಡೊಂಕು ಹರಿಸಿ ಕಾಯ್ದ ಕೃಷ್ಣಮೂರ್ತಿಯ
ಥಳಥಳಿಪ ವಜ್ರದಾಭರಣಗಳಿಂದ ಮೆರೆಯುವ
ಸುರರೊಡೆಯ ಶ್ರೀ ದೇವ ದೇವನ ಚಲುವ
ಮೂರುತಿ ವಿಶ್ವಮಯನ
ಸ್ಮರಿಸುತಲಿ ಕೈ ಮುಗಿಯುವ ಸಮಯದಿ ೮

ಶೌನಕ ಶುಕಾದಿ ಋಷಿವರರೆಲ್ಲ ಒಂದಾಗಿ ಹರಿ ವಿಶ್ವವ್ಯಾಪಕನೆಂದೆನುತ
ಮೌನದಿಂ ಸ್ಮರಿಸಿ ಅಚ್ಯುತನೆಂದು ಪೊಗಳೆ ಅತ್ರಿ ಗೌತಮರು
ಧ್ಯಾನವ ಮಾಳ್ಪ ವಸಿಷ್ಟ ವಿಶ್ವಾಮಿತ್ರ ಜಮದಗ್ನಿ ಕಶ್ಯಪರು
ದಾನಶೀಲರು ಜಗದಲಿ ವಾಲ್ಮೀಕ ಭರದ್ವಾಜರು ಹರಿಯ ಸ್ಮರಿಸುವರು
ಮನನಶೀಲರು ಹರಿಗೆ ಅರ್ಘ್ಯಪಾದ್ಯಾಚಮನಗಳ ಮಾಡುವರು
ಧ್ಯಾನಿಸುತ ಸರ್ವಜ್ಞ ಮೂರ್ತಿಗೆ ಶೋಡಶೋಪಚಾರಗಳ ಮಾಳ್ಪರು
ಶ್ರೀನಿಧಿಗೆ ಮಂಗಳಾರತಿ ಮಾಳ್ಪೋರೆಂದೆನುತ
ಧ್ಯಾನಿಸುತಿರುವ ಸಮಯದಿ ೯

ಮುತ್ತಿನ ಸರ ವಕ್ಷಸ್ಥಳದಿ ಕೌಸ್ತುಭಹಾರ ರತ್ನದ ಸರ
ಪದಕಂಗಳ್ಒಳೆಯುತಲಿ
ರತ್ನಮಾಲೆಗಳ್ಒಳೆಯೆ ನಕ್ಷತ್ರಮಾಲೆಗಳ್ಒಳೆಯುತಲಿ
ಕೆತ್ತಿದಡ್ಡಿಕಿ ಸರಿಗಿ ಏಕಾವಳಿಯ ಸರಗಳ್ಒಳೆಯುತಲಿ
ಹತ್ತು ಬೆರಳಿಗೆ ಉಂಗುರ ಹಸ್ತ ಕಡಗವು ವಂಕಿ ವಲಿಯುತಲಿ
ರತ್ನ ಕೆತ್ತಿದ ಕರ್ನಕುಂಡಲಗಳೊಪ್ಪುತಿರೆ ಸೊಬಗಿಲಿ
ಮುತ್ತು ರತ್ನ ಕಿರೀಟ ಸಿರದಲಿ ವಿಸ್ತರದಿ ಝಗ
ಝಗನೆ ಹೊಳೆಯಲು
ಕಸ್ತೂರಿಯ ತಿಲಕವನು ಫಣೆಯಲಿ ಅರ್ಥಿಯಿಂದ
ಇಡುತಿರುವ ಸಮಯದಿ ೧೦

ಜನಕರಾಜ ಕಮಲನಾಭ ವಿ_
ಠ್ಠಲನ ನೋಡುತ
ಮನದಿ ಹರುಷ ಪಡುತಲಿ ಶ್ರೀ_
ಹರಿಯ ಸ್ಮರಿಸುತ ೫

## ಆರ‍್ಯ

ಜನಕ ಭೂಪಾಲನು ಅಳಿಯನ ನೋಡುತ
ಘನ ಹರುಷದಲಿ ನಲಿದಾಡಿ
ಇನಕುಲ ತಿಲಕನ ಬಳಿಯಲಿ ನಿಲ್ಲುತ
ಮನೆಗೆ ಕರೆಯೆ ಬಹು ಸಂಭ್ರಮದಿ ೧

ಆನೆ ಪಲ್ಲಕ್ಕಿಯು ಕಾಲಾಳುಗಳನು
ಮೇನೆ ಮೊದಲು ವಾಹನ ಸಹಿತ
ಮೇಳ ವಾದ್ಯಗಳ ಸಹಿತದಿ ವರನನು
ಬಹಳ ವೈಭವದಿ ಕರೆತರಲು ೨

ಮಂಗಳ ವಾದ್ಯಗಳಿಂದಲಿ ರಾಜನು
ಅಂಗನೆ ಮಣಿಯೊಡಗೂಡುತಲಿ
ರಂಗು ಮಾಣಿಕ್ಯದ ಪೀಠದಿ ಕೂಡಿಸಿ ಪಾ_
ದಂಗಳ ತೊಳೆದನು ಅಳಿಯನಿಗೆ ೩

ದಾನವ ಮಾಡಿದನು ಮಾನಿತಾ ಕನ್ಯಾ_
ದಾನವ ಮಾಡಿದನು ಪ

ವರನ ಪೂಜಿಸಿ ಪರಿ ಪರಿ ವಸ್ತ್ರಾಭರಣವು
ಕೊಡುತ ವಿಚಿತ್ರದಿ ವರದಕ್ಷಿಣೆಯ ಕೊಟ್ಟು ೧

ಗಂಗೆಯುದುಕದಿ ಪಾದಂಗಳ ತೊಳೆಯುತ್ತ
ಕಂಗೊಳಿಸುವ ರತ್ನದುಂಗುರಗಳ ಕೊಟ್ಟು ೨

### ಆರ್ಯ

ಅತಿಶಯದಲಿ ದಶರಥ ಪುರೋಹಿತರನು
ಹಿತದಿ ಕರೆಸಿದ ತನ್ನ ಪುತ್ರರಿಗೆ
ಜೊತೆಯಲಿ ಚೌಲುಪನಯನವ ನಡೆಸಿ
ಮತಿವಂತರ ಮಾಡುತಲಿರಲು ೧

ಚೈತ್ರ ಶುದ್ಧನವಮಿಲಿ ಜನಿಸಿದನೆಂದು
ಚಿತ್ತ ಸಂಭ್ರಮದಿ ದಶರಥನು
ಅರ್ಥಿಲಿ ಶ್ರೀ ರಘುರಾಮಚಂದ್ರ ನೆಂ_
ದಿಟ್ಟರು ನಾಮವ ಹರುಷದಲಿ ೨

ಬಾಲಲೀಲೆಗಳ ತೋರುತ ನಲಿದರು
ಶೀಲ ಗುಣಪೂರ್ಣ ಬಾಲಕರು
ಲೋಲ ರಾಮ ಲಕ್ಷ್ಮಣ ಭರತ ಶತ್ರುಘ್ನರು
ಕಾಲಕಾಲಕೆ ಹರುಷವ ಕೊಡುತ ೩

ಚಿಣ್ಣಿ ಕೋಲು ಚಂಡು ಬುಗುರಿಗಳಿಂದಲಿ
ಬಣ್ಣ ಬಣ್ಣದಾಟಗಳಾಡೆ
ಸಣ್ಣ ಬಾಲಕರು ಮಾತಾಪಿತೃಗಳಿಗೆ
ಚನ್ನವಾಗಿ ಹರುಷವ ಕೊಡುತ ೪

ಬಗೆ ಬಗೆ ಆಟಗಳಾಡುತ ಬೆಳೆದರು
ಮಿಗೆ ಸಂತೋಷದಿ ಬಾಲಕರು
ಖಗವಾಹನ ಕಮಲನಾಭ ವಿಠ್ಠಲನ
ನಗೆ ಮುಖ ನೋಡಲು ಬಂದ ಮುನಿವರನು ೫

### ಕಂದ

ವಿಶ್ವಾಮಿತ್ರರು ಬರುತಲಿ
ಅಚ್ಚರಿಯಿಂದ ನೋಡುತ ಬಾಲಕರ

ಅರ್ಥಿಲಿ ಕೇಳುತ ರಾಜನ
ಪುತ್ರರನು ಕಳುಹಬೇಕೆಂದು ಕೇಳುತಲಿರಲು

ಕಳುಹಬೇಕೊ ದೊರೆಯೆ ನಿನ್ನ
ತರಳರೆನ್ನ ಜೊತೆಯಲಿ ಪ

ಘನ ಮಹಿಮನೆ ಎನ್ನ ವಾಕ್ಯ
ಇನ ಕುಲೇಂದ್ರ ನಡೆಸಬೇಕೊ ಅ.ಪ

ವನದಿ ಯಾಗ ಮಾಡುತ್ತಿರಲು
ಘನ ರಕ್ಕಸರು ವಿಘ್ನವ
ಮನಕೆ ಬಂದ ತೆರದಿ ಮಾಡಿ
ಇನ ಕುಲೇಂದ್ರ ನಲಿಯುತಿಹರು ೧

ಜಾಣ ವಿದ್ಯೆಯಲಿ ಬಹು ಪ್ರ_
ವೀಣರಾದ ಮಕ್ಕಳ
ಜಾಣ ದೊರೆಯೆ ಕಳುಹು ಧನು_
ರ್ಬಾಣ ಸಹಿತ ಮರೆಯದೆ ೨

ಸೃಷ್ಟಿಪತಿಯು ನಿನ್ನ ಗೃಹದಿ
ಪುತ್ರನೆನಿಸಿ ಕೊಂಡಿಹ
ಶ್ರೇಷ್ಠ ತಂದೆ ಕಮಲನಾಭ_
ವಿಠ್ಠಲನೆಂದು ಸ್ಮರಿಸುತ ೩

## ಭಾಮಿನಿ ಷಟ್ಪದಿ

ಮುನಿಯ ಮಾತನು ಕೇಳಿ ನೃಪತಿಯು
ವನಿತೆಯರ ಬಳಿ ಬಂದು ಪೇಳಲು
ಇನ ಕುಲೇಂದ್ರನ ಕಳುಹಬೇಕೆಂದೆನುತ ಪೇಳುತಿರೆ
ಮನದಿ ಚಿಂತಿಸಿ ವ್ಯಾಕುಲದಿ ಕೌ_
ಸಲ್ಯೆ ನುಡಿದಳು ಚಿಂತೆಯಿಂದಲಿ
ಘನಮಹಿಮ ಶ್ರೀ ರಾಮಚಂದ್ರನ ಕಳುಹಲಾರೆನೆನೆ

## ಕಂದ

ಧನುವನೆತ್ತಿನಿಲ್ಲಲು ರಘುರಾಮನು
ವನಜಾಕ್ಷಿಯು ಹರುಷವ ಪಡುತ
ಇನಕುಲತಿಲಕನ ಕೊರಳಿಗೆ
ಘನಪುಷ್ಪದ ಮಾಲೆಯನ್ನಲಂಕರಿಸಿದಳು

ಜನಕ ಸುತೆಯು ಘನ ಹರುಷದಿ ಇನಕುಲೇಂದ್ರಗೆ
ವನಜ ಕುಸುಮಗಳನು ಕಟ್ಟಿ ಹಾರಹಾಕಲು

ಪ

ಮರುಗ ಮಲ್ಲಿಗೆ ಸುರಗಿ ಸಂಪಿಗೆ
ಪರಿಪರಿಯ ಪುಷ್ಪದಿ
ಸರಗಳನ್ನೆ ಕಟ್ಟಿ ಪ್ರೇಮದಿ
ರಘುವರನಿಗೆ ಹಾಕಲು ೧

ಊರ್ಮಿಳೆಯು ನಸುನಗುತ ಲ_
ಕ್ಷ್ಮಣನ ಕೊರಳಿಗೆ
ತೋರ ಪುಷ್ಪದ ಮಾಲೆಗಳನು
ಹಾಕಿ ನಲಿಯಲು ೨

ಭರತ ಶತ್ರುಘ್ನರಿಗೆ ಮಾಂಡವಿ
ಶ್ರುತಕೀರ್ತಿಯರು ಹರುಷದಿ
ವರ ಸುವರ್ಣಪುಷ್ಪದಿ ರಚಿಸಿದ
ಮಾಲೆ ಹಾಕಲು ೩

ದಶರಥ ಕೌಸಲ್ಯೆ ಕೈಕೇ_
ಯರು ಹರುಷದಿ
ಸತಿ ಸೌಮಿತ್ರೆಯರು ಪುತ್ರರ ಸೊಸೆಯರ
ನೋಡಿ ಹರುಷ ಪಡುತಿರೆ ೪

ಗುರುಳು ಕೂದಲಿಂದ್ಹೊಳೆವ ಸಿರವು
ಹೆರಳು ಬಂಗಾರಗಳು ಹೊಳೆಯೆ
ಅರಳು ಮಲ್ಲಿಗೆ ಮುಡಿದು ಬೈತಲೆ
ಸರಳವಾಗೆ ಶೋಭಿಸುವದು ೧೦

ಮಂಗಳಾಂಗಿ ಸರ್ವ ಮಂಗಳೋ_
ಪಾಂಗದಿಂದ ಶೋಭಿಸುವಳು
ಶೃಂಗಾರದ ಶ್ರೀ ಲಕ್ಷ್ಮಿದೇವಿ
ಭೃಂಗ ಕುಂತಳೆ ವೈದೇಹಿ ಎನಲು ೧೧

ಇಷ್ಟು ವರ್ಣನೆ ಕೇಳಿ ರಾಮ
ಅಟ್ಟಹಾಸದಿಂದ ನಗುತ
ಇಷ್ಟು ಯಾರ ವರ್ಣನೆ ಎನಲು
ಶ್ರೇಷ್ಠರಾಮರ ಪಟ್ಟದರಸಿ ಎನಲು ೧೨

ದಿಟ್ಟ ರಾಮಚಂದ್ರ ಧನುವ
ಮೆಟ್ಟಿ ಮುರಿದು ಮನದಿ ಹರುಷ
ಪಟ್ಟು ಸ್ತುತಿಸೆ ಕಮಲನಾಭ_
ವಿಠ್ಠಲನ ಪೊಗಳೆ ಮುದದಿ ೧೩

## ಆರ‍್ಯ

ಜನಕ ರಾಜನು ಹರುಷವ ಪಡುತ
ಇನಕುಲ ತಿಲಕನ ನೋಡುತಿರೆ
ಕಣದಲಿ ಧನುವನು ಬಾಗಿಸೆ ಗಜವು
ಕದಳಿ ಮರವ ಮುರಿದಂದದಲಿ ೧

ಸುರರೆಲ್ಲರು ಜಯ ಜಯವೆನ್ನುತಲಿ
ಸುರಿಸಿ ಪುಷ್ಪಮಂತ್ರಾಕ್ಷತೆಯ
ಗುರುಗಳು ಹರುಷಿಸೆ ಸಭೆ ಮೌನದೊಳಿರೆ
ಸರಸಿಜಾಕ್ಷಿ ಜಾನಕಿ ನಗುತ ೨

## ವಚನ

ದಶರಥನು ಪತ್ನಿಯರ ಬೇಗ
ಒಡಂಬಡಿಸಿ ತನ್ನತನಯರಿಗೆ ಶೃಂಗರಿಸಿ
ಆಗ ನವರತ್ನದಾರುತಿಗಳನೆ ಬೆಳಗುತ್ತ
ಹೋಗಿ ಬನ್ನಿರೆಂದು ಪುತ್ರರನೆ ಬಿಗಿದಪ್ಪಿ
ಬಾಗಿ ನಮಿಸುತ್ತ ವಿಶ್ವಾಮಿತ್ರರಡಿಗೆರಗುತಲೆ
ಬೇಗ ಹರಕೆಯ ಕೊಂಡು ಆಗ ಬೀಳ್ಕೊಟ್ಟರವರ

## ಕಂದ

ದಶರಥ ಸುತರನು ಕೂಡುತ
ಅತಿ ಹರುಷದಿ ವಿಶ್ವಾಮಿತ್ರರು ನಲಿದು
ಕುಶಲದಿ ಮನ್ನಿಸಿ ನುಡಿಯುತ
ಹಿತದಲಿ ಕರತರುತಲಿದ್ದರು ಮುನಿಯು

ಬಾರಯ್ಯ ಶ್ರೀರಾಮಚಂದ್ರ ಭಕ್ತರ ಸುರಧೇನು
ಭಾಗವತರ ಪ್ರಿಯ ಬಾಗಿ ನಮಿಸುವೆನು ಪ

ಬಾರೊ ದಶರಥ ವರ ಸುಪುತ್ರನೆ
ಬಾರೊ ಕೌಸಲ್ಯೆಯ ಕುಮಾರನೆ
ಬಾರೊ ಕೌಶಿಕ ಯಜ್ಞ ಪಾಲನೆ
ಬಾರೊ ರಘುಕುಲ ರಾಮುಚಂದ್ರನೆ ಅ.ಪ

ಎಳೆಯ ತಳಿರು ಪೋಲ್ವ
ಪೊಳೆವ ಪಾದಗಳಿಂದ
ಇಳೆಯ ಪಾವನ ಮಾಡಿದ ಪಾದದಿ
ಥಳಥಳಿಸುವ ದಿವ್ಯ ಚರಣ ಕಮಲದಿಂದ
ಚಲುವ ಗಂಗೆಯ ಪೆತ್ತ ಹೊಳೆವ ಪಾದಂಗುಷ್ಟದಿ

ಅಂಬುಜಾಕ್ಷಿ ಕಾಲು ಬಾಳೆ
ಕಂಬದಂತೆ ಶೋಭಿಸುವದು
ಸಂಭ್ರಮದಲಿ ಕಾಂಬ ನಡುವು
ಸಿಂಹ ನಡುವಿನಂತಿಹುದು ೪

ಆನೆಯ ಸೊಂಡಿಲನ್ನು ಪೋಲ್ವ
ಜಾಣೆ ಜಾನಕಿ ಕರದ್ವಯಗಳು
ಬಾಳೆ ಎಲೆಯು ಪೋಲುತಿರುವ
ತೆಳ್ಳನ್ನೊಳೆವ ಉದರ ಭಾವ ೫

ಅಂಬುಜಾಕ್ಷಿ ಮುಖವು ಪೂರ್ಣ_
ಚಂದ್ರನಂತೆ ಹೊಳೆಯುತಿಹುದು
ಕಂಗಳ ಕಾಂತಿಯನ್ನು ನೋಡೆ
ತುಂಬಿ ಸೂಸುತಿರುವ ಕಳೆಯು ೬

ಕಾಮನ ಬಿಲ್ಲುಗಳ ಪೋಲ್ವ
ಕಾಮಿನಿ ಹುಬ್ಬುಗಳ ಮಾಟ
ಪ್ರೇಮ ತೋರುತಿರುವ ಕರ್ಣ
ಹೇಮಮಯದಿ ಶೋಭಿಸುವದು ೭

ಸಂಪಿಗೆ ಹೂ ಪೋಲುತಿರುವ
ಶ್ರೀಕಾಂತಳ ನಾಸಿಕದ ಭಾವ
ರಂಗು ತುಟಿಯ ದಾಳಿಂಬ ಬೀಜ
ದಂತೆ ಶೋಭಿಪ ದಂತ ಪಂಕ್ತಿಯು ೮

ಅಂಬುಜಾಕ್ಷಿ ಕಂಠ ಮಾಟ
ಚಂದ್ರಬಿಂಬ ಪೋಲುತಿಹುದು
ಮಂದಹಾಸ ನಗೆಯ ಮುಖವು
ಚಂದ ತೋರುವ ಫಣೆಯ ಭಾವ ೯

ಘಲುರು ಘಲುರೆಂದೆನುವ ಪಾದದ
ಚಲುವನಾದದಿ ಮೆರೆವ ಚಂದದ
ಸುಳಿಯ ಪಲ್ಗಳ ಚಲುವ ನಗೆ ಮುಖ
ನಳಿನನಾಭನೆ ಭವವಿದೂರನೆ ೧

ಮೆಲ್ಲಮೆಲ್ಲನೆ ಬಾರೊ ಪುಲ್ಲಲೋಚನ ದೇವ
ಸೊಲ್ಲುಲಾಲಿಸಿ ಭಕ್ತರೆಲ್ಲರ ಸಲಹುವ
ಸೊಲ್ಲು ಸೊಲ್ಲಿಗೆ ಸುರರೆಲ್ಲರು ಸ್ತುತಿಸುವರೊ
ಚಲ್ವ ಶ್ರೀರಾಮಚಂದ್ರಮೆಲ್ಲಡಿ ಇಡುತಲಿ
ಮಲ್ಲಿಗೆಯ ವನಗಳಲಿ ದುಂಬಿಯು
ನಿಲ್ಲದಲೆ ರಾಗವನೆ ಪಾಡುತ
ಪುಲ್ಲಲೋಚನ ನಿನ್ನ ಸೊಬಗನು
ಕಣ್ಣಿನಲಿ ಕಾಣುವೆ ಎನುತಿಹವು ೨

ಬಗೆ ಬಗೆ ಭಕುತರು ವಿಧ ವಿಧ ಸ್ತೋತ್ರದಿ
ಪೊಗಳಿ ಸ್ತುತಿಸುವರೊ ರಘುವರನೆ
ಅಗಣಿತ ಮಹಿಮನೆ ಸುಗುಣನೆ ನಿನ್ನನು
ನಿಗಮವೇದ್ಯನೆ ಮಹಮಹಿಮೆ ಪೊಗಳುವರಯ್ಯ
ಜಗದವಂದ್ಯನೆ ಅಘವಿದೂರನೆ
ತ್ರಿಜಗಪೂಜ್ಯನೆ ಸುಗುಣರಾಮನೆ
ಖಗವಾಹನ ಕಮಲನಾಭವಿಠ್ಠಲನೆ
ಬಗೆ ಬಗೆಯ ಭಕುತರನು ಪೊರೆವನೆ ೩

## ಕಂದ

ಹೀಗೆಂದು ರಾಮನ ಪೊಗಳುತ
ಬಾಗಿ ಬಳುಕುತ ನಮಿಸುತಡಿಗಡಿಗೆ
ಬೇಗದಿ ತಮ್ಮಾಶ್ರಮಕೆ ಬರಲು
ಜಾಗು ಮಾಡದೆ ತಾಟಕಿಯನು ವಧಿಸುತಿರೆ ೪

ತಡೆಯದೆ ಧನುವೆತ್ತುವೆ ನೀ ಕ್ಷಣದಲಿ
ಬಿಡದೆ ಸೀತೆ ಚಲುವಿಕೆ ಪೇಳು

## ಕಂದ

ಹೀಗೆಂದು ನುಡಿಯಲು ರಾಘವ
ಆಗ ಕೇಳುತ ಲಕ್ಷ್ಮಣ ಮನದಿ ಯೋಚಿಸಲು
ಆ ಬಗೆ ತಿಳಿದು ಶ್ರೀರಾಮನು
ಹೀಗೆಂದು ನುಡಿದ ಸೌಮಿತ್ರಿಯೊಡನೆ

## ಆರ್ಯ

ತೆರೆಯ ಮರೆಯಲಿ ಜಾನಕಿ ಇರುತಿರೆ
ಅರಿತು ಪೇಳ್ವುದು ಚಲ್ವಿಕೆಯ
ಸರಿ ಬಂದರೆ ಎನ ಮನಸಿಗೆ ಧನುವನು
ಅರೆ ನಿಮಿಷದಿ ಬಾಗಿಪೆನೆನಲು

ಹರಿಯ ನುಡಿಯ ಕೇಳಿ ತ್ವರದಿ
ವರ ಸೌಮಿತ್ರಿ ಹರುಷದಿಂದ
ಪರಮ ಮಂಗಳಕರದ ವಾಕ್ಯ
ಅರುಹಿಸಲಿ ಶ್ರೀ ಹರಿಯು ಎನುತ ೧

ತೆರೆಯ ಮರೆಯಲಿಹ ಜಾನಕಿಯ
ಚರಣಗಳನೆ ಸ್ಮರಿಸಿ ಮನದಿ
ನಿರುತ ಮನದಿ ಧ್ಯಾನ ಮಾಳ್ಪ
ವರ ಮಹಾಲಕ್ಷ್ಮಿಯನ್ನು ಸ್ಮರಿಸಿ ೨

ವರ ಅಂಗುಷ್ಟ ನಖದಿ ಕಾಂತಿ
ತರಣಿ ಬಿಂಬದಂತೆ ಹೊಳೆಯೆ
ಪರಮ ಪಾವನ ಪಾದ ಮಾವಿನ
ತಳಿರು ಪೋಲುವುದೆಂದು ನುಡಿದು ೩

## ಭಾಮಿನಿ ಷಟ್ಪದಿ

ಯಾಗವನು ನಡಸಿದರು ಹರುಷದಿ
ಯೋಗಿವರರು ನಿರ್ವಿಘ್ನದಿಂದಲಿ
ಭಾಗವತರ ಸಮ್ಮೇಳನದಿ ಬಹು ವೈಭವದಿ ನಲಿದು
ಬೇಗದಲಿ ಬರುತಿರುವ ದೈತ್ಯರ
ಜಾಗು ಮಾಡದೆ ಸಂಹರಿಸಿ ಶ್ರೀ_
ರಾಮಲಕ್ಷ್ಮಣರಿರಲು ಹರುಷದಿ ಮುನಿವರರು ನಲಿಯೆ

## ಕಂದ

ಈ ಪರಿ ಯಾಗವ ನಡೆಸುತ
ಶ್ರೀಪತಿಗರ್ಪಿಸಿ ಮುನಿವರರಿರುವ ಸಮಯದಲಿ
ಭೂಪತಿ ಜನಕನ ಪತ್ರವ
ತಾಪಸರು ನೋಡಿ ನಲಿದಾಡಿದರು ಮುದದಿ

## ಆರ‍್ಯ

ಜನಕನು ತನ್ನ ತನಯಳ ಸ್ವಯಂವರ
ವೆನುತ ಮುನಿಗಳಿಗಾಹ್ವಾನಿಸುತ
ತನಯರು ಮಕ್ಕಳು ಬಂಧುಗಳೊಡನೆ
ಸನ್ಮತದಿಂ ಬರಬೇಕೆನುತ ೧

ಪತ್ರವ ನೋಡುತ ವಿಶ್ವಾಮಿತ್ರರು
ತಕ್ಷಣ ಮುನಿವರರೊಡಗೂಡುತಲಿ
ಅರ್ಥಿಯಲೆ ಮಿಥಿಲಾಪುರಿಗೆ ಹೊರಡುತಲಿ
ಮತ್ತೆ ಮುನಿಸತಿಯನುದ್ಧರಿಸಿ ೨

ಬಂದರು ಮಿಥಿಲಾಪಟ್ಟಣಕಾಕ್ಷಣ
ಚಂದದಿ ಮುನಿಗಳೆಲ್ಲರು ಕೂಡಿ
ಕಂದರು ಸಹಿತದಿ ಕಂಡರು ಜನಕನ
ಸುಂದರ ಪುರ ವೈಭವ ನೋಡಿ ೩

ಹಾದಿ ಹಾದಿಗು ತಳಿರು ತೋರಣಗಳು
ಬೀದಿ ಬೀದಿ ಶೃಂಗಾರಗಳು
ಮೋದದಿ ರಚಿಸಿದ ಕಲಶಕನ್ನಡಿಗಳು
ಆದರದಿ ಕರೆಯುವ ಭಟರುಗಳು ೪

ಎಲ್ಲಿ ನೋಡಲು ಮಲ್ಲಿಗೆ ಲತೆಗಳು
ಚಲ್ಲಿಹ ಘಮಘಮ ಪನ್ನೀರುಗಳು
ಚೆಲ್ವೆಯರೋಕುಳಿ ಆರತಿ ಬೆಳಗುತ
ಮಲ್ಲಿಗೆ ಮುಡಿಯುವರೋಡ್ಯಾಟ ೫

ಕಸ್ತೂರಿ ಸಾರಣೆ ಕುಂಕುಮ ಸಾರಣೆ
ಸುತ್ತ ನಿಲುವು ಕನ್ನಡಿಗಳನು
ಜತ್ತಿಲಿ ಕಾಣುವ ಮುತ್ತಿನ ಗೊಂಚಲು
ಅರ್ಥಿತೋರುತ ಮೆರೆಯುವ ಪುರವು ೬

ರಾಜರು ವೈಭವದಿಂದಲಿ ಬರುತಿರೆ
ತೇಜ ಭಟರುಗಳ ಓಡಾಟ
ರಾಜೀವಾಕ್ಷ ಕಮಲನಾಭವಿಠ್ಠಲನು
ಸೋಜಿಗನೋಡುತ ಬರುತಿರಲು ೭

## ಕಂದ

ದಿನಮಣಿಯಂದದಿ ಪೊಳೆಯುವ
ತನಯರ ನೋಡುತ ನೃಪತಿ ವಿಸ್ಮಯದಿ
ಇನಕುಲ ತಿಲಕರು ಬಾಲಕರು
ಘನ ಮಹಿಮರು ಇವರ್ಯಾರೆಂದು ಕೇಳಿದ ರಾಜ

ಯಾರು ಈ ಬಾಲಕರು ಮುನಿವರ
ಮಾರಪಿತನ ಸೌಂದರ್ಯದ ರಾಶಿಯೊ ಪ

ಅರುಣಕಿರಣದಂತೆ ಸಿರದಿ ಕಿರೀಟವು
ಕಿರುನಗೆ ಮುಗುಳು ನಗೆಯ ಮುಖದಂದವು

ತರುಣಿ ಜಾನಕಿಯಳ ಸ್ಮರಿಸುತ ಮನದಲ್ಲಿ
ತನುಮನ ಧನವೆಲ್ಲ ತಿಳಿದು ನಿಸ್ಸಾರದಿ ಅ.ಪ

ವೀರಾಧಿವೀರರೆಲ್ಲ ಬರುತಲಿ ಮಹ–
ತೋರ ರೂಪದಿ ತೋರುವ
ಭಾರಿಯ ಧನುವೆತ್ತಿ ಕಾಲು ಮುರಿಯಲು
ಹೇಳಕೇಳದೆ ತಮ್ಮ ತಮ್ಮ ಪೀಠಗಳೇರಲು ೧

ದಶಶಿರ ಧನುವೆತ್ತುತ ಜಾನಕಿ ತನ್ನ
ವಶಳಾಗಬೇಕೆನ್ನುತ
ಕುಶಲದಿಂದೆತ್ತಲು ಕುಸಿಯಲು ಬಲವೆಲ್ಲ
ಅಸುರನು ತಲೆಕೆಳಕಾಗಿ ಬೀಳಲು ಭರದಿ ೨

ಜನಕರಾಯನು ತನ್ನಯ ಮನದಿ ನೆನೆಯೆ
ಧನುರ್ವೀರರಿಲ್ಲೆನುತ
ತನಯಳು ಮೆಚ್ಚಿದ ವರನಿಗೆ ಕೊಡುವೆ ನೆಂ–
ದೆನಲು ವಿಶ್ವಾಮಿತ್ರ ಅರಿತನು ಮನದಲ್ಲಿ ೩

ಇನಕುಲ ತಿಲಕನಿಗೆ ಸತಿಸೀತೆಯೆಂದು
ಅರಿಯದೆ ದೊರೆ ಚಿಂತಿಸೆ
ಜನಕರಾಜನ ನೋಡಿ ನುಡಿದರು ಈ ಪರಿ
ಧನುರ್ವಿದ್ಯೆ ಬಲ್ಲ ಶ್ರೀರಾಮನು ಇಹನೆಂದು ೪

ನುಡಿಯೆ ವಿಶ್ವಾವಿತ್ರನು ಪೊಡವೀಶ ಕೇಳು
ನಡೆದ ರಾಮನೆಡೆಗೆ
ಕಡಲ ಶಯನ ಕಮಲನಾಭವಿಠ್ಠಲದೇವ
ತಡಮಾಡದಲೆ ದಯಮಾಡಬೇಕೆನಲಾಗ ೫

## ಆರ‍್ಯ

ಪೊಡವಿಪ ನೀ ಪರಿ ನುಡಿಯೆ ಶ್ರೀ ರಾಮನು
ನುಡಿದನು ಸೌಮಿತ್ರಿಯ ಕೂಡೆ

ಧರೆಗೆ ಚಂದ್ರ ಸೂರ್ಯರಿಳಿದಂತೆ ಕಾಂಬರು
ಕಿರುಕಡೆ ನೋಟದಿ ಜಗವ ಮೋಹಿಸುವರು ೧

ದಿನಕರ ಪ್ರಭೆಯಂತೆ ಕನಕ ಕುಂಡಲಗಳು
ಮಿನುಗುವ ಕಂಠದಿ ವೈಜಯಂತಿಮಾಲೆಯು
ಕನಕ ಕಂಕಣ ವೀರ ಮುದ್ರಿಕೆ ಹೊಳೆಯುತ
ಇನಕುಲ ತಿಲಕನೆನ್ನುವ ಭ್ರಾಂತಿ ತೋರುವ ೨

ಬಗೆ ಬಗೆ ಭಕುತರಿಂದ್ಹೊಗಳಿಸಿಕೊಂಬುವ
ಅಗಣಿತ ಮಹಿಮನೊ ಅರಿಯಲಸಾಧ್ಯವು
ಖಗವಾಹನ ಕಮಲನಾಭ ವಿಠಲ ನೊ
ಮಿಗೆ ಹರುಷವು ಎನ್ನ ಮನಕಾಗುತಲಿದೆ ೩

## ಆರ‍್ಯ

ಭೂಪತಿ ಲಾಲಿಸು ದಶರಥ ತನಯರು
ಈ ಪೃಥ್ವಿಯಮೇಲುದಿಸಿಹರು
ತಾಪಸರೆಸಗುವ ಯಜ್ಞವ ರಕ್ಷಿಸೆ
ಈ ಪರಿಯಲಿ ಬಂದಿಹರೀಗ

ಭೇರಿಯ ಹೊಡೆಸಿದನು ಜನಕ ಭೂಪಾಲನು
ಮಾರಾರಿಯಧನು ಇರಿಸುತ ಸಭೆಯೊಳು ೧

ರಾಜಾಧಿರಾಜರೆಲ್ಲರು ಬಂದು ನೆರೆದರು
ರಾಜಿಪಸಭೆ ಶೋಭಿಸುತಿರೆ ವೈಭವದೊಳು ೨

ದೇಶದೇಶದ ದೊರೆಗಳಿಗೆ ಪತ್ರಿಕೆ ಬರೆದು
ವಾಸುದೇವನ ಭಕ್ತರನು ಕರೆಸುತ ಬೇಗ ೩

ಬಂದರು ದೇಶದೇಶದ ಜನ ಮಿಥಿಲೆಗೆ
ಚಂದದ ಸ್ವಯಂವರ ಮಂಟಪದಿ ನೆರೆದರು ೪

ಯಾಚಕರು ಗಾಯಕರು ನಾಟಕರು ಸಹಿತದಿ
ಯೋಚನೆಯಿಲ್ಲದೆ ಬಂದು ನೆರೆದರಾಗ ೫

ಋಷಿಗಳು ಮುನಿಗಳು ವಸುಧೆಪಾಲಕರೆಲ್ಲ
ಹಸು ಮಕ್ಕಳೊಡಗೂಡಿ ಸತಿಯರೊಡನೆ ಬರಲು ೬

ಬಂದ ಬಂದವರನು ಚಂದದಿಂದುಪಚರಿಸಿ
ಇಂದಿರೇಶನ ಸೇವೆಯೆಂದು ಸ್ಮರಿಸುತ ಬೇಗ ೭

ಸುರ ಸುಂದರಿಯರೆಲ್ಲ ವರಗಾನ ಪಾಡುತ್ತ
ಭರದಿ ನರ್ತಿಸುತಿರೆ ಹರುಷಪಡುವ ತೆರದಿ ೮

ಮಂಗಳ ವಾದ್ಯಗಳಿಂದ ತುಂಬಿರೆ ಸಭೆ
ಗಂಗಾಜನಕನ ಪಾದಂಗಳ ಸ್ಮರಿಸುತ ೯

ಧನುವೆತ್ತಿದವರಿಗೆ ತನಯಳನೀವೆನೆನೆ
ಮನದಿ ಯೋಚಿಸಿದರು ನೆರೆದ ಜನರುಗಳೆಲ್ಲ ೧೦

ಧೀರರೆಲ್ಲರು ಬಂದು ನಿಂದರದರ ಮುಂದೆ
ನಾರಿ ಜಾನಕಿ ನಮಗಾಗೋಳೆನುತಲಿ ೧೧

ಅಗಣಿತ ಮಹಿಮನ ಮಿಗೆ ಹರುಷದಿ ಪಾಡಿ
ಖಗವಾಹನ ಕಮಲನಾಭವಿಠ್ಠಲನೆಂದು ೧೨

## ಕಂದ

ಈ ಪರಿ ಭೇರಿಯ ಹೊಡೆಸಲು
ಭೂಪತಿಗಳೆಲ್ಲ ಕೇಳುತ ತ್ವರದಿ
ತಾಪಸರನು ಲೆಕ್ಕಿಸದಲೆ
ಆತುರದಿ ಬಂದೆತ್ತುತಿದ್ದರು ಧನುವ

ಧನುವನೆತ್ತಿದರಾಗಲೆ ಧರಣಿಪರೆಲ್ಲ
ಧನುವನೆತ್ತಿದರಾಗಲೆ ಪ

ಪಾರಿಜಾತ ಪುಷ್ಪಗಳಿಂದ ದೇವದೇವನ ಸಿರದಿ ಸುರಿಸುತಲಿ ಹರುಷದಲಿ ದೇವ ದುಂದುಭಿಗಳು ಆನಂದದಿಂ ಮೊಳಗೆ ದೇವಕನ್ಯೆಯರೆಲ್ಲ ರಾಗ ಸುಸ್ವರದಿಂದ ದಾನವಾರಿಯನು ಕೊಂಡಾಡುತಿಹರು.

ಜಯ ಜಯ ಜಯ ಜಯ
ಜಗದೇಕವೀರನಿಗೆ
ಜಯ ಜಯ ಜಯ ಜಗದೀಶಗೆ ಪ

ಗೋಕುಲದೊಳು ಗೋವುಗಳನೆ ನೀ
ಪಾಲಿಸುತಿರಲೊಂದಿನ
ಗೋರೂಪಿಲಿ ಬಂದ ಅಸುರನ ನೀ
ಸೀಳಿದೆ ನಿಗಮವೇದ್ಯ ೧

ದೇವೇಂದ್ರನು ಮಳೆಗರೆಯಲು
ಗೋಪಾಲಕರೆಲ್ಲರು
ದೇವ ನಿನ್ನ ಸ್ಮರಣೆ ಮಾಡೆ
ಗೋವರ್ಧನವೆತ್ತಿ ಪೊರೆದೆ ೨

ಅಂದು ಋಷಿ ಪತ್ನಿಯರನು
ಮಂದಹಾಸದಿಂದ ಕರೆಸಿ
ಚಂದದಿಂದ ಅವರನ್ನರಸಿ
ಮುಂದೆ ಗತಿಯ ತೋರ್ದೆ ಬೇಗ ೩

ಜಯ ಜಯ ಲಕ್ಷ್ಮೀರಮಣಗೆ
ಜಯ ಜಯ ಅಕ್ಷಯ ಫಲದಗೆ
ಜಯ ಜಯ ಭಕ್ತರ ಪೊರೆದಗೆ
ಜಯ ಜಯ ಭಕ್ತಿಗೆ ಒಲಿವಗೆ ೪

ಕರುಣಾಕರ ಕರಿವರದಗೆ
ವರ ಕಮಲಾಸನ ತಾತಗೆ

ಎಳೆಯ ತುಳಸಿಯ ಸರಗಳೊಪ್ಪುತ
ಜರದವಲ್ಲಿಯು ಜಾರಿ ಬೀಳಲು ೧೭

ವಕ್ಷ ಸ್ಥಳದಿ ಶ್ರೀಲಕ್ಷ್ಮಿ ಒಪ್ಪಿರೆ
ರತ್ನ ಪದಕಗಳೆಲ್ಲ ಶೋಭಿಸೆ
ಮುತ್ತಿನರಳೆಲೆ ಮಕರ ಕುಂಡಲ
ರತ್ನದ್ಹಾರಗಳಿಂದ ಒಪ್ಪಿರೆ ೧೮

ಗುರುಳು ಕೂದಲು ಹೊಳೆವೊ ಫಣೆಯಲಿ
ತಿಲುಕ ಕಸ್ತೂರಿ ಶೋಭಿಸುತ್ತಿರೆ
ಎಳೆಯ ಚಂದ್ರನ ಪೋಲ್ವ ಮುಖದಲಿ
ಮುಗುಳು ನಗೆಯು ಬಾಯ್ದಂತ ಪಂಕ್ತಿಯು ೧೯

ಪದ್ಮನೇತ್ರಗಳಿಂದ ಒಪ್ಪುತ
ಪದ್ಮ ಕರದಲಿ ಪಿಡಿದು ತಿರುವುತ
ಪದ್ಮಲೋಚನೆಯನ್ನು ನೋಡುತ
ಪದ್ಮನಾಭನು ಕೊಳಲನೂದುತ ೨೦

ರತ್ನ ಮುತ್ತಿನ ಕಿರೀಟ ಶಿರದಲಿ
ಮತ್ತೆ ನವಿಲಿನ ಗರಿಗಳೊಪ್ಪಿರೆ
ಹಸ್ತಿ ವರದನು ಎತ್ತಿ ಸ್ವರವನು
ಮತ್ತೆ ಕೊಳಲನು ಊದೊ ದೇವನೆ ೨೧

ಸುಂದರಾಂಗನೆ ಮಂದಹಾಸನೆ
ಮಂದರೋದ್ಧರ ಬಾರೋ ಬೇಗನೆ
ಇಂದಿರೇಶನೆ ಇಭರಾಜವರದನೆ
ರಂಗನಾಥನೆ ಬಾರೊ ಬೇಗನೆ ೨೨

ಮಾರನಯ್ಯನೆ ಮದನ ಮೋಹನ
ಪಾರಮಹಿಮನೆ ಬಾರೊ ಬೇಗನೆ
ಶ್ರೀರಮಾಪತೆ ಶ್ರೀ ನಿಕೇತನ
ವಾರಿಜಾಕ್ಷನೆ ಬಾರೊ ಬೇಗನೆ ೨೩

ಹೀಗೆ ಗೋಪೇರು ಮೊರೆಯನಿಡುತಿರೆ
ಮಂಗಳಾಂಗನು ಬಂದನೆದುರಿಗೆ
ಧ್ವಜ ವಜ್ರಾಂಕುಶ ಪದ್ಮ ಪಾದವು
ಅಡಿಯನಿಡುತಿರೆ ಧರಣಿ ನಲಿವಳು ೨೪

ಹರಿಯ ನೋಡುತ ಪರಮ ಹರುಷದಿ
ತರುಣಿಮಣಿಯರು ಹರುಷ ಪಡುತಲಿ
ಪರಮ ಮಂಗಳ ಚರಿತ ದೇವಗೆ
ಸ್ವರವನೆತ್ತಿ ಮಂಗಳವ ನುಡಿದರು ೨೫

ಮಂಗಳಂ ಶುಭ ಕಂಬು ಕಂಠಗೆ
ಮಂಗಳಂ ಮಹಾ ಮಾರನಯ್ಯಗೆ
ಮಂಗಳಂ ಮಹಾ ಮುದ್ದುಕೃಷ್ಣಗೆ
ಮಂಗಳಂ ಜಯ ಮಂಗಳಾಂಗಗೆ ೨೬

ಕಮಲ ಮುಖಿಯರು ನಮಿಸಿ ಕೃಷ್ಣಗೆ
ಸರಸವಾಡುತ ಹರುಷ ಪಡುತಲಿ
ಕಮಲನಾಭ ವಿಠ್ಠಲನ ಕೂಡುತ
ಮನದಿ ಸುಖವನು ಪಡುತಲಿದ್ದರು ೨೭

## ೧೬೭

ತಿರುಪತಿ ಯಾತ್ರೆಯ ಮಾಡಿ ತಿರುಪತಿ ಪ

ತಿರುಪತಿಯಾತ್ರೆಯ ಮಾಡಿ ಮನದ
ದುರಿತಪಾಪಗಳನೀಡಾಡಿ ಆಹ
ಸ್ಮರಕೋಟಿ ತೇಜನ ದರುಶನಲಾಭವು
ದೊರಕಿದ ಸುಜನರ ಚರಿತೆಯ ಕೇಳುತ್ತ ಅ.ಪ

ಘಾಸಿಗೊಳ್ಳದೆ ಶಿರಸಿನಲ್ಲಿ
ಈಸು ಬ್ರಹ್ಮಾಂಡವನೆ ಪೊತ್ತು
ಸಾಸಿರದೆರಡು ಜಿಹ್ವೆಯಿಂದ ಹರಿಯ
ಸ್ತುತಿಸಿ ಕೊನೆಗಾಣೆನೆನಲು ೨

ಕಂತುಜನಕ ನಿನ್ನ ಸ್ತುತಿಪ
ಅಂತರಂಗದ ಭಕ್ತರನ್ನು ನಿ-
ಶ್ಚಿಂತೆಯಿಂದ ಪೊರೆವ ಲಕ್ಷ್ಮಿ-
ಕಾಂತ ಕಮಲನಾಭ ವಿಠ್ಠಲ ೩

## ಆರ‍್ಯ

ಈ ಪರಿ ಸ್ತುತಿಸಲು ಕೇಳುತ ಶ್ರೀಹರಿ
ಆ ಸರಸಿಜಾಸನ ಸುತನ
ಪ್ರೀತಿಯಿಂದ ಕರವಿಡಿದಾದರಿಸುತ
ಈ ವಿಧ ಭಕುತರು ಅರಿದೆಂದ ೧

ಯಾರು ಈ ವಿನೋದದ ಕಥೆಯನು ಪ್ರತಿದಿನ
ಗಾನವ ಮಾಡುತ ಕೇಳುವರೊ
ನೀರಜಾಕ್ಷಿ ಸಹಿತವರ ಹೃದಯ ಮಂ-
ದಿರದಲಿ ನೆಲಸಿರುವೆನು ಕೇಳು ೨

ಮುರವೈರಿಯು ಈ ಪರಿನುಡಿಯಲು ನಾ-
ರದ ಮುನಿ ಸುರಲೋಕಕೆ ನಡೆದ
ಸುರಪತಿ ಶಚಿಯರೊಡನೆ ಈ ವಿವರವು
ಅರುಹಿ ಕಮಲನಾಭ ವಿಠ್ಠಲನ ಗುಣವ ೩

## ವಚನ

ಹೀಗೆ ನಾರದರು ದೇವೇಂದ್ರನೊಳು ಪೇಳೆ ದೇವತೆಗಳೆಲ್ಲ ಸಂಭ್ರಮದಿಂದ ಕುಣಿದಾಡಿ ದೇವದೇವೋತ್ತಮನ ಗಾನದಿಂ ಕೊಂಡಾಡಿ ದೇವ ಮಂದಾರ

ಬೆಟ್ಟದ ದರುಶನದಿಂದ ಪಾಪ
ಸುಟ್ಟು ಹೋಗುವದಿದು ಚಂದ ಮೆಟ್ಟು
ಮೆಟ್ಟಿಲನೇರುವ ವೃಂದ ಜನ
ಸೃಷ್ಟಿಗೊಡೆಯ ಗೋವಿಂದ ಆಹಾ
ದಿಟ್ಟಮನದಿ ಪರಮೇಷ್ಠಿಪಿತನ ಪಾಡಿ
ಗಟ್ಯಾಗಿ ಗೋವಿಂದ ಗೋವಿಂದನೆನುವರು ೧

ಗಾಳಿಗೋಪುರವನ್ನೆ ದಾಟಿ ಭಕ್ತ-
ರಾ ಮಂಟಪಕೆ ಉಂಟೆ ಸಾಟಿ ತಾಳ
ಮೇಳದವರ ಗಲಾಟೀಯಿಂದ
ಶೋಭಿಪ ಪವನನಕೋಟಿ ಕೇಳಿ
ನೋಡುತ್ತ ಭಕುತಿಸೂರ್‍ಯಾಡುತ್ತ ಮಹಿಮೆ ಕೊಂ-
ಡಾಡುತ್ತ ಪಾಡುತ್ತ ಕುಣಿವ ಸಜ್ಜನರೆಲ್ಲ ೨

ಸ್ವಾಮಿ ಪುಷ್ಕರಣಿಯ ಸ್ನಾನ ಮಾಡಿ
ಆ ಮಹವರಹದೇವರನ್ನ ಕಾಮ-
ಧೇನೆಂಬ ಶ್ರೀ ಗುರುಗಳನ್ನ ನೋಡಿ
ಆ ಮಹಾ ಅಶ್ವತ್ಥರಾಜನ್ನ ಸ್ತುತಿಸಿ
ನೇಮದಿ ದಿಗ್ಗಾವಿ ಆಚಾರ್ಯರಿಗೆ ನಮಿಸಿ
ಶ್ರೀಧರನಾಲಯ ದ್ವಾರಕ್ಕೆ ಪೋಗಲು ೩

ಮೂರು ದ್ವಾರಗಳನ್ನೆ ದಾಟಿ ಮು-
ರಾರಿಯ ಗುಡಿಸುತ್ತ ಕೋಟೆಯಲ್ಲಿ
ಸಾರುವ ಭಕುತರ ಭೇಟಿಯಿಂದ ಅ-
ಪಾರ ಜನುಮದ ಪಾಪಮೂಟೆ ಪೋಗಿ
ಬೇಗದಿ ವಿಮಾನ ಶ್ರೀನಿವಾಸನ ನೋಡಿ
ಸಾಗರಶಯನನ ದರುಶನ ಕೊಡುಕೊಡು ಎಂದು ೪

ಕೊಪ್ಪರಿಗೆಯು ಮನೆಯಂತೆ ಹಣ
ತಪ್ಪದೆ ಸುರಿಯುವರಂತೆ ನ-

ದಾಸನಲ್ಲವೆ ಪರಿಪಾಲಿಸು ಎನ್ನ
ಈಶನಲ್ಲವೆ ಈ ಭವದೊಳುನೊಂದು
ಘಾಸಿಯಲ್ಲವೆ
ಶ್ರೀಶಾ ಸುಂದರ ವಾಸವನುತ
ಕ್ಲೇಶಗಳನೆ ಪರಿಹರಿಸು ದೇವ ೪

ಕರುಣಾಸಾಗರ ಕಮಲಾಯತಾಕ್ಷ
ಸರಸಿಜೋದರ ಸುರಸಂಪಿಗಿ ತುಳಸಿ
ಮಾಲ ಕಂಧರ
ಸುರಗಂಧರ್ವರು ನೆರೆದು ಪಾಡ್ವರು
ಕಮಲನಾಭ ವಿಠ್ಠಲನೆನುತ ೫

## ವಚನ

ನಾರದರು ಈ ವಿಧದಿ ನಾರಾಯಣನ ಸ್ತುತಿಸಿ ದೂರದಲಿ ಕೈ ಮುಗಿದು ನಿಂದಿರಲು ಶ್ರೀಹರಿಯು ನೋಡಿ, ಕೃಪಾದೃಷ್ಟಿಯಿಂದ ಸುರಮುನಿಯನ್ನು ಈ ಜಗದಿ ನಿನ್ನಂಥ ಭಕ್ತರನು ನಾ ಕಾಣೆ, ಈಡುಂಟೆ ನಿನ್ನ ಭಕ್ತಿಯ ಪಾರವಶ್ಯತೆಗೆ ಹೀಗೆಂದು ಶ್ರೀಧರನು ನಾರದರ ಕೊಂಡಾಡೆ ನಾರದರು ಪುನ: ನಾರಾಯಣನ ಸ್ತುತಿ ಮಾಡಲು

ಯೋಗಿವಂದ್ಯನೆ ಬಾಗಿ ನಮಿಪೆ
ಬೇಗ ಪಾಲಿಸು
ನಾಗವೇಣಿ ರುಕ್ಮಿಣಿ ಸತ್ಯ–
ಭಾಮೆಯರಿಗೆ ಒಲಿದ ದೇವನೆ ಪ

ದೇವ ದೇವ ನಿನ್ನ ಮಹಿಮೆ
ಪಾಮರರಿಗೆ ಪೊಗಳಲಳವೆ
ದೇವಿ ರಮಾ ಬ್ರಹ್ಮಾದಿಗಳು
ದೇವ ನಿನ್ನ ಮಹಿಮೆ ಕಾಣರೆನೆ ೧

## ಆರ್ಯ

ಬಂದರಾಗ ಬಹುಚಂದದ ಸತಿಯರು ಆ-
ನಂದದಿಂದ ಮಾತಾಡುತಲಿ
ತಂದ ಜಲಗಳನು ಚಲ್ಲುತ ತವಕದಿ
ರಂಗವಲ್ಲಿಗಳ ಹಾಕುತಿರೆ ೧

ಇಂದಿಗೆ ಕಂಡೆನು ಇವರ್ಯಾರೆನುತಲಿ
ಮುಂದಕೆ ಬಂದಳು ಬೇಗದಲಿ
ಕಂದರ್ಪನ ಸತಿಯರಂದದಿ ಪೊಳೆಯುವ
ಸುಂದರಿಯರ ಕಾಣುತಲಾಗ ೨

ಚಂದದಿ ಅವರನು ಕೇಳುವೆನೆನುತಲಿ
ಸುಂದರಿಯರ ಬಳಿಯಲಿ ಬಂದು
ಮಂದಹಾಸ ನಗೆಯಿಂದ ಸರಸ್ವತಿಯು
ಚಂದಿರ ಮುಖಿಯರ ಕೇಳಿದಳು ೩

ಯಾರಮ್ಮ ಪೇಳಿರಿ ನೀವು ಯಾರಮ್ಮ ಪ

ನಾರಿಯರ ಮುಖವು ಮುಂಗಾರು ಮಿಂಚುಗಳಂತೆ
ತೋರ್ಪುದು ಥಳಥಳ ಹೊಳೆವ ಸುಂದರಿಯರೆ ಅ.ಪ

ರಂಭೆ ಊರ್ವಸಿಯಂತೆ ತೋರುವುದು ಬಹು
ಸಂಭ್ರಮ ಮನಕಾಗುತಿಹುದು ಕೇಳಿ
ಕಂಬು ಕಂದನರಸಿಯರಂತೆ ಕಾಣುವ
ಅಂಬುಜಾಕ್ಷಿಯರೆ ಮನದ್ಹಂಬಲ ಪೇಳಿರಿ ೧

ರತಿ ಶ್ಯಾಮಲೆಯರೆಂದು ತಿಳಿದೆ ನಿಮ್ಮ
ಅತಿ ಚಲ್ವಿಕೆಗೆ ಮನ ಮರೆದೆ ಕೇಳಿ
ಶಚಿ ಪಾರ್ವತಿಯರೆಂದು ಮತಿ ಭ್ರಮಿಸುತಲಿದೆ
ಹಿತದಿ ಪೇಳಿರಿ ನಿಮ್ಮ ಅತಿಶಯದ ವಾರ್ತೆಯ ೨

ಕಡುಭಾಗವತರು ಕಂಡರೆ ಇವನ ಬಿಡದೆ
ತಮ್ಮಯ ಹೃದಯ ಸದನಸದಿ ಕಾಂಬರು; ನಿತ್ಯ
ಮುದದಿ ದಾಸನ ಮೇಲೆ ಮುಕುಂದ ಕರುಣವ
ಮಾಡಿ ವಿಧವಿಧ ಲೀಲೆಗಳ ತೋರಿದನು ಶ್ರೀಧರನು
ಸದಮಲಾನಂದ ಶ್ರೀಮಧುಸೂದನನ ಕ್ರೀಡೆ ವರ್ಣಿ
ಸುವದಸದಳವು ವರಲಕ್ಷ್ಮಿಪತಿ ಗುಣವ ಧನ್ಯಾನಾದೆನು
ನಾನು ಸನ್ನುತಾಂಗನ ದಯದಿ ವರ ಕಮಲನಾಭ
ವಿಠ್ಠಲನು ವರವಿತ್ತು ಪಾಲಿಸಲಿ

ಪಾಲಿಸೆನ್ನನು ಪಾದಕ್ಕೆರಗುವೆ
ಪಾವನ ಚರಿತನೆ
ಸಾರಸಾಕ್ಷನೆ ಸಾರ್ವಭೌಮನೆ
ಅಪಾರ ಗುಣನಿಧಿ ಪ

ನೀರ ಪೊಕ್ಕೆಯೊ ಭಾರವನೆ ಪೊತ್ತು
ಬೇರ ಮೆದ್ದೆಯೊ ಕ್ರೂರ ರಕ್ಕಸನ ಸಂ-
ಹಾರ ಮಾಡ್ದೆಯೊ
ಮೂರು ಪಾದವ ಬೇಡಿ ಭೂಮಿಯ
ಬಾಗಿಲನು ಕಾಯ್ದ ಶ್ರೀಹರಿ ೧

ಮಾತೆ ಸಿರವನೆ ತರಿಯುತಲಿ ಬೇಗ
ತಾತನಾಜ್ಞೆಗೆ ಭೂಜಾತೆಗೆ ಒಲಿದ
ಪ್ರಖ್ಯಾತರಾಮನೆ
ಮಾತುಳಾಂತಕ ಗೋಪಿಬಾಲನೆ
ಯಾತಕೀ ಪರಿ ದಣಿಸುವೆ ೨

ಪದ್ಮನಾಭನೆ ತ್ರಿಪುರ ಸುರರನು
ಮರ್ದಿಸಿದನೆ ಮುದದಿಂದ ಕಲ್ಕಿ
ಮುದ್ದು ತೋರ್ದನೆ
ಬಿದ್ದೆ ನಿನ್ನಯ ಪದ್ಮಪಾದಕೆ
ಉದ್ಧರಿಸೆನ್ನ ಉದ್ಧವ ಸಖನೆ ೩

ಮ್ಮಪ್ಪ ವೆಂಕಟಸ್ವಾಮಿಯಂತೆ
ತಪ್ಪನಾಡುವರ ಶಿಕ್ಷಿಪನಂತೆ ಆಹಾ
ಕ್ಷಿಪ್ರದಿ ಶ್ರೀಧರನಪ್ಪಣೆಯಂದದಿ
ಅಪ್ರಮೇಯನ ಸೇವೆಗೊಪ್ಪುವ ಸುಜನರು ೫

ಹೇಮದ್ವಾರದಿ ನಿಂತ ಜನರು ನಮ್ಮ
ಸ್ವಾಮಿ ಶೃಂಗಾರ ನೋಡುವರು ಶ್ರೀನಿ–
ವಾಸನೆ ಸಲಹು ಎಂಬುವರು ಪಾಹಿ
ಪಾಹಿ ಶ್ರೀಪತಿ ಎನ್ನುತಿಹರು ಶ್ರೀಶ
ಗೋವಿಂದ ಗೋವಿಂದ ಗೋವಿಂದ ಮಾಧವ
ಮಾತುಳಾಂತಕ ದೇವ ಮಾತು ಲಾಲಿಸು ಎಂದು ೬

ಚರಣದಂದಿಗೆ ಗೆಜ್ಜೆವಲಿಯೆ ಪೊನ್ನ
ಸರಪಳಿ ಪಾಡಗ ನಲಿಯೆ ಒಳ್ಳೆ
ಜರದ ಪೀತಾಂಬರ ಹೊಳೆಯೆ ಪಟ್ಟೆ
ವರವಲ್ಲಿ ಹೊಳೆಯುತ್ತ ಮೆರೆಯೆ ಆಹ
ಸರಗಳು ವಲಿಯುತ್ತ ಪದಕಂಗಳ್ಹೊಳೆಯುತ್ತ
ಉರದಲ್ಲಿ ಶ್ರೀದೇವಿ ಇರುವ ವೈಭವ ನೋಡಿ ೭

ವರಶಂಖು ಚಕ್ರ ಹಸ್ತದಲಿ ದಿವ್ಯ
ಸಿರದಿ ಕಿರೀಟ ಮೆರೆಯುತಲಿ ಪಟ್ಟೆ
ತಿಲುಕ ಕಸ್ತೂರಿ ಹೊಳೆಯುತಲಿ ಥಳ
ಥಳ ಹೊಳೆವ ಮುಖಕಾಂತಿಯಲಿ ಅಹ
ಕಡೆಗಣ್ಣ ನೋಟದಿ ಜಗವಮೋಹನ ಮಾಳ್ಪ
ಅಗಣಿತ ಮಹಿಮನ ಸುಗುಣವ ಪಾಡುತ್ತ ೮

ಕರುಣಿಗಳರಸನೆ ದೇವ ತನ್ನ
ಶರಣು ಹೊಕ್ಕವರನ್ನೆ ಕಾವ ತನ್ನ
ಭಜಕರಿಗಭಯವ ನೀವ ಇನ್ನು

ಸರಿಯುಂಟೆ ಶ್ರೀರಮಾದೇವ ಅಹ
ಪರಿಸರನೊಡೆಯನ ನಿರುತದಿ ಧ್ಯಾನಿಸಿ
ದುರಿತಗಳಳಿದು ಸದ್ಗತಿಯ ಪಡೆವರೆಲ್ಲ ೯

ಕಾಲಹರಣ ಮಾಡದಂತೆ ತ್ರಿ-
ಧಾಮನ ಸ್ಮರಿಸುವ ಚಿಂತೆಯಲ್ಲಿ
ಆಲಸ್ಯ ತೊರೆದಿಹರಂತೆ ಶ್ರೀನಿ-
ವಾಸನೆ ಇದಕ್ಕೊಣೆಯಂತೆ ಅಹ
ಕಾಲಕಾಲಕೆ ತಕ್ಕ ಲೀಲೆಯ ತೋರುವ
ಶ್ರೀಲಲಾಮನ ಪಾದ ಧ್ಯಾನಿಪ ಸುಜನರು ೧೦

ಹತ್ತವತಾರದ ಹರಿಯು ತನ್ನ
ಭಕ್ತರು ಸ್ತುತಿಸುವ ಧ್ವನಿಯ ಕೇಳಿ
ಚಿತ್ತದಿ ನಲಿಯುವ ಪರಿಯು ಸುರರು
ವಿಸ್ತರಿಸುವ ದಿನಚರಿಯು ಅಹ
ಕಸ್ತೂರಿ ತಿಲುಕದ ಕಮಲನಾಭ ವಿಠ್ಠಲ
ಭಕ್ತರ ಸ್ತುತಿಸಲು ಮತ್ತವರಿಗೊಲಿಯುವ ೧೧

## ೧೬೮

ನೀರಿನಿಂದಲೆ ಸರ್ವಫಲ ಬಾಹೋದು
ನೀರಜಾಕ್ಷನ ಸೇವೆ ಮಾಳ್ಪ ಸುಜನರಿಗೆ ಪ

ನೀರಿಲ್ಲದಲೆ ಯಾವ ಸಾಧನವು ನಡೆಯದು
ನೀರಿಲ್ಲದಲೆ ಯಾಗ ತಪಸ್ಸು ನಿಲ್ಲುವದು
ನೀರಿಲ್ಲದಲೆ ಸ್ನಾನ ಆಚಾರಹೀನವು
ನೀರಿಲ್ಲದಲೆ ದೇವತಾರ್ಚನೆಯು ಇಲ್ಲವು ೧

ನೀರೆಂದರೆ ಬರಿಯ ಜಡವಾದ ನೀರಲ್ಲ
ನೀರಜಾಕ್ಷನು ಜಲದಿ ವಾಸವಾಗಿಹನು

ಧ್ಯಾನಿಸಿ ಈ ಪರಿ ಮನದಲಿ ಮರುಗಿದ
ಶ್ರೀಪತಿ ಸೇವಕನು ೨೬

ಅಣುರೇಣು ತೃಣದಲ್ಲಿ ಹರಿಯು
ಇಹನೆಂದು ಶ್ರುತಿ ಸಾರುತಲಿರಲು
ಎಣಿಸಬಹುದೇ ಅಣುಮಹದ್ರೂಪನ
ಗುಣಗಳನೆಂದೆನುತ ೨೭

ಜಗವೆಲ್ಲಾ ತುಂಬಿರುವ ದೇವನ
ಹುಡುಕವದುಂಟೇ ಲೋಕದ ಜನರು
ಅಗಣಿತ ಆಶ್ಚರ್ಯನ ಮಹಾಮಹಿಮೆ
ಪೊಗಳಲು ಎನ್ನಳವೆ ೨೮

ಶ್ರೀಶ ಎನ್ನ ಅಪರಾಧಗಳ
ನೀ ಕ್ಷಮಿಸುತ ರಕ್ಷಿಸುವದು ದೇವ
ದಾಸನು ನಾನಲ್ಲವೆ ದೋಷಗಳ
ನೀನೆಣಿಸದೆ ಸಲಹೊ ೨೯

ಕರುಣಾಕರ ಕರಿವರದನೆ ಕಾಯೊ
ದುರಿತಾರಿಯೆ ದುರ್ಜನರನ ತರಿಯೊ
ಕಮಲನಾಭ ವಿಠ್ಠಲನೆ ಕಾಯೊ
ಶರಣಾಗತರನ್ನು ೩೦

## ವಚನ

ಕೇಳು ಭೂಪಾಲಕನೆ, ದೇವರುಷಿ ನಾರದರು ದೇವ ದೇವನ
ದಿವ್ಯ ಮಹಿಮೆಗಳ ಕಾಣುತ್ತ ಬಹಳ ಸಂತೋಷದಿಂ
ತಲೆದೂಗಿ ಬೆರಗಾಗಿ ಸಿರಿರಮಣನ್ವ್ಯಾಪಾರ ಅರಿತು,
ಪೇಳುವರ್‍ಯಾರು ಅರಿಯದಲೆ ಹರಿ ಮಹಿಮೆ ಮರುಳನಂದದಿ
ಚರಿಸಿ ಬಳಲಿದೆನೊ, ಸೌಳಸಾಸಿರ ಸತಿಯರರಮನೆಯ
ಬಿಡದೆ ತಿರುಗಿದನು ; ನಾನು ಬಡವರಾಧಾರಿಯನು ಬಿಡುವರೆ

ವಾರಿಜಾಸನ ಮುಖ್ಯ ಸುರರೆಲ್ಲ ಹರುಷದಲಿ
ನೀರಮಧ್ಯದೊಳಿರುವ ಹರಿಯಧ್ಯಾನಿಪರೆಲ್ಲ ೨

ಉದಯಕಾಲದಿ ಮುಖವ ತೊಳೆಯೆ ಜಲವಿರಬೇಕು
ಮಧುಸೂದನನ ಮನೆಯ ಸಾರಿಸಲು ಜಲಬೇಕು
ಹೃದಯ ಶುದ್ಧದಿ ಸ್ನಾನ ಮಾಡೆ ಜಲವಿರಬೇಕು
ಮುದದಿ ಮಡಿಯುಡುವುದಕೆ ಉದಕವಿರಬೇಕು ೩

ಮೃತ್ತಿಕಾಶೌಚಕ್ಕೆ ಅಗತ್ಯಜಲವಿರಬೇಕು
ನಿತ್ಯ ಗೋಸೇವೆಗೆ ಉದಕಬೇಕು
ಮತ್ತೆ ಶ್ರೀ ತುಳಸಿಗೆರೆಯಲು ಉದಕವಿರಬೇಕು
ಮತ್ತೆ ಹರಿಪೂಜೆಗಗ್ರೋದಕವು ಬೇಕು ೪

ಸಚ್ಚಿದಾನಂದನ ಅಭಿಷೇಕಕ್ಕೆ ಜಲಬೇಕು
ಮತ್ತೆ ಪಾಕವು ಮಾಡೆ ಜಲವುಬೇಕು
ನಿತ್ಯ ತೃಪ್ತನ ನೈವೇದ್ಯಕ್ಕೆ ಜಲವು ಬೇಕು
ಅರ್ತಿಯಿಂದ ಅತಿಥಿ ಪೂಜೆಗೆ ಉದಕಬೇಕು ೫

ಉತ್ತಮರು ಮನೆಗೆ ಬಂದರೆ ಪಾದ ತೊಳಿಬೇಕು
ಮತ್ತೆ ಅವರಿಗೆ ಸ್ನಾನಕಣಿ ಮಾಡಬೇಕು
ಸುತ್ತ ಬೆಳೆಗಳಿಗೆಲ್ಲ ಮತ್ತೆ ನೀರಿರಬೇಕು
ಸತ್ಯ ಮೂರುತಿ ಪಾದದಂಗುಷ್ಟದಲಿ ಜನಿಸಿದ ೬

ಹಸುಮಕ್ಕಳಿಗೆ ನಿತ್ಯ ಎರೆಯೆ ನೀರಿರಬೇಕು
ಕುಸುಮ ಪುಷ್ಪದ ಗಿಡಕೆ ನೀರುಬೇಕು
ವಸುದೇವಸುತನ ತೆಪ್ಪೋತ್ಸವಕೆ ಜಲಬೇಕು
ಎಸೆವ ಕದಲಾರತಿಗೆ ಉದಕಬೇಕು ೭

ನೀರಿನೊಳು ಹಾವಿನ ಮೇಲೆ ಮಲಗಿದ ಹರಿಯ
ನಾಭಿನಾಳದ ತುದಿಯಲಿರುವ ಕಮಲದಲಿ

ಒಬ್ಬರ ಮನೆಯಲಿ ಬೀಗರ ಔತಣ
ಅಬ್ಬರ ನೋಡಿದನು ೨೦

ಒಬ್ಬರ ಮನೆಯಲಿ ಜನನ ಮಹೋತ್ಸವ
ಒಬ್ಬರ ಮನೆಯಲಿ ಬಂಧುಗಳೌತಣವು
ಒಬ್ಬರ ಮನೆಯಲಿ ನಾಮಕರಣದ
ವೈಭವ ನೋಡಿದನು ೨೧

ಒಬ್ಬರ ಮನೆಯಲಿ ಪುರಾಣಶ್ರವಣ
ಒಬ್ಬರ ಮನೆಯಲಿ ದೇವರಪೂಜೆ
ಒಬ್ಬರ ಮನೆಯಲಿ ಅಳಿಯಂದಿರಿಗೆ
ಹಬ್ಬವು ನೋಡಿದನು ೨೨

ಬಂಧು ಮಿತ್ರರೊಡನೆ ಕೂಡಿ
ಮಂತ್ರಾಲೋಚನೆ ಒಂದೆಡೆಯಲ್ಲಿ
ಮಿಂದು ಮಡಿಯನುಟ್ಟು ಭೋಜನ
ಮತ್ತೊಂದಡೆಯಲ್ಲಿ ೨೩

ಬಾಲಕರ ಕೂಡಿ ಗೋಲಿಗಜ್ಜುಗ
ನಾಡುವನು ಒಂದೆಡೆಯಲ್ಲಿ
ನಾರಿಯರೊಡನೆ ಹಾಸ್ಯದಲಿರುವನು
ಮತ್ತೊಂದೆಡೆಯಲ್ಲಿ ೨೪

ತೂಗೋಮಂಚದಿ ಕೂಡಿಸಿ ಕೃಷ್ಣನ
ಹಾಡಿ ಪಾಡುವದೊಂದೆಡೆಯಲ್ಲಿ
ಸ್ನೇಹ ಭಾವದಿ ವನವಿಹಾರವು
ಮತ್ತೊಂದಡೆಯಲ್ಲಿ ೨೫

ಸೌಳಸಾಸಿರ ಸತಿಯರಲ್ಲಿ
ನಾನಾರೂಪದಿ ಕಾಣುತ ಕೃಷ್ಣನ

ಮೆಚ್ಚಿ ಶ್ರೀಹರಿಯೊಡನೆ ನಲಿಯುವ
ವಿಸ್ತರ ನೋಡಿದನು ೧೪

ಇಷ್ಟು ಮಂದಿಗಳೊಳಗೆ ಈಕೆ
ಶ್ರೇಷ್ಠಳಂತೆ ತೋರುತಿಹಳು
ಕೃಷ್ಣನ್ನ ಸೇವಿಸುವ ಭಾಗ್ಯಕೆ
ಪಾತ್ರಳು ಸರಿಯೆನುತ ೧೫

ಕಾಳಿಮರ್ದನ ಕೃಷ್ಣನ ಕಾಣದೆ
ಕಾಳಾದೇವಿಯು ಸೊರಗಿಹಳೇನೊ
ನೋಡಿ ಬಹನೆಂದೆನುತ ನಾರದ
ಹೋದನು ಒಳಗಡೆಗೆ ೧೬

ತೂಗೋಮಂಚದಿ ದೇವನು ಇರಲು
ಕಾಳದೇವಿಯು ತೂಗುತ ನಿಂದಿರೆ
ಭಾಗವತರ ಸಮ್ಮೇಳದಲಿಹ ದೇವನ
ಕಾಣುತ ಬೆರಗಾದ ೧೭

ಸೌಳಸಾಸಿರ ಸತಿಯರನೆಲ್ಲಾ
ನೋಡಿ ಬರುವೆನೆನುತ ಚಿಂತಿಸಿ
ಬೇಗನೆ ಬಂದು ನೋಡಿದನು ಮತ್ತೊ-
ಬ್ಬಳ ಮನೆಯಲ್ಲಿ ೧೮

ಮತ್ತೆ ಮದುವೆಯ ಕಾರ್ಯವು ಮಾಡೆ ಬೃಹ-
ಸ್ಪತ್ಯಾಚಾರ್ಯರ ಒಡಗೂಡತಲಿ
ರತ್ನಮಂಟಪದೊಳಗಿಹ ದೇವನ
ಮತ್ತೆ ನಮಿಸಿದನು ೧೯

ಒಬ್ಬರ ಮನೆಯಲಿ ಯಾಗದ ಕಾರ್ಯ
ಒಬ್ಬರ ಮನೆಯಲಿ ಉಪನಯನದ ರಭಸ

ನೀರಜಾಸನನ ಪಡೆದಿರುವ ಮಹಿಮೆಯ ಕೇಳಿ
ನೀರಿನಲಿ ಹರಿಯ ಅವತಾರ ರೂಪಗಳುಂಟು ೮

ನೀರಿನೊಳು ವಾರುಣಿಯಪತಿಯ ಶಯ್ಯದೊಳಿಹನು
ನೀರಿನೊಳು ಮುಳುಗಿ ವೇದವ ತಂದನು
ನೀರಿನೊಳು ಮುಳುಗಿ ಭಾರವ ಪೊತ್ತು ನಿಂತನು
ನೀರಜಾಕ್ಷನು ನಾರಬೇರ ಮೆದ್ದಿಹನು ೯

ನೀರಜೋದ್ಭವಪಿತನು ಕ್ರೂರರೂಪವ ತಾಳ್ದ
ನೀರೆ ಅದಿತಿಯ ಪುತ್ರನಾಗಿ ನಿಂತ
ನೀರಜಾಕ್ಷನು ಪರಶುವಿಡಿದು ಸಂಚರಿಸಿದನು
ನೀರೆಗೋಸುಗ ಸಾಗರಕೆ ಸೇತುವೆಯ ಕಟ್ಟಿದನು ೧೦

ನೀರಿನೊಳು ಗಜದ ಶಾಪವ ಕಳೆದು ಪೊರೆದನು
ನೀರೆ ದ್ರೌಪದಿಯ ಅಭಿಮಾನವನು ಕಾಯ್ದ
ನೀರ ಮಧ್ಯದಿ ದ್ವಾರಕಾಪುರವ ರಚಿಸಿದನು
ನೀರಜಾಕ್ಷಿಯರ ಕೂಡಿ ನೀರೊಳಗೆ ಆಡಿದನು ೧೧

ಕಮಲಾಕ್ಷಿ ಪುಟ್ಟಿರುವ ಕಮಲ ಜಲದಲ್ಲಿಹುದು
ಕಮಲನಾಭ ವಿಠ್ಠಲ ಜಲದೊಳೋಲ್ಯಾಡುವ
ಶ್ರಮವ ಪರಿಹರಿಪ ಚಂದ್ರನು ಜಲದಿ ಪುಟ್ಟಿಹನು
ಕಾಮಧೇನು ಐರಾವತವು ಪುಟ್ಟಿದ ಜಲವಯ್ಯ ೧೨

## ೧೬೯

ವಾದಿರಾಜಾಶ್ರಮ ನೋಡಲು ಸಂಭ್ರಮ
ಪಾಡಿ ಪೊಗಳುವರಿಗಾಹುದು ಪ್ರೇಮ ಪ

ಕಾಡೊಳಗೆ ಸಂಚರಿಪ ಋಷಿಗಳು
ಪಾಡಿಪೊಗಳುತ ಪರಮ ಪುರುಷನ

ಬೇಡಿದಿಷ್ಟಾರ್ಥಗಳ ಪಡೆಯುತ
ಕೂಡಿ ಸುಖಿಸುವ ಶಿಷ್ಟರಂದದಿ ಅ.ಪ

ಪರಮಸಾತ್ವಿಕರೆಲ್ಲ ಪುರಂದರದಾಸರ
ಪರಮ ಪುಣ್ಯದ ದಿನ ಬರಲು ಸಂಭ್ರಮದಿ
ಪರಿಪರಿವಿಧದಿಂದ ಹರಿದಾಸರೆಲ್ಲರು ತ್ವರದಿಂದ
ಗುರುಗಳಾಜ್ಞೆಯ ಮೀರದೆ ಭರದಿಂದ
ನೆರೆದರತಿ ಶೀಘ್ರದಿಂದಲಿ ಮುದದಿಂದ
ಗುರುಗಳಡಿಗೊಂದಿಸುತ ಕ್ರಮದಿಂದ
ಸರಸವಾಕ್ಯಗಳಿಂದ ಶಿಷ್ಯರಿಂದ
ಹರಿಸಿ ಆಶೀರ್ವಾದದಿಂದಲಿ
ಸುರಿಸಿ ಅಮೃತವಾಣಿ ನುಡಿಯುತ
ಹರುಷಪಡುತಿಹ ಗುರುಗಳಿಹ ಸ್ಥಳ ೧

ಪವಮಾನಮತದವರೆಲ್ಲರೊಂದಾಗುತ
ನಮಿಸಿ ಶ್ರೀಪತಿಗೆ ವಂದನೆ ಮಾಡುತ
ವಿನಯದಿಂದಲಿ ತಮ್ಮನಿಯಮಿತ ಕಾರ್ಯವ
ನಡೆಸುತ್ತ ತಂಬೂರಿಗಳ ಸುಸ್ವರದಿ ಮೀಟುತ
ನಿಂದು ಹರುಷಿಸುತ ತಾಳಗಳ ಬಾರಿಸುತ
ಶಿಷ್ಯರು ಕುಣಿಯುತ್ತ ಬಲುನಾದ ಕೊಡುತಿಹ
ಕಾಲಗೆಜ್ಜೆಗಳೆಲ್ಲ ಘಲುರೆನುತ ದಾಸರಿಗೆ
ಉಚಿತದ ಜೋಳಿಗೆಗಳನೆ ಪಿಡಿದು ನಡಿಯುತ್ತ
ಶ್ರೀರಾಮರ ದೂತನ ಬಾರಿಬಾರಿಗೆ ನಮಿಸಿ
ನಮಿಸಿ ಪೊಗಳುತ್ತ ಹರಿನಾಮ ಸ್ಮರಣೆಯಲಿ
ಮಾರುತೀಶನ ಭಕುತರೆಲ್ಲರು ದ್ವಾರಬಿಡುತಲಿ
ಪೊರಟು ಭಜಿಸುತ ಬೀದಿಯಲಿ ಕುಣಿಯುತ್ತ
ಹರಿಗುಣ ಪಾಡಿ ಪೊಗಳುವ ಪರಮ ವೈಭವ ೨

ಆ ಮಾರುತನ ದಯದಿಯಾಯಿವಾರವು ಮಾಡಿ
ಶ್ರೀನಿಕೇತನ ಪಾಡಿ ಪೊಗಳುತಲಿ

- - - - - - - - -
- - - - - - - - ೮

ನಿಲ್ಲದೆ ಅಲ್ಲಿಂದ ಹೊರಡಲು
ನಲ್ಲೆ ನೀಲಾದೇವಿಯ ಮನೆಗೆ
ಗೊಲ್ಲಗೋವಳ ಇಲ್ಲಹನೋ ಇಲ್ಲವೊ
ಮೆಲ್ಲನೆ ನೋಡುವೆನು ೯

ವ್ಯಾಳಶಾಯಿ ಗುಣಗಳು ಪೊಗಳೆ
ಫಾಲನೇತ್ರನಿಗೊಶವಲ್ಲೆನುತ
ನೀಲಾದೇವಿಯೆ ಕ್ಷೇಮವೆ ಎನುತ
ಕೇಳುತ ಬರುತಿರಲು ೧೦

ದಾಳಪಗಡೆಯನಾಡುತ ಶ್ರೀಶ
ನೀಲಾದೇವಿಯೊಡನೆ ಕೂಡಿ
ಬಹಳ ಸರಸವಾಡುತಿರಲು
ನೋಡುತ ತಲೆದೂಗಿ ೧೧

ಪಕ್ಷಿವಾಹನನಿರದ ಸ್ಥಳವು
ಮತ್ತೊಂದೆಡೆಯಲ್ಲಿಹುದೆಂದೆನುತ
ಲಕ್ಷಣದೇವಿಯ ಮನೆಗೆ ಬಂದು
ಸುತ್ತಲು ನೋಡಿದನು ೧೨

ಮುತ್ತುರತ್ನದ ಪೀಠದ ಮೇಲೆ
ಭಕ್ತವತ್ಸಲನನ್ನು ಕೂಡಿಸಿ
ಉತ್ತಮ ಆಭರಣಗಳಿಂದ ವಿ–
ಚಿತ್ರದಿ ಅಲಂಕರಿಸಿ ೧೩

ಪಟ್ಟೆಪೀತಾಂಬರವನುಡಿಸಿ
ಕಸ್ತೂರಿ ತಿಲುಕವನೆ ಹಚ್ಚಿ

ಜ್ಞಾನಿ ಪುರಂದರದಾಸರ ಚರಿತೆಯ ಪೇಳುವರು
ಸಂಭ್ರಮದಿಂದಲಿ ನಲಿದಾಡುವರು
ಹರಿದಾಸರ ಅದ್ಭುತಕಾರ್ಯಗಳ ಸುಸ್ವರದಿ
ಪಾಡುವರು ಹರಿದಾಸ ಶ್ರೇಷ್ಠರ ಮಹಿಮೆಗಳ
ಇನ್ನುಳಿದ ಶಿಷ್ಯರು ಪೇಳುವರು
ವರ ಪಾರ್ಥಿವ ವತ್ಸರದಿ ಗುರುಗಳ
ಕರುಣ ಪಡೆದವರು ನೆರೆದು ರಾತ್ರಿಕಾಲದಲಿ
ಶ್ರೀ ಹರಿಯ ಭಜನೆ ಮಾಡುತಿರಲು
ಹರುಷ ಪಡುತಲಿ ನಲಿದು ಕಮಲನಾಭ-
ವಿಠ್ಠಲನೆ ಸಲಹು ಎನ್ನುವ ೩

## ನವವಿಧ ಭಕುತಿ

## ೧೭೦

ಶ್ರವಣದಿಂದಲಿ ಪಾಪಹರಣವಾಗುವುದೆಂದು
ಕವಿಗಳೆಲ್ಲರು ಕೂಗಿ ಒದರುತಿಹರು
ಕಿವಿಗಳಿಗಾನಂದದಾಭರಣದಂತಿಹುದು ಶ್ರೀ-
ಹರಿಯ ದಿವ್ಯನಾಮಾಮೃತದರಸವು
ಮಾಧವನ ಮೂರ್ತಿಯನು ನೋಡದಿಹ ಕಂಗಳು
ನವಿಲು ಕಣ್ಣುಗಳೆಂದು ಪೇಳುತಿಹರು
ಕಮಲನಾಭ ವಿಠ್ಠಲನ ಮಹಿಮೆ ಪೊಗಳೆ
ಫಣಿರಾಜನಿಗೆ ವಶವಲ್ಲ ದೇವಾ ೧

ಕೀರ್ತನವು ಮಾಡಲು ಪಾತಕವು ಪರಿಹರವು
ಮಾತುಳಾಂತಕನ ಮಹಿಮೆ ಘನವು
ಶ್ರೀಶನನು ಮನದಣಿಯ ಸ್ತೋತ್ರವನು ಮಾಡಲು
ನಾಶಗೈವನು ದುರಿತರಾಶಿಗಳನು
ಮಾಡಿದಪರಾಧಗಳ ಮಾಧವನು ಮನ್ನಿಸುವ
ಶ್ರೀಧರನ ಸ್ತುತಿಸಿ ಕೊಂಡಾಡುತಿಹರ

ಚಿತ್ತ ಸಂಶಯದಿಂದಲಿ ಚಿತ್ತ
ಭ್ರಮಣೆಯೊ ಎನುತಿರಲು ೨

ಬಂದ ಸುರಮುನಿಯ ಕಾಣುತಲೆ
ಚಂದದಿಂದುಪಚರಿಸುತ ಹರಿಯು
ಮಂದಿಗಳೆಲ್ಲ ಕ್ಷೇಮವೆ
ಬಂದ ಕಾರಣವೇನೆಂದ ೩

ಅಂದ ವಚನವ ಕೇಳಿ ತ್ವರದಿ
ವಂದನೆಯ ಮಾಡಿ ಮುದದಿ
ಇಂದಿರೇಶ ನಿನ್ನನುಗ್ರಹ
ವೆಂದು ವಂದಿಸಿದ ೪

ಮತ್ತೆ ಬರುವೆನೆನುತ ಮುನಿಯ
ಮಿತ್ರವಿಂದೆಯ ಮನೆಗೆ ಬರಲು
ಉತ್ತಮ ಶ್ರೀಹರಿಯ ಕಾಣದೆ
ನೆಟ್ಟನೆ ಒಳಹೊಕ್ಕ ೫

ಛತ್ರಿಛಾಮರಗಳನೆ ಪಿಡಿದು
ಸುತ್ತ ನಾರಿಯರೆಲ್ಲ ಪೊಗಳೆ
ನೃತ್ಯಗಾಯನ ಮಾಡುತಲಿಹರ
ತಕ್ಷಣ ನೋಡಿದನು ೬

ಮುತ್ತು ಕೆತ್ತಿದ ಪಟ್ಟೆಮಂಚದಿ
ಕೃಷ್ಣ ಮಿತ್ರವಿಂದೆಯರಿರಲು
ಸಾಷ್ಟಾಂಗ ನಮನವನೆ ಮಾಡಿದ
ಮತ್ತೆ ಹರುಷದಲಿ ೭

ಇಷ್ಟು ವೈಭವದೊಳಗಿಹ ದೇವನ
ದಿಟ್ಟಿಸಿ ನೋಡಿದನು

ನು ದಯಪಾಲಿಸೆನೆ ನಾರದರ ಸ್ತುತಿಗೆ ಮನ ನಲಿದು
ನಾರಾಯಣನು ಈ ಪರಿಯ ಭಕ್ತರನು ಕಾಣುವುದೆ
ದುರ್ಲಭವು, ಹೋಗಿ ಬಾರೆಂದೆನಲು, ಬಾಗಿ ವಂದನೆ
ಮಾಡಿ, ಸಾಗಿದರು ನಾರದರು ದ್ವಾರಕಾಪುರವ ಬಿಟ್ಟು.

## ಭಾಮಿನಿ ಷಟ್ಪದಿ

ಹೀಗೆ ನುಡಿಯಲು ಕೇಳಿ ನೃಪವರ
ನಾಗಶಯನನು ನಾರದರಿಗೆ ವಿ–
ನೋದ ತೋರಿದ ಪರಿಯ ಅರುಹ ಬೇಕೆನಲು ಶುಕ ಮುನಿಯು
ಕೇಳೆಲೈ ಭೂಪಾಲಚಂದ್ರನೆ
ಪೇಳುವೆನು ಶ್ರೀಕೃಷ್ಣನಡೆಸಿದ ವಿ–
ನೋದ ಕಥೆಗಳ ಕೇಳೆ ದುರಿತಗಳೋಡುವವು ಇರದೆ

## ವಚನ

ವಸುಧೆಪಾಲನೆ ಕೇಳು ಕ್ಷಿತಿಸುತೆಯ ಪತಿಯೊಡನೆ ಅತಿಶಯೋ
ಕ್ತಿಗಳಿಂದ ಉಪಚಾರ ಪೊಂದುತಲಿ ವಸುದೇವ
ಸುತನ ಸಭೆಯಲಿ ಹರುಷದಿಂದಿರಲು ಸತಿ ಸತ್ಯಭಾಮೆರು
ರುಕ್ಮಿಣಿಯರಿಂದೊಡಗೂಡಿ ಅತಿಶಯದ ಲೀಲೆಗಳ ತೋರು
ವನು ಹರುಷದಲಿ; ಅತಿ ಪುಣ್ಯವತಿಯರು ರುಕ್ಮಿಣಿ ಸತ್ಯ
ಭಾಮೆಯರು ಗತಿಯೇನು ಇನ್ನುಳಿದ ಸತಿಯರಿಗೆ
ಎಂದೆನುತ ಅತಿಬೇಗದಿಂದೆದ್ದು ಮತಿವಂತೆಯಾಗಿದ್ದ
ಸತಿ ಜಾಂಬವಂತಿಯ ಅಂತಃಪುರಕೆ ಬರುತಿರಲು–

ಅಷ್ಟಮ ಸತಿಯೇರೊಳಗೆ
ದಿಟ್ಟೆ ಜಾಂಬವಂತಿಯ ಮನೆಗೆ
ಕೃಷ್ಣನ ಪ್ರೇರಣೆಯ ಮೇರೆಗೆ
ಅರ್ಥಿಲಿ ಬರುತಿರಲು ೧

ರತ್ನಗದ್ದುಗೆಯಲಿ ಶ್ರೀ
ಕೃಷ್ಣ ಜಾಂಬವಂತಿಯೇರ ನೋಡಿ

ಕರುಣಾಕರ ಕಮಲನಾಭವಿಠ್ಠಲ
ದುರಿತದೂರನು ಕಾಯ್ವ ಶರಣಜನರ ೨

ಸ್ಮರಣೆಯನು ಮಾಡುತಿಹ ಮನುಜರಿಗೆ ಇಹಪರದಿ
ಪರಮ ಮಂಗಳನೀವ ಪರಮಾತ್ಮನು
ದುರಿತ ದೂರನ ಪಾದಸ್ಮರಣೆ ಮಾಡುವರಿಗೆ
ಪರಿಪರಿಯ ಸೌಖ್ಯಗಳ ಕೊಡುವ ದೇವ
ಮಧುವೈರಿಯನು ಸ್ಮರಿಸೆ ಮುದದಿ ಸಂಪದವೀವ
ದಧಿ ವಾಮನ ಮೂರ್ತಿ ಶ್ರೀಮಾಧವ
ಕನಕಗರ್ಭನ ಪಿತನು ಕರುಣಾನಿಧಿಯು
ಕಮಲನಾಭ ವಿಠ್ಠಲ ಕಾಯ್ವ ಸುಜನರ ೩

ಶಿಲೆಯಾದ ಅಹಲ್ಯೆಯ ಪರಿಪಾಲಿಸಿದ ಪಾದ
ಧರಣಿ ಈರಡಿಗೈದ ದಿವ್ಯಪಾದ
ಶರಧಿಯೊಳು ಧುಮುಕಿ ಫಣಿ ಹೆಡೆಯ ತುಳಿದ ಪಾದ
ವರ ಋಷಿಗಳೆಲ್ಲ ವಂದಿಸುವ ಪಾದ
ಇಂದಿರಾದೇವಿ ಬಹುಚಂದದಿಂದೊತ್ತುತ
ಕಂದರ್ಪನಯ್ಯನಿಗೆ ಪಾದಸೇವ
ಚಂದದಿಂದಲಿ ಮಾಡಿ ಮಾಧವನಿಗೆ
ನಂದಗೋಪಿಯ ಕಂದ ಸಲಹುವನಲು
ಸುಂದರ ಶ್ರೀ ಕಮಲನಾಭ ವಿಠ್ಠಲನು ಒಲಿವ ೪

ಅರ್ಚಿಸುತ ಮೆಚ್ಚಿಸುತ ಸಚ್ಚಿದಾನಂದನನು
ಸ್ವಚ್ಛ ಭಕುತಿಲಿ ಸ್ತೋತ್ರ ಮಾಡುತಿಹರ
ಅಷ್ಟ ಐಶ್ವರ್ಯಪ್ರದನು ನಿತ್ಯಮುಕ್ತಳ ಕೂಡಿ
ಭಕ್ತರ ಹೃದಯದಲಿ ಪೊಳೆವ ದೇವ
ಸತ್ಯ ಸಂಕಲ್ಪನಿಗೆ ಕಸ್ತೂರಿ ತಿಲಕವು
ಮತ್ತೆ ಪಾವಡಿ ಥಳಥಳನೆ ಹೊಳೆಯೆ
ಸುತ್ತ ಬ್ರಹ್ಮಾದಿಗಳ ಸ್ತುತಿಗೆ ದೇವ

## ವಚನ

ನಾರಾಯಣನು ಹೀಗೆ ನಾರದರನುಪಚರಿಸಿ
ಚಾರು ಕುಶಲ ಪ್ರಶ್ನೆ ಮಾಡುತಲಿ ನಸುನಗುತ
ಏನುಕಾರ್ಯವು ನಾರದರೆ ನಿಮ್ಮ ಆಗಮನ
ಹಾನಿಯಾಗುವದಲ್ಲ ಬೇಗ ಪೇಳಿರಿ ಎನಲು
ನಾರದರು ನಮಿಸಿ ನಾರಾಯಣನ ಸ್ತುತಿ ಮಾಡಲು

ದೇವ ದೇವನೆ ದೇವಕಿಯ ಕಂದ
ಮಾವ ಕಂಸನನ್ನು ಉಪಾಯದಿಂದ ತರಿದೆ ಪ

ಶಂಖ ಚಕ್ರಧಾರಿ ಬಿಂಕದಿಂದ ಜಗವ
ಶಂಕೆ ಇಲ್ಲದೆ ಪೊರೆವ ಶಂಕರಾದಿವಂದ್ಯ ೧

ಉರದಿ ಶ್ರೀಯ ಸಹಿತ ಮೆರೆದ ಲಕ್ಷ್ಮೀನಾಥ
ಮುದದಿಂದ ಮುನಿವ್ರಾತ ಉದ್ಧರಿಸೊದಾತ ೨

ನಿಗಮವೇದ್ಯ ನಿನ್ನ ಪೊಗಳಲಳವೆ ಮುನ್ನ
ಮುದದಿಂದ ಭಕ್ತರನು ಪೊರೆದ ಸುಪ್ರಸನ್ನ ೩

ದುಷ್ಟದಾನವರ ಅಟ್ಟುಳಿಯ ತರಿದೆ
ಶಿಷ್ಟರನ್ನು ಪೊರೆದೆ ಇಷ್ಟದಾಯಕನೆ ೪

ಶರಣಾಗತರನೆಲ್ಲ ಪೊರೆವೊ ದೇವ ದೇವ
ಕರುಣದಿಂದ ಕಾಯೊ ಕಮಲನಾಭ ವಿಠ್ಠಲ ೫

## ವಚನ

ಹೀಗೆನುತ ನಾರದರು ವೇದವೇದ್ಯವ ನುತಿಸಿ ಭಾಗವತ
ಜನಪ್ರಿಯ ಭಕ್ತವತ್ಸಲ ದೇವ, ಸಾಗರನಸುತೆ ರಮಣ,
ಸರಸಿಜೋದ್ಭವನಯ್ಯ, ಹೋಗಿ ಬರುವೆನು ಅಪ್ಪಣೆಯ

ಚಿತ್ತವಿಟ್ಟು ಕೇಳ್ವ ಮಾಧವನು ಮುದದಿ
ಕರ್ತೃ ಕಮಲನಾಭ ವಿಠ್ಠಲನು ಕಾಯ್ವ ೫

ವಂದನೆಯನು ಮಾಡೆ ಮುಕುಂದನು ಒಲಿವನು ಮುದದಿ
ಕಂದರ್ಪನಯ್ಯ ಕಮಲಾಕ್ಷ ಹರಿಯೂ
ಸುಂದರಾಂಗ ಶ್ರೀಹರಿಗೆ ಗಂಧ ಪೂಸಿದಳಾಗ
ಇಂದೀವರಾಕ್ಷಿ ನಸುನಗುತ ಬೇಗ
ಇಂದ್ರಾದಿ ಸುರರೆಲ್ಲ ಕೊಂಡಾಡೆ ಮಾಧವನ
ವಂದಿಸುತ ಸಿರಬಾಗಿ ಚಂದದಿಂದ
ಮಂದಾರ ಪಾರಿಜಾತಗಳ ತಂದು
ತಂದೆ ಕಮಲನಾಭ ವಿಠ್ಠಲನ ಮುಡಿಗೆ
ಸಂಭ್ರಮದಿ ಮಳೆಗರೆಯೆ ಚಂದದಿಂದ ೬

ದಾಸ್ಯವನು ಕೈಕೊಂಬ ದಾಸ್ಯಜನರನು ಪೊರೆವ
ಮೀಸಲಾಗಿಹನು ಹರಿದಾಸ ಜನಕೆ
ಪೋಷಿಸೆಂದೆನುವವರ ದೋಷಗಳನೀಡಾಡಿ
ದೋಷರಹಿತನು ಪೊರೆವ ಸರ್ವಜನರ
ಪೂಸಿ ಪರಿಮಳ ದ್ರವ್ಯ ಶ್ರೀಸಹಿತ ಮೆರೆವ
ವಾಸುಕೀಶಯನ ಸಜ್ಜನರ ಪೊರೆವ
ಮುರಳೀಧರ ಮಾಧವನು ಕರುಣದಿಂದ
ಶರಣ ಜನರನು ಪೊರೆವ ಮರೆಯದೀಗ
ಕಮಲನಾಭವಿಠ್ಠಲನು ಕಾಯ್ವದೇವ ೭

ಸಖ್ಯ ಸ್ನೇಹಗಳಿಂದ ಮುತ್ತಿನ್ಹಾರಗಳನು
ಕೃಷ್ಣನ ಕೊರಳಿಗ್ಹಾಕುತಲಿಬೇಗ
ಅರ್ಥಿಯಿಂದಲಿ ರತ್ನ ಮುತ್ತಿನ ಚಂಡುಗಳ
ವಿಚಿತ್ರದಿಂದಾಡುತಿರೆ ನೋಡಿ ಸುರರು
ಮುತ್ತಿನಕ್ಷತೆಗಳನು ಮಾಧವನ ಸಿರಿಮುಡಿಗೆ
ಅರ್ಥಿಯಿಂದ ಸುರಿಸುತಿರೆ ಹರುಷದಿಂದ

ಅಪ್ರಮೇಯನು ಶ್ರೀಶ ಶ್ರೀನಿವಾಸ
ಸರ್ಪಶಯನನು ಕಮಲನಾಭ ವಿಠ್ಠಲ
ನಿತ್ಯ ತೃಪ್ತನು ಪೊಳೆವ ಭಕ್ತರ ಹೃದಯದಲಿ ೮

ಆತ್ಮನಿವೇದನವ ನಿತ್ಯ ತೃಪ್ತಗೆ ಮಾಡಿ
ಅರ್ಥಿಯಲಿ ಅಪ್ರಮೇಯನನು ಸ್ತುತಿಸಿ
ಮುತ್ತು ಮಾಣಿಕ್ಯ ಬಿಗಿದ ತಟ್ಟೆಯಲಿ ತಾಂಬೂಲ
ಅಚ್ಯುತಾನಂತನಿಗೆ ಅರ್ಪಿಸುತಲಿ
ಭಕ್ತಿಯಲಿ ವಂದನೆಯ ಭಕ್ತವತ್ಸಲನಿಗೆ
ನಿತ್ಯ ಮುಕ್ತಳು ಮಾಡಿ ಹರುಷದಿಂದ
ಸತ್ಯ ಸಂಕಲ್ಪ ಶ್ರೀ ಮಾಧವನಿಗೆ
ಮುತ್ತಿನಾರತಿ ಬೆಳಗಿ ಅರ್ಥಿಯಿಂದ
ಕರ್ತೃ ಶ್ರೀ ಕಮಲನಾಭ ವಿಠ್ಠಲನ ಕೊಂಡಾಡಿ ೯

ಗೋವರ್ಧನಗಿರಿ ಎತ್ತಿದ ಗೋವಿಂದನೆ ಶರಣು
ಗೋಗೋಪಾಲರ ಪಾಲಿಪ ಶ್ರೀಪತಿಯೆ ಶರಣು ೨

ಬಕಧೇನುಕ ತೃಣವತ್ಸಾಸುರರ ಸಂಹಾರಿ
ಅಕಳಂಕ ಚರಿತ ಮಹಮಹಿಮ ಕಂಸಾರಿ ೩

ಮುನಿಹೃತ್ಕಮಲದಿ ಶೋಭಿಪ ಮುಚುಕುಂದವರದ
ಸನಕಾದಿ ಮುನಿ ವೃಂದವ ಪೊರೆಯುವ ಧ್ರುವವರದ ೪

ಕಮಲಾಕ್ಷನೆ ಕಮಲಾಪತಿ ವಿಮಲ ಸ್ವರೂಪ
ಕಮಲನಾಭ ವಿಠ್ಠಲ ಪೊರೆ ಎನ್ನದಾತ ೫

## ಆರ‍್ಯ

ಈ ಪರಿ ಸ್ತುತಿಸುತ ಬರುತಿರೆ ನಾರದ
ಶ್ರೀಪತಿ ಕೇಳುತ ಹರುಷದಲಿ
ಗೋಪಾಲಕನೆಂದರಿತಿಹ ಪರಿಯನು
ವ್ಯಾಪಾರದಿ ತಿಳುಹುವೆ ಮುನ್ನ ೧

ಯಾದವಪತಿ ಈ ಪರಿ ಮೌನದೊಳಿರೆ
ಪಾದಕೆ ನಮಿಸುತ ನಾರದರು
ವೇದವೇದ್ಯನ ಮಹಿಮೆ ಕೊಂಡಾಡುತ
ಬಾಗಿ ಸಿರವನಿಂದಿರಲಾಗ ೨

ಮಧುಸೂದನ ವಿಧ ವಿಧದಿಂದರ್ಚಿಸಿ
ಮಧುಪರ್ಕ ಷೋಡಶೋಪಚಾರಗಳಿಂದ
ವಿಧಿ ಸುತನಿಗೆ ದಿವ್ಯಾಸನ ಕೊಡಲು
ಕುಳಿತ ಕಮಲನಾಭ ವಿಠ್ಠಲನೆನುತ ೩

ಕೊರಳೊಳು ಮಣಿಮಾಲೆಗಳಿಂದೊಂಪ್ಪುತ
ಸಿರದೊಳು ಜಟೆ ಶೃಂಗಾರದಿ ಶೋಭಿಸೆ ೧

ಮುದದಿಂ ಮಹತಿ ಎಂಬುವ ವೀಣೆಯಲಿ
ವಿಧ ವಿಧರಾಗವ ಹಾಡಿ ಪಾಡುತಲಿ ೨

ಹರಿನಾಮಂಕಿತ ಚಿಹ್ನೆಗಳಿಂದಲಿ
ಹೊಳೆವಂಗಾರಕ್ಷತೆ ಶೋಭಿಸುತಲಿ ೩

ಹರಿ ನರಹರಿ ನರಹರಿ ನರಹರಿ ನಾರಾಯಣ
ದುರಿತ ನಿವಾರಣ ಶರಣರ ಪೊರೆಯೆಂದು ೪

ಕರೆ ಕರೆ ಮಾಡದೆ ಕಂಸಾರಿಯೆ ಪೊರೆ
ಕಮಲನಾಭ ವಿಠ್ಠಲ ಭಕುತರನೆಂದು ೫

## ವಚನ

ಕೇಳು ಭೂಪಾಲನೆ ದೇವರುಷಿ ನಾರದರು
ದೇವದೇವನ ದಿವ್ಯಗಾನವನೆ ಪಾಡುತ್ತ
ದ್ವಾರಕಾಪುರದ ಮಹಾದ್ವಾರದಲಿ ಬರಬರುತ
ಮಾರನಯ್ಯನ ಪುರದ ಚಾರುವೈಭವ ನೋಡಿ
ಸಾರಸಾಕ್ಷನ ಮಹಿಮೆ ಸೂರೆಯಾಗಲು ಮನದಿ
ನಾರದರು ನಲಿನಲಿದು ಗಾನದಿಂ ಪಾಡುತಿರಲು

ಕರುಣಾಕರ ವರದಾಯಕ ಶರಣರ ಭಯನಾಶ
ಪೊರೆ ಸರ್ವದ ಸ್ಮರಿಸುವರಘ ಭಯ ಶೋಕವಿನಾಶ ಪ

ಮುರಮರ್ದನ ಮುರಳೀಧರ ಮದನಗೋಪಾಲ
ಸುದತಿ ಯಶೋದೆಯ ಸದನದಿ ಮೆರೆದ್ಯೊ ಶ್ರೀಲೋಲ ೧

ಅಕ್ಷಯಗುಣ ಪೂರ್ಣಸರ್ವರ ರಕ್ಷಿಸೆನ್ನುತಲಿ
ಲಕ್ಷ್ಮಿಪತಿಯೆ ಪ್ರಾರ್ಥಿಸುವೆನು ಈಕ್ಷಿಸೆನುತಲಿ
ಪಕ್ಷಿವಾಹನವೇರಿ ಮೆರೆವ ಅದೋಕ್ಷಜನೆನುತಲಿ
ರಕ್ಷ ಶಿಕ್ಷಕನೆಂದು ಪೇಳ್ವರೋ ನಿತ್ಯ ನಿತ್ಯದಲಿ ೩

ಶೋಭನ ಗುಣನೆಂದು ನಿನ್ನಸುರರು ಪಾಡಲು
ಶೋಭಿಪ ನಿನ್ನ ರೂಪ ಹೃದಯದಲಿ ಕಾಣಲು
ಶೋಭಕೃತು ಸಂವತ್ಸರದಲಿ ನಿನ್ನ ಪಾಡಲು
ಶೋಭನಂಗಳನ್ನೆ ಕೊಡುವ ಸ್ವಾಮಿ ಎನ್ನಲು ೪

ಕಡಲಶಯನ ಮೃಡನ ಸಖನೆ ಬಿಡದೆ ರಕ್ಷಿಸು
ತಡೆಯದೆ ನಿನ್ನ ಚರಣ ಸ್ಮರಣೆ ಬಿಡದೆ ಕರುಣಿಸು
ಬಿಡದಲೇ ಬಹಮನದ ತಾಪವೆಲ್ಲ ನೀಗಿಸು
ಕಡಲೊಡೆಯನೆ ಕಮಲನಾಭ ವಿಠ್ಠಲ ಪಾಲಿಸು ೫

## ೩೮

ರಾಜೀವದಳನೇತ್ರ ರಾಮಚಂದ್ರನೆ ಶುಭ-
ನಾಮಧೇಯನೆ ನಿನಗಾನಮಿಸುವೆನು ಪ

ರಾಮರಾಕ್ಷಸಕುಲ ಭಯಂಕರ
ರಾಮದಶರಥ ಪುತ್ರನೆ ವರ
ಸಾಮಗಾನ ವಿಲೋಲ ಶ್ರೀವರ
ರಾಮ ಭರತ ಶತ್ರುಘ್ನ ಪಾಲಕ ಅ.ಪ

ಸುರರೆಲ್ಲ ನೆರೆದು ಋಷಿವರರೆಲ್ಲ ಒಂದಾಗಿ
ವರ ಕ್ಷೀರಾಂಬುಧಿಯ ಸಾರುತ ವೇಗದಿ
ಪರಮಾತ್ಮ ನಿನ ಕಂಡು ಪರಿಪರಿ ಸ್ಮರಿಸುತ
ನೆರೆದರು ದೇವ ಗಂಧರ್ವ ನಾರದರೆಲ್ಲ
ಗರುಡ ಗಮನನೆ ಉರಗಶಯನನೆ

ಉಕ್ಕಿ ಬರುತಿಹ ರೋಷದಿ ಹೊಯ್ದಾಡಿ ದುರುಳರ ವಶವಾಗಲು
ಅಕ್ಕರದಲಿ ದೇವಕಿತನಯ ತನ್ನ
ಮಿತ್ರನ ಸುತನ ವಿಯೋಗ ದುಃಖದ
ತಕ್ಕ ಉಪಾಯದಿ ಪರಿಹರಿಸಲು ಸಾ–
ಮರ್ಥ್ಯನಾಗಿರಲು ನರನಂತೆ ನಟಿಸಿದ ೪

ಹತ್ತು ಹನ್ನೊಂದನೆ ಸಲ ಸಮರದಲಿ ಸರ್ವೇಶನ ಜಯಿಸಲು
ದೈತ್ಯದಾನವ ಜರೆ ಸುತ ಬರುತಿರಲು ಶ್ರೀ ಹರಿ ತಾ ತಿಳಿದು
ಉತ್ತಮ ದ್ವಾರಕಾಪುರ ರಚಿಸುತಲಿ ಜಲಮಧ್ಯದೊಳಿರಲು
ಪಟ್ಟದರಿಸಿ ಅಷ್ಟ ಸತಿಯರು ಸೌಳ
ಸಾಸಿರ ಸತಿಯರ ಕೂಡುವ ಹರುಷದಿ
ಕರ್ತೃಕಮಲನಾಭ ವಿಠ್ಠಲ ಭಕುತರ
ಇಚ್ಛೆಸಲಿಸಲೀಪರಿ ನಟಿಸಿದ ಬಹು ೫

## ೧೪

ತೊಟ್ಟಿಲ ತೂಗುವೆ ಕೃಷ್ಣನ ತೊಟ್ಟಿಲ ತೂಗುವೆ
ಪುಟ್ಟಬಾಲಕರೊಳು ಪರಮ ಶ್ರೇಷ್ಠನಾದನಾ ಪ

ಮೀನನಾಗಿ ಭಾರಪೊತ್ತು ಬೇರು ಮೆಲ್ಲಿದನ
ಕ್ರೂರರೂಪ ತೋರಿ ಭೂಮಿದಾನ ಬೇಡ್ದನ ೧

ಭೂಮಿಪರ ಸಂಹರಿಸಿದ ಶ್ರೀರಾಮಚಂದ್ರನ
ಮಾವ ಕಂಸನ ತರಿದ ಬಲರಾಮನನುಜನ ೨

ಬುದ್ಧರೂಪದಿಂದ ತ್ರಿಪುರರನೊದ್ದ ಧೀರನ
ಮುದ್ದು ತೇಜಿನೇರಿ ಮೆರೆದ ಪದ್ಮನಾಭನ ೩

ಉಲಿವು ಮಾಡಬೇಡಿರಮ್ಮ ಚಲುವ ಮಲಗುವ
ನಳಿನನಾಭನನ್ನು ಸ್ಮರಿಸಿ ನಲಿದು ಪಾಡುವ ೪

ವಾನರಾಧಿಪ ಹಗಲಿರುಳು ಭಕ್ತಿಮಾಡಿ ಧ್ಯಾನಿಪ
ಶ್ರೀ ಮಾನಿನಿಯಳ ಕೈಪಿಡಿಯುತ
ಅಯೋಧ್ಯದಿ ಮೆರೆದ ಶ್ರೀರಾಮ ಚಂದಿರನೆ ೭

ಪಾಂಡುನಂದನ ಮಾಡಿದ ನಿನ್ನ ಬಂಡಿ ಬೋವನ
ಸಂದೇಹಿಸದಲೆ ಅಂದು ಅವರ ಮನೆ
ಎಂಜಲ ಬಳಿದ ಮುಕುಂದನೆ ಬೇಗದಿ ೮

ಮಂಗಳಾತ್ಮಕ ತ್ರಿಪುರರ ಮದ ಭಂಗನಾಶಕ
ಮಂಗಳಮಹಿಮ ವಿಹಂಗವಾಹನ ಸುರ
ಸಂಗೀತಲೋಲ ಕೃಪಾಂಗ ದಯಾನಿಧೆ ೯

ತೇಜಿಯನೇರುತ ಸುಜನರು ಮಾಳ್ಪಪೂಜೆಗೊಳ್ಳುತ
ರಾಜೀವಾಕ್ಷ ರಕ್ಕಸ ಸಂಹಾರಕ ಅ–
ಪಾರ ಮಹಿಮ ರಥವೇರುತ ತವಕದಿ ೧೦

ಕಂಜಲೋಚನ ಕಮಲಾಯತಾಕ್ಷ ಮಂಜುಭೂಷಣ
ಕಂಜದಳಾಂಬಕ ಕಮಲನಾಭ ವಿಠ್ಠಲ
ಝುಗಝುಗಿಸುವ ಮದ್ಹೃದಯ ಮಂಟಪಕೇ ೧೧

## ೨೭

ಬಾರೋ ಶ್ರೀಹರಿ ಶೌರಿ ಬಾರೋ ಭಕ್ತರ ದೊರೆ
ಬಾರೋ ಬಾಬಾ ಮನೆಗೆ ಪ

ಚಾರುತರ ನವರತುನದ ಶೃಂ–
ಗಾರ ರಥದೊಳು ಕುಳಿತು ಬೇಗನೇ

## ೨೬

ಬಾರೋ ಶ್ರೀಹರಿ ಬಾಲಕ ಶೌರಿ ಬಾರೋ ಶ್ರೀಹರಿ ಪ

ಬಾರೋ ಬಾರೋ ಕರುಣಾನಿಧಿ ನಿನ್ನನು
ಬಾರಿ ಬಾರಿಗೆ ಸಿರಬಾಗಿ ನಮಿಸುವೆನು ಅ.ಪ

ಮಾರನಯ್ಯನೆ ಮಂಗಳರೂಪ ತೋರೊ ಬೇಗನೆ
ಸಾರಸಾಕ್ಷ ಸನ್ಮಂಗಳ ಮಹಿಮನೆ
ತೋರೋ ನಿನ್ನ ಮಹಾ ಮೀನರೂಪವನು ೧

ಸುಂದರಾನನ ಚಂದಿರವದನ ಮಂದಹಾಸನೆ
ಇಂದ್ರಾದಿಗಳಿಗೆ ಬಂದ ದುರಿತ ಕಳೆವಂದದಿ
ಬೆನ್ನಿಲಿ ಮಂದರವೆತ್ತಿದ ೨

ಆದಿದೈತ್ಯನು ಭೂದೇವಿಯಪಹಾರ ಗೈದನು
ಆ ದಿತಿಜರ ಸಂಹಾರ ಮಾಡಲು ನೆಲ
ಬೇರುಗಳನೆ ತಿಂದ ಧೀರ ವರಾಹ ಬೇಗ ೩

ಕಂದನಾಡಿದ ಆ ನುಡಿ ಕೇಳಿಯಾನಂದ ತಾಳಿದ
ಮಂದರೋದ್ಧರ ಮುಚುಕುಂದ ವರದ ಸುರ–
ಗಂಗೆಯ ಪಿತ ನರಸಿಂಗರೂಪದಿ ೪

ಬಾಲರೂಪದಿ ಬೇಡಿದ ದಾನ ಭೂಮಿ ಮಾತ್ರದಿ
ಬೇಡಿದುದನೆ ಕೊಟ್ಟಾಮಹೀಪಾಲನ
ದೂಡಿ ಪಾತಾಳಕ್ಕೆ ಬಾಗಿಲ ಕಾಯ್ದೆ ೫

ಶೂರ ರಾಜರ ಸಂಹಾರ ಮಾಡಿ ತೋರಿ ಶೌರ್ಯವ
ಸಾಗರಶಯನಗೆ ತೋರಿ ಪರಾಕ್ರಮ
ಶೂಲಿಯ ಧನುವಿತ್ತೆ ರೇಣುಕಾತ್ಮಜ ೬

# ಕೀರ್ತನೆಗಳ ಕ್ರಮಸೂಚಿ

ಕಮಲಗಂಧಿಯರೆಲ್ಲ ಹರುಷದಿ
ಕಮಲನಾಭವಿಠ್ಠಲನೆ ಪೊಳೆವ ಹೃ-
ತ್ಕಮಲದೊಳು ಮಿಗೆ ಶೋಭಿಸುವ ಹರಿ ೩

೨೧

ಬಾರೈ ರಂಗ ಬಾರೈ ಕೃಷ್ಣ ಬಾರೈ ದೇವ ಕೃಷ್ಣ
ತೋರೈ ನಿನ್ನಯ ಚಾರುಚರಣವ ತೋಯಜಾಕ್ಷ ಪ

ಘಲು ಘಲುರೆನ್ನುತ ರುಳಿಗೆಜ್ಜೆಯನಿಟ್ಟು ಬಾರೈ ದೇವ ಕೃಷ್ಣ
ಕುಣಿಕುಣಿಯುತ ಬಾ ಕುಂತಿಸುತರಪ್ರಿಯ ಬಾರೈ ದೇವ ಕೃಷ್ಣ
ಥಳಥಳಿಸುವ ಪೀತಾಂಬರ ಹೊಳೆಯುತ ಬಾರೈ ದೇವ ಕೃಷ್ಣ
ನಡುವಿಲಿ ಹೊಳೆಯುತ ಪಟ್ಟೆವಲ್ಲಿಯು ಬಾರೈ ದೇವ ಕೃಷ್ಣ ೧

ಕಂಕಣ ಕರಭೂಷಣಗಳು ಹೊಳೆಯುತ ಬಾರೈ ದೇವ ಕೃಷ್ಣ
ಪಂಕಜನಾಭ ಪಾರ್ಥಸಖನೆ ಕೃಷ್ಣ ಬಾರೈ ದೇವ ಕೃಷ್ಣ
ಶಂಖ ಚಕ್ರಗಳ ಧರಿಸುತ ಮುದದಲಿ ಬಾರೈ ದೇವ ಕೃಷ್ಣ
ಶಂಕಿಸದೆಲೆ ಬಾ ಬಿಂಕವ ತೊರೆದು ಬಾರೈ ದೇವ ಕೃಷ್ಣ ೨

ಮುಂಗುರುಳಲಿ ಮುತ್ತಿನರಳೆಲೆ ಹೊಳೆಯುತ
ಬಾರೈ ದೇವ ಕೃಷ್ಣ
ಶೃಂಗಾರದ ಕಿರೀಟವು ಹೊಳೆಯುತ
ಬಾರೈ ದೇವ ಕೃಷ್ಣ
ಸುಂದರ ಕಸ್ತೂರಿ ತಿಲಕವು ಹೊಳೆಯುತ
ಬಾರೈ ದೇವ ಕೃಷ್ಣ
ಕಂಧರದಲಿ ಶೋಭಿಪ ಪದಕಗಳಿಂದ
ಬಾರೈ ದೇವ ಕೃಷ್ಣ ೩

ಮೊಂಗೊಳಲೂದುತ ಹೆಂಗಳರೊಡನೆ
ಬಾರೈ ದೇವ ಕೃಷ್ಣ

ರಂಭೆ ಊರ್ವಶಿ ಮೇನಕೆಯರೆಲ್ಲರು ಕೂಡಿ
ಸಂಭ್ರಮದಲಿ ನಾಟ್ಯವಾಡುತಿರೆ
ಗಂಗೆ ಗೋದಾವರಿ ಕೃಷ್ಣ ತುಂಗಭದ್ರೆ ಯಮುನೆಯರು
ಇಂಬಿಲ್ಲದೆ ಪಾಡುತಿಹರೊ ಶ್ರೀ ಹರಿಯ ೩

ಅತ್ರಿ ವಸಿಷ್ಠ ಗೌತಮ ಭಾರದ್ವಾಜರು
ಅರ್ಥಿಯಲ್ಲಿ ಜಮದಗ್ನಿ ಋಷಿಗಳೆಲ್ಲ
ಸ್ತೋತ್ರಮಾಡುತ ಪುರುಷೋತ್ತಮನನು ಪಾಡಿ
ವಿಶ್ವಾಮಿತ್ರರು ಬಹು ಭಕ್ತಿಯಲಿ ೪

ಸುತ್ತ ಸನಕಾದಿ ನಾರದರೆಲ್ಲ ಪಾಡಲು
ನೃತ್ಯಗಾಯನದಿಂದ ಶ್ರೀ ಕೃಷ್ಣನ
ಅರ್ತಿಯಿಂದ ಅಜಭವ ಸುರರೆಲ್ಲ ಸ್ತುತಿಸಲು
ಸ್ತೋತ್ರಮಾಡಲು ದುರ್ಗದೇವಿಯರು ೫

ಗಜರಾಜ ಗೋಮಾತೆ ಮೊದಲಾದವರು ಬಂದು
ಮಧುಸೂದನನ ನೋಡೆ ನಿಂತಿಹರು
ಮದಗಜಗಮನೇರು ಮುದದಿ ಕಲಶ
ಕನ್ನಡಿಗಳ ಪಿಡಿದು ನಿಂತಿಹರು ಬೇಗದಲಿ ೬

ಮುತ್ತಿನ ಕದಗಳು ತೆಗೆವ ವ್ಯಾಳ್ಯದಲಿ
ನೌಬತ್ತು ನಗಾರಿ ವಾದ್ಯಗಳಾಗಲು
ಸರ್ಪನ್ಹಾಸಿಕೆಯಲ್ಲಿ ಮಲಗಿರುವ ದೇವನ
ಅರ್ಥಿವೈಭವ ನೋಡೊ ವೇಳೆ ಮೀರುವದು ೭

ಗಂಗಾಜನಕನ ಚರಣಂಗಳು ನೋಡುವ
ಬಂಗಾರ ಕಿರುಗಂಟೆಗಳ ನಡುವನು ನೋಡುವ
ರಂಗು ಕೇಸರಿಯ ಪೀತಾಂಬರ ನೋಡುವ
ಶೃಂಗಾರ ವೈಜಯಂತಿಯ ನೋಡುವ ೮

ಮಂಗಳ ಮಹಿಮ ವಿಹಂಗವಾಹನ ಕೃಷ್ಣ
ಬಾರೈ ದೇವ ಕೃಷ್ಣ
ಅಂಗಳದೊಳಗಾಡುತ ನಲಿಯುತ ಬಲು ಚಂದದಿ
ಬಾರೈ ದೇವ ಕೃಷ್ಣ
ಇಂದಿರೆಯರಸನೆ ವಂದಿಸಿ ಬೇಡುವೆ ಬಾರೈ ದೇವ ಕೃಷ್ಣ ೪

ಕಿಲಿಕಿಲಿನಗುತಲಿ ಕುಣಿಕುಣಿಯುತ
ಬೇಗ ಬಾರೈ ದೇವ ಕೃಷ್ಣ
ಕನಕಾಭರಣಗಳಿಂದೊಪ್ಪುತ ಬೇಗ ಬಾರೈದೇವ ಕೃಷ್ಣ
ನಲಿನಲಿಯುತ ಬಾ ಮಣಿಯುತ ಬೇಡುವೆ
ಬಾರೈ ದೇವ ಕೃಷ್ಣ
ದಣಿಸದೆ ಕಮಲನಾಭವಿಠ್ಠಲ ಬೇಗ ಬಾರೈ ದೇವ ಕೃಷ್ಣ ೫

## ೨೨

ಬಾರೋ ಗೋಪಾಲ ಬಾಲ ಸುಶೀಲ
ದೇವಕಿ ಬಾಲ ಕಂಸಾರಿ ಶ್ರೀಲೋಲ ಪ

ಗುರುಳು ಕೂದಲು ಹೊಸ ಅರಳೆಲೆ ಹೊಳಪು
ಕೊರಳ ಕೌಸ್ತುಭಹಾರ ಸರಗಳ ಝುಳಪು ೧

ಮುದ್ದು ಬಾಲನೆ ಹೊಸ ಬೆಣ್ಣೆಮುದ್ದೆಯ ನೀವೆ
ಸದ್ದು ಮಾಡದೆ ಬಾರೊ ಉದ್ಧವಸಖನೆ ೨

ಕಂಠದೊಳಸಲಿ ವೈಕುಂಠ ಶ್ರೀಪತಿಗೆ
ಸೊಂಟಗೆಜ್ಜೆಯು ಕಿರುಗಂಟೆಗಳೊಲಿಯೆ ೩

ಭಕ್ತಿಯಿಂದಲಿ ಕರವೆತ್ತಿ ಪ್ರಾರ್ಥಿಸುವೆನು
ಅಪ್ರಮೇಯನೆ ಪುರುಷೋತ್ತಮ ನಮಿಪೆ ೪

ಮೂರಡಿ ಭೂಮಿಯ ಬೇಡುತ ಬಂದೆ
ನಾಡೊಳು ಕೊಡಲಿಯ ಪಿಡಿಯುತ ನಿಂದೆ ೩

ಸೇತುವೆ ಕಟ್ಟುತ ಸೀತೆಯ ತಂದೆ
ಪಾತಕಿ ಕಂಸನ ನಾಶವ ಗೈದೆ ೪
ಬುದ್ಧನೆಂದೆನಿಸಿದೆ ಶುದ್ಧಮೂರುತಿಯ
ಮುದ್ದು ತೇಜಿಯ ನೇರುತ ಮೆರೆದವನೆ ೫

ಬಾ ಮುರವ್ಯೆರಿ ಬಾ ಬಾರೊ ಶೌರಿ
ಭಾಸುರ ವಂದ್ಯ ಬಾ ಮುದದಿಂದ ೬

ಬಿಡದೆ ನಿನ್ನಯ ಪಾದ ದೃಢದಿ ಭಜಿಪೆನ್ಯೆ
ಕಡಲ ಶಯನ ಕಮಲನಾಭ ವಿಠ್ಠಲನೆ ೭

## ೩೧

ಬೆಳಗಾಯಿತು ಏಳಿ
ನಳಿನನಾಭನ ಪಾದ ನಳಿನ ಸೇವಕರು ಪ

ಉದಯ ಕಾಲದೊಳೆದ್ದು ಹೃದಯ ನಿರ್ಮಲರಾಗಿ
ಮಧುಸೂದನನ ಪಾಡಿ ಸ್ತುತಿಸುತಲಿ
ಮುದದಿಂದ ಮಾಧವನ ವಿಧವಿಧದಿ ಪೂಜಿಸಿ
ಪದುಮನಾಭನ ಪಾಡಿ ಪೊಗಳುವ ಜನರು ೧

ರಂಗನ ಮಹಾದ್ವಾರದ ಮುಂದೆ ಕಾಣುವ
ಶೃಂಗಾರದ ಗಜ ಸಾಲುಗಳ ನೋಡುತ
ಬಂಗಾರ ಕೋಡುಳ್ಳ ಗೋವ್ಗಳಿಗೆರಗುತ್ತ
ಅಂಗಜ ಜನಕನ ಪಾಡಿ ಪೊಗಳುವರು ೨

ಕರುಣದಿಂದಲಿ ಬಾರೊ ಕಮಲ ಸಂಭವನಯ್ಯ
ಕಮಲನಾಭ ವಿಠ್ಠಲ ನಮಿಸುವೆ ಸತತ ೫

೨೩

ಬಾರೋ ದೇವ ದೇವನೇ ಭಾವಜಾರಿಪ್ರಿಯನೆ
ಬಾರೊ ಮನೆಗೆ ಶ್ರೀನಿವಾಸನೆ ಪ

ಬಾರೊ ಭಾಮೆ ರುಕ್ಮಿಣೀಶ
ಬಾರೋ ಯೋಗಿ ಹೃದಯವಾಸ
ಬಾರೊ ಭಕ್ತಜನರ ಪೋಷನೇ ೧

ನಂದ ಗೋಪ ತನಯಗೋಪ-
ವೃಂದದೊಳಗೆ ಕುಣಿದು ಮೆರೆದು
ಮಂದರೋದ್ಧರ ಮದನ ಜನಕನೇ ೨

ಅಂದಿಗೆ ಕಾಲ್ಗೆಜ್ಜೆ ನಾದ-
ದಿಂದ ಕುಣಿದು ನೆರೆದು ನಲಿದು
ಸುಂದರಾಂಗ ಶುಭಕರಾಂಗನೇ ೩

ಸರಿಗೆ ನಾಗಮುರಿಗೆ ಮುತ್ತಿನ
ಸರಗಳ್ವೊಳಯೆ ಉರದಿ ಲಕ್ಷ್ಮಿ
ಜರಿಪೀತಾಂಬರ ಧಾರಿ ಶೌರಿಯೇ ೪

ಕೋಟಿ ಸೂರ್ಯಕಾಂತಿ ಮುಖಲ-
ಲಾಟ ಕಸ್ತೂರಿ ತಿಲಕ ಶಿರದಿ ಕಿ-
ರೀಟ ಧರಿಸಿ ಮೆರೆವ ದೇವನೇ ೫

ಮುರಳಿ ನುಡಿಸಿ ತರುಣಿಯರನು
ಮರುಳು ಮಾಡಿ ತುರುಕರುಗಳ
ಪೊರೆದ ಕಮಲ ನಾಭ ವಿಠ್ಠಲನೆ ೬

## ೨೯

ಬಾ ಹರಿ ಬಾ ಹರಿ ಬಾ ಹರಿ ಬೇಗ
ಶ್ರೀಹರಿ ಶೌರಿ ಮುರಾರಿಯೆ ಬೇಗ ಪ
ಅಂದಿಗೆ ಕಿರುಗೆಜ್ಜೆಗಳೊಲಿಯುತಲಿ
ಚಂದದಿಂದಲಿ ನಲಿದಾಡುತ ಬಾರೈ ೧

ಗುರುಳು ಕೂದಲು ಮುಖಹೊಳೆವೊ ಮುರಾರಿ
ಪಣೆಯೊಳು ತಿಲುಕದ ಹೊಳೆವ ಶೃಂಗಾರಿ ೨

ಥಳಥಳಿಸುವ ಪೀತಾಂಬರ ಧಾರಿ
ಎಳೆತುಳಸಿಯ ವನಮಾಲೆಯ ಶೌರೀ ೩

ಕಂಕಣ ಕರ ಭೂಷಣಗಳು ಹೊಳೆಯೆ
ಟೊಂಕದಿ ಕರಗಳನಿಡುತಲಿ ಬಾರೈ ೪

ಕಾಮನಪಿತ ಕೊಳಲೂದುವ ಸೊಬಗು
ಕಮಲನಾಭ ವಿಠ್ಠಲ ಬಲು ಬೆಡಗು ೫

## ೩೦

ಬಾ ಹರಿ ಭಕುತರ ಭಯ ಪರಿಹರಿಸುತ
ಸರಸಿಜ ಸದನೆಯರೊಡಗೂಡಿ ನಲಿಯುತ ಪ

ನೀರೊಳು ಮುಳುಗಿ ಮೀನನೆಂದೆನಿಸಿ
ಭಾರವ ಪೊತ್ತಿಹ ಕೂರ್ಮನೆ ಜವದಿ ೧

ಕೋರೆಗಳಿಂದ ಧಾರುಣಿತಂದ
ಕ್ರೂರನುದರ ಕರುಳ್ಹಾರವೆ ಚಂದ ೨

## ೨೪

ಬಾರೋ ನಮ್ಮ ಮನೆಗೆ ಬೇಗನೆ ಗೋಪಾಲಕೃಷ್ಣ
ಬಾರೋ ಶ್ಯಾಮ ಸುಂದರಾಂಗನೆ ಪ

ಬಾರೊ ಭಾಮೆ ರುಕ್ಮಿಣೀಶ ಬಾರೊ ಯೋಗಿ ಹೃದಯವಾಸ
ಬಾರೊ ದ್ವಾರಕಾಪುರೀಶ ಬಾರೊ ಭಕ್ತಜನರ ಪೋಷ ಅ.ಪ

ಅಂದಿಗೆ ಕಾಲ್ಗೆಜ್ಜೆ ಸರಪಣಿ ಪಾಡಗರುಳಿಯು
ಕೆಂದಾವರೆಯು ಪೋಲ್ವಪಾದದಿ
ನಂದಗೋಪ ತನಯ ಗೋಪ
ವೃಂದದೊಳಗೆ ಕುಣಿದು ನಲಿದು
ಇಂದಿರೇಶ ಶ್ರೀಶನೆ ಬಂದೊಂದು
ಹೆಜ್ಜೆನಿಡುತ ಮುದದಿ ೧

ಉಟ್ಟದಟ್ಟಿಯು ಪಟ್ಟೆಚಲ್ಲಣ ಹವಳಕಟ್ಟು
ಗಟ್ಟಿ ಸರಪಣಿ ಕಿರುಗಂಟೆಯು
ಕಟ್ಟಿದ ಉಡುದಾರಗೆಜ್ಜೆ
ಶ್ರೇಷ್ಠತನದಿ ಮೆರೆಯುತಿರಲು
ಪುಟ್ಟಬಾಲರೊಡನೆ ಪುಟ್ಟ
ಪುಟ್ಟ ಹೆಜ್ಜೆನಿಡುತ ನಲಿದು ೨

ದುಂಡು ಕರಕೆ ಗುಂಡು ಬಿಂದಲಿ ಮುಂಗೈಮುರಿಗೆ
ಉಂಗುರಗಳು ಶೋಭಿಸುತಲಿ
ಬಂದಿ ಬಾಪುರಿಗಳು ತೋಳ
ಬಂದಿ ನಾಗಮುರಿಗಿ ಕರದಿ
ಚಂದ್ರನನ್ನು ಪಿಡಿದು ನಲಿದ
ಸುಂದರಾಂಗ ಚೆಲುವ ಕೃಷ್ಣ ೩

ಅಂದು ವರಗಳ ಕೊಟ್ಟು ಹಿಂದಿರುಗಲು ಶಿವನು
ಹಿಂದೆ ಬೆನ್ನಟ್ಟಿದ ರಕ್ಕಸನೂ
ಹಿಂದುರಗದಲೆ ಓಡುತಲೆ ಶ್ರೀ
ತಂದೆ ಕಮಲನಾಭ ವಿಠ್ಠಲ
ನೆಂದು ಮೊರೆಯಿಡೆ ಕೇಳಿ ತ್ವರದಲಿ
ಬಂದು ರಕ್ಷಿಸಿ ಕಾಯ್ದ ಶ್ರೀಹರಿ ೩

## ೨೮

ಬಾಲಕೃಷ್ಣ ಬಾ ಬಾ ಹರಿ ಬಾಲಗೋಪಾಲ
ಸುಶೀಲ ಶ್ರೀಲೋಲ ಪ

ಗೋಕುಲದಿ ಪುಟ್ಟಿ ಆಕಳನೆ ಕಾಯ್ದ
ಗೋವರ್ಧನವನೆತ್ತಿ ಗೋಪವೃಂದ ಕಾಯ್ದ ೧

ಬಾಲತನವ ನೋಡಿ ಪಾಲುಬೆಣ್ಣೆ ಸೂರೆ
ಬಾಲಗೋಪರೊಡನೆ ಚೋರನೆನಿಸಿ ಮೆರೆದ ೨

ಮುರಳಿನಾದಗೈದು ಪರಿಪರಿಯ ಜನರ
ಮರುಳುಗೈಸಿ ಮೆರೆದ ಸುರಮುನಿ ವಂದ್ಯ ೩

ಮಡದಿಯರು ಜಲದಿ ಮುದದಿಂದಾಡುತಿರಲು
ಮದನನಯ್ಯ ವಸ್ತ್ರಗಳನೆ ಕದ್ದ ಚೋರ ೪

ಕಾಳಿ ಮಡುವ ಧುಮುಕಿ ಕಾಳಸರ್ಪನ ತುಳಿದ
ಕಾಮಜನಕ ಹರಿ ಶ್ರೀ ಕಮಲನಾಭ ವಿಠ್ಠಲ ೫

ಶಶಿಮುಖಿಯರ ಕೂಡಾಡದಿರೆನುವೆ
ಮೊಸರು ಬೆಣ್ಣೆ ಪಾಲ್ಸಕ್ಕರೆ ಕೊಡುವೆ ೩

ಜರದವಲ್ಲಿ ಅಲಂಕರಿಸುತ ನಲಿವೆ
ಪರಿಪರಿ ಗೆಳೆಯರ ಕೂಡಿಸಿ ಕೊಡುವೆ
ಮುರಳಿ ನುಡಿಸೆನ್ನುತ ಕರ ಮುಗಿವೆ
ಪರಮಾತ್ಮನೆ ಜಗನ್ಮೋಹನ ಹರಿಯೆ ೪

ಕಮಲ ಭವೇಂದ್ರಾದ್ಯಮರರು ಪೊಗಳೆ
ಕಮಲ ಪುಷ್ಪ ಮಲ್ಲಿಗೆ ಮಳೆ ಕರೆಯೆ
ಕಮಲನಾಭ ವಿಠ್ಠಲ ಶ್ರೀಹರಿಯೆ
ಶ್ರಮ ಪರಿಹರಿಸೆನ್ನುತ ಪ್ರಾರ್ಥಿಸುವೆ ೫

## ೧೨

ಕ್ಷಮಾ ಸಮುದ್ರ ನಿನ್ನ ಸಮಾನರಿಲ್ಲ
ರಮಾ ಬ್ರಹ್ಮಾದಿಗಳು ಪೊಗಳೆ ಪ

ಉಮೆಯರಸ ನಿನ್ನ ಚರಣಮಹಿಮೆ ತನ್ನ
ತರುಣಿಯೊಡನೆ ಹಗಲಿರುಳು ಪೇಳುವ ದಿವ್ಯ ಅ.ಪ

ಅರಿಯದೆ ಅಜಮಿಳ ತರಳ ನಾರಗನೆಂದು
ಮರಣ ಕಾಲದಿ ಒದರೆ
ಸರಸೀಜಾಕ್ಷನು ತನ್ನ ಪರಿವಾರದವರೆಂದು
ಸಿರಿದೇವಿಯೊಳು ಪೇಳಿ ತ್ವರಿತದಿ ರಕ್ಷಿಸಿದ ೧

ನಕ್ರನ ಬಾಧೆಗೆ ಸಿಕ್ಕಿದ ಗಜರಾಜ
ಚಕ್ರಪಾಣಿಯ ಭಜಿಸೆ
ಆ ಕ್ಷಣದಿ ತನ್ನ ಚಕ್ರಕಾಜ್ಞೆಯ ಮಾಡಿ
ಲಕ್ಷ್ಮೀದೇವಿಗ್ಹೇಳದೆ ಪಕ್ಷಿ ಹೆಗಲೇರಿ ಬಂದ ೨

ಭಕ್ತರೆಲ್ಲ ನೆರೆದು ನಿನ್ನ
ಭಕ್ತಿಪಾಶದಿಂದ ಬಿಗಿದು
ಇಚ್ಛೆ ಬಂದ ತೆರದಿ ಕುಣಿಸೆ
ಮೆಚ್ಚಿ ಅವರ ಪೊರೆವೆ ದೇವ ೬

ಬಂದ ಜನರು ಛಂದದಿಂದ
ತುಂಗಭದ್ರೆ ಸಂಗಮದಲಿ
ಮಿಂದು ನಿನ್ನ ವಂದಿಸುವರೊ
ತಂದೆ ಕಮಲನಾಭವಿಠ್ಠಲ ೭

೧೧

ಕೇಶವ ಬಾ ನಾರಾಯಣ ಬಾ ಬಾ
ಮಾಧವ ಬಾ ಮಧುಸೂದನ ಬಾ ಪ

ಗೋವಿಂದ ಬಾ ಬಾ ಗೋಪಾಲ ಬಾ ಬಾ
ಗೋವರ್ಧನ ಗಿರಿಧಾರಿಯೆ ಬಾ ಅ.ಪ

ರಂಗನೆ ಅಂದಿಗೆ ಗೆಜ್ಜೆಯ ಕಟ್ಟಿ
ಚುಂಗುಬಿಟ್ಟು ರುಮಾಲನೆ ಸುತ್ತಿ
ಶೃಂಗಾರದ ಹಾರ ಪದಕಗಳ್ಹಾಕಿ
ಅಂಗಳದೊಳಗಾಡಲು ಕಳುಹುವೆನು ೧

ಚಂಡು ಬುಗುರಿ ಗೋಲಿ ಗಜ್ಜುಗ ಹರಿಯೆ
ಗುಂಡು ಬಿಂದಲಿನಿಟ್ಟು ಕರದಲಿ ಕೊಡುವೆ
ಹಿಂಡು ಗೋಪಾಲರ ಕೂಡಿಸುವೆ
ಪುಂಡರಿಕಾಕ್ಷನೆ ಪಾಲಿಸು ದೊರೆಯೆ ೨

ಹಸುಳೆ ನಿನಗೆ ಹೊಸ ಬೆಣ್ಣೆಯ ನೀವೆ
ಬಿಸಿ ಬಿಸಿ ಕಡುಬು ಕಜ್ಜಾಯವ ಕೊಡುವೆ

## ಲೋಕನೀತಿ

# ೧೦

ಔತುಕೊಂಡಿ ಯಾಕೊ ನರಹರಿ
ಪ್ರಾರ್ಥನೆಯನ್ನು ಕೇಳೊ ಸ್ವಾಮಿ ಪ

ವೇದ ತಂದು ಭಾರ ಪೊತ್ತು
ಕೋರೆ ತೋರಿ ಕರುಳ ಬಗೆದು
ಬೇಡಿ ಭೂಮಿ ದೂಡಿನೃಪರ
ಸಾಗರವ ಬಂಧಿಸಿದ ಭಯವೋ ೧

ಕದ್ದು ಬೆಣ್ಣೆ ಕಳ್ಳನೆನಿಸಿ
ವದ್ದು ತ್ರಿಪುರಾಸುರರ ಸದೆದು
ಹದ್ದನೇರುವುದನೆ ಬಿಟ್ಟು
ಹಯವನೇರಿದ ಭಯವೋ ಸ್ವಾಮಿ ೨

ತರಳಗೊಲಿದು ಬರಲು ನಿನ್ನ
ಇರಿಸಿ ಸ್ನಾನಕೆನುತ ಪೋಗಿ
ತ್ವರದಿ ಬಂದು ನೋಡಲು ಅ
ದ್ಭುತದಿ ಬೆಳೆದ ಭಯವೋ ದೇವ ೩

ನಿಲುಕದಿರಲು ನಿನ್ನ ವದನ
ಯುವಕ ನೋಡಿ ಮೊರೆಯನಿಡಲು
ತವಕಿಸುವಿ ಬಾಲಕನೆ ನಿನ್ನ
ಸಮಕೆ ಎನ್ನ ಮಾಡಿಕೊ ಎಂದು ೪

ಸಿರದಿ ಕರವನಿಡುತ ತನ್ನ
ಸಮಕೆ ಬರುವ ತೆರದಿ ನಿನ್ನ
ಸಿರವ ಪಿಡಿದು ಬಿತ್ತಿ ಸ್ತುತಿಸೆ
ಕುಳಿತೆ ಕೂಡಲಿಯ ತೀರದಲಿ ೫

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೧೧. | ಯಾಕೆ ಮನದಲಿ ಶೋಕಿಸುತ್ತಿರುವೆ | ೧೫೦ |
| ೧೧೨. | ಹರಿನಾರಾಯಣ ಎನ್ನಿರೊ ಸಜ್ಜನರು | ೧೫೧ |
| | **ಸಂಪ್ರದಾಯದ ಕೀರ್ತನೆಗಳು** | |
| ೧೧೩. | ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ಜೋ | ೧೫೨ |
| ೧೧೪. | ಆರೋಗಣೆಯ ಮಾಡು ಶೀ ವೆಂಕಟೇಶ | ೧೫೩ |
| ೧೧೫. | ಉಡಿಯ ತುಂಬಿರೆ ಕಡಲೊಡೆಯನ | ೧೫೪ |
| ೧೧೬. | ಕದವ ತೆಗೆಯೆ ಸುಂದರಿವಯ್ಯಾರಿ | ೧೫೫ |
| ೧೧೭. | ಜನಕರಾಜನಸುತೆ ಜಾನಕಿ ಜೋ ಜೋ | ೧೫೭ |
| ೧೧೮. | ಜಯ ಜಯ ಶ್ರೀಹರಿ ಶೌರಿ | ೧೫೮ |
| ೧೧೯. | ಜಯ ಜಯ ಮಂಗಳಂ ನಿತ್ಯ ಶುಭಮಂಗಳಂ | ೧೬೧ |
| ೧೨೦. | ಜಯ ಮಂಗಳಂ ನಿತ್ಯ ಶುಭಮಂಗಳಂ..... | ೧೬೧ |
| ೧೨೧. | ಜಯ ಮಂಗಳ ಶುಭ ಶುಭಮಂಗಳ | ೧೬೨ |
| ೧೨೨. | ಜಯಲಕ್ಷ್ಮಿ ಬಾ ಹಸೆಗೆ | ೧೬೩ |
| ೧೨೩. | ಜೋ ಜೋ ಜೋ ಜೋ ಜೋ ವೆಂಕಟೇಶ | ೧೬೩ |
| ೧೨೪. | ಜೋ ಜೋ ಜೋ ಜೋ ಲಾಲಿ ಗೋವಿಂದ | ೧೬೬ |
| ೧೨೫. | ಜೋ ಜೋ ಶ್ರೀಹರಿ ಮಲಗೊ ಜೋಗುಳ | ೧೬೭ |
| ೧೨೬. | ಪತಿ ಮಂದಿರದಲಿ ನೀ ಸುಖವಾಗಿ ಬಾಳು | ೧೬೯ |
| ೧೨೭. | ಪತಿಯ ಮಂದಿರದಲಿ ಸುಖವಾಗಿ ಬಾಳಮ್ಮ | ೧೭೦ |
| ೧೨೮. | ಪರಮಾನಂದದಿ ಸರಸಿಜಾಕ್ಷಿಯರೆಲ್ಲ | ೧೭೧ |
| ೧೨೯. | ಬಂದರು ನಾರದರ್ಥರುಷದಲಿ | ೧೭೨ |
| ೧೩೦. | ಬಾಗಿಲು ತೆಗೆಯಲೆ ಭಾಮತಿ ರನ್ನಳೆ | ೧೭೪ |
| ೧೩೧. | ಮಂಗಳಂ ಜಯ ಮಂಗಳಂ ರಾಮ | ೧೭೬ |

ಕಮಲ ಮುಖಿಯರೆಲ್ಲ ಬನ್ನಿ ಕುಣಿದು ಪಾಡುವ
ಕಮಲನಾಭ ವಿಠ್ಠಲನಂಘ್ರಿ ಸ್ಮರಣೆ ಮಾಡುವ ೫

## ೧೫

ತ್ರಿಜಗದ್ವ್ಯಾಪಕ ಹರಿ ಎನುವರು ಸುಜನರು
ನಿಜದಲಿ ಪೇಳಿವದಾರಕ್ಕಾ
ಅಜಭವಾದಿಗಳಿಗರಸನಾದ
ಹದಿನಾಲ್ಕು ಲೋಕಕೆ ದೊರೆ ತಂಗಿ ೧

ನೀರೊಳು ಮುಳುಗುತ ಮೀನರೂಪದಿ
ಸಾರುವ ಮಯ್ಯವದಾರಕ್ಕ
ನೀರೊಳು ಮುಳುಗಿ ವೇದವ ತಂದು ಸುತಗಿತ್ತ
ಧೀರ ಮತ್ಸ್ಯಮೂರುತಿ ತಂಗಿ ೨

ಭಾರ ಬೆನ್ನಿಲಿ ಪೊತ್ತು ಮೋರೆ ಕೆಳಗೆ ಮಾಡಿ
ನೀರೊಳು ವಾಸಿಪದಾರಕ್ಕ
ವಾರಿಧಿ ಮಥಿಸಿದಮೃತ ಸುರರಿಗೆ ಇತ್ತ
ಧೀರ ಕೂರ್ಮ ಮೂರುತಿ ತಂಗಿ ೩

ಕೋರೆದಾಡಿಯಲಿ ಧಾರುಣಿ ನೆಗಹಿದ
ಘೋರನೆನುವರಿವದಾರಕ್ಕ
ಕ್ರೂರ ಹಿರಣ್ಯಾಕ್ಷನ ಕೊಂದು ಭೂಮಿಯ ತಂದ
ಶೂರ ವರಹ ಮೂರುತಿ ತಂಗಿ ೪

ಕ್ರೂರ ರೂಪ ತಾಳುತ ಕರುಳ್ಗಳ
ಮಾಲೆ ಹಾಕಿದವದಾರಕ್ಕ
ಪೋರನ ಸಲಹಲು ಕಂಬದಿಂದುಸಿದ
ನಾರಸಿಂಹ ಮೂರುತಿ ತಂಗಿ ೫

ಕಮಲಾಕ್ಷ ಯಾಗಶಾಲೆಗೆ ಗೋಪರನು ಕಳುಹಿ
ರಮೆಯರಸಗೆ ಬಹಳ್ಹಸಿವೆನುತಿರಲು
ಕಮಲಾಕ್ಷನ ನುಡಿ ಗಮನಿಸದೆ ರುಷಿವರರಿಗೆ
ಕಮಲ ಮುಖಿಯರೆಲ್ಲ ಪರಮ ಸಂಭ್ರಮದಿಂದ
ಕಮಲನೇತ್ರಗೆ ವಿವಿಧ ಭಕ್ಷಗ–
ಳಮಿತ ಘೃತ ಪರಮಾನ್ನಗಳನು
ಕಮಲನಾಭ ವಿಠ್ಠಲಗೆ ಅರ್ಪಿಸಿ
ಶ್ರಮವ ಕಳೆದೈದಿದರು ಮುಕ್ತಿಯ ೫

ಯಾಕೆ ಮೆಚ್ಚಿದೆಯಮ್ಮ ಲೋಕ ಸುಂದರಿಯೆ
ಶ್ರೀ ಕಮಲಜಪಿತ ಲೋಕ ಮೋಹಕನ

## ೩೭

ರಂಗಧಾಮ ಭುಜಂಗ ಶಯನ
ಮಂಗಳಾತ್ಮಕನೆ ಶ್ರೀಶನೆ ಪ

ಗಂಗಾಜನಕ ಉತ್ತುಂಗ ಮಹಿಮನೆ
ಸಂಗರಹಿತನೆ ಭಂಗಹರಿಪನೆ ಅ.ಪ

ಶ್ರೀಶ ನಿನ್ನನು ಪ್ರಾರ್ಥಿಪರಘ ಶೋಧಿಸೆನುತ
ಶ್ರೀ ಸಮೇತರಾಗಿ ಭಕ್ತರ ಪೋಷಿಸೆನ್ನುತ
ವಾಸುದೇವ ಅನಂತಮಹಿಮ ಶ್ರೀಶನೆನ್ನುತ
ದಾಸರೆಲ್ಲರು ಘೋಷಿಸುವರು ಶೇಷಶಯನ ರಕ್ಷಿಸೆನುತ ೧

ಸಾಧುಜನ ಹೃದಯವಾಸನೆನ್ನುತ ಪೇಳ್ವರೊ
ಸಾಧನ ಜೀವರಿಗೆ ಪರಮಪ್ರಿಯನೆಂಬರೊ
ಮೋದತೀರ್ಥ ಸುಧಾರಸ ಸೇವಿಸಿರೆಂಬರೋ
ಆದಿ ಪುರುಷ ಅನಾದಿ ಅನಂತ ಮಹಿಮನೆಂಬರೊ ೨

**ಯುಗಾದಿಯಂದು ರಚಿತವಾದ ಹಾಡುಗಳು**

**(೧೯೬೧ ರಿಂದ ೧೯೮೨)**

ವತ್ಸಾಸುರನ ಮಡುಹಿದೆಂಬೊರೊ ಅಡವಿಯಲಿ ಕಾಡ-
ಕಿಚ್ಚನುಂಗಿ ಬೆಳೆದಿ ಎಂಬೊರೊ ತಾಯಿಗೆ ಬಾಯೊಳ
ಹೆಚ್ಚಿನ್ವಿಷಯ ತೋರ್ದಿ ಎಂಬೊರೊ
ಕಚ್ಚ ಬಂದ ಫಣಿಯ ಮೆಟ್ಟಿ ತುಳಿದು ಜಲವ
ಸ್ವಚ್ಛಗೈದನೆಂದಾಶ್ಚರ್ಯ ಪೇಳುತಿಹರೊ ೩

ಕರಡಿ ಮಗಳು ಮಡದಿಯೆಂಬೊರೊ ಪುಷ್ಪವನು ತರಲು
ತೆರಳಿ ಯುದ್ಧ ಮಾಡ್ದನೆಂಬೊರೊ ದೇವೇಂದ್ರನ ಗೆಲಲು
ತರುಣಿ ಸಮರಗೈದಳೆಂಬೊರೊ
ಮುರಳಿನಾದದಿಂದ ತರುಣಿಯರ ಮನವ
ಮರುಳುಗೈದನೆಂದು ಪರಿಪರಿ ಪೇಳುವರೊ ೪

ಕೆಟ್ಟದ್ವಿಜನ ಪೊರೆದಿ ಎಂಬೊರೋ ವನವನವ ಚರಿಸಿ
ಸುಟ್ಟ ದಾಸಗೊಲಿದೆ ಎಂಬೊರೋ ಒಪ್ಪಿಡಿಯ ಗ್ರಾಸವ
ಕೊಟ್ಟದ್ವಿಜನ ಪೊರೆದಿಯೆಂಬೊರೊ
ಅಟ್ಟಹಾಸದಿ ತಂದ ರುಕ್ಮಿಣಿಯ ತನ್ನ
ಪಟ್ಟದರಸಿಯೆಂದು ಸ್ಪಷ್ಟ ಪೇಳುತಿಹರೊ ೫

ಶಿಲೆಯ ಸತಿಯಗೈದನೆಂಬರೊ ಅಡವಿಗಳ ಚರಿಸಿ
ಬಲುಕಪಿಗಳ ಕೂಡ್ದನೆಂಬೊರೊ ಭಯ ಭಕ್ತಿಗೆ ಮೆಚ್ಚಿ
ಫಲದ ಎಂಜಲ ಸವಿದನೆಂಬೊರೊ ಮೆಚ್ಚಿ
ಸುಲಭದಿಂದ ದೈತ್ಯಕುಲವನೆಲ್ಲ ಸವರಿ
ಛಲದ ದಶಶಿರನ ವಧೆಯ ಪೇಳುತಿಹರೊ ೬

ಪುಟ್ಟಬ್ರಹ್ಮಚಾರಿ ಎಂಬೋರೊ ಬಲಿರಾಜನ ಬೇಡಿ
ಕೊಟ್ಟದಾನ ಕೊಂಡನೆಂಬೋರೊ ಈರಡಿಯನಳೆದು
ಮೆಟ್ಟಿ ಸಿರವ ತುಳಿದನೆಂಬೋರೊ
ಎಷ್ಟು ಪೇಳಲಿ ನಿನ್ನ ಶ್ರೇಷ್ಠಗುಣಗಳನ್ನು
ದಿಟ್ಟ ಕಮಲನಾಭ ವಿಠ್ಠಲ ಸರ್ವೇಶ ೭

ಅಡಿಯಿಡುತಲಿ ಬಾ ಮೃಡಸಖ ನಿನ್ನಯ
ಅಡಿಗೆರಗುವರ್ಗೆ ತಡೆಯದೆ ಬಾರೆಂದು ೪

ವರಹಸ್ತದಿ ಬೆಣ್ಣೆಯ ಮುದ್ದೆಯ ಕೊಡುವೆ
ಬಾರೆನ್ನಯ ದೊರೆಯೆ
ಜರದೊಲ್ಲಿಯ ಮುರಳಿಸಹಿತ ನಡುವಿಗೆ ಕಟ್ಟುವೆನು
ಬಾ ಭಕುತರ ಪೊರೆಯೆ
ಉಗುರಿಂದ ಗಿರಿಯನು ಎತ್ತಿದ ಧಣಿಯೆ
ಸುರಚಿಂತಾಮಣಿಯೆ
ಹಗಲು ಇರಳು ನಿನ್ನಗಲಿರಲಾರೆ ಶ್ರೀ-
ಕಮಲನಾಭವಿಠ್ಠಲ ಬೇಗಬಾರೆಂದು ೫

೬

ಏನು ಚೋದ್ಯ ಶ್ರೀನಿಧೆ ಹರಿ
ಮಾನಿನಿ ಶ್ರೀದೇವಿ ಭೂದೇವಿರಮಣ ಪ

ಸೃಷ್ಟಿಕರ್ತನೆಂದು ಪೇಳ್ವರು ಪಾಂಡವರ ಮನೆಯ
ಬಿಟ್ಟಿ ಬಂಡಿಬೋವನೆಂಬೋರು ಪಾಂಚಾಲಿಗೆ ಒದಗಿದ
ಕಷ್ಟಕಳೆದು ಪೊರೆದನೆಂಬೊರೊ
ಕೆಟ್ಟದಾನವರ ಅಟ್ಟುಳಿಯ ಕಳೆದು
ದುಷ್ಟಕಂಸನವಧೆಯ ಸ್ಪಷ್ಟ ಪೇಳುತಿಹರೊ ೧

ಗಜನ ಸಲಹಿ ಪೊರೆದನೆಂಬೊರೊ ನೆಗಳೆಯನು ಸೀಳಿ
ತ್ರಿಜಗದೊಡೆಯ ಶ್ರೀಶನೆಂಬೊರೊ ಪ್ರಹ್ಲಾದ ಧೃವಗೆ
ನಿಜಸೌಭಾಗ್ಯ ಇತ್ತೆ ಎಂಬೊರೊ
ವಿಜಯ ಸಾರಥಿಯ ವಿಶ್ವರೂಪ ತೋರಿ
ಸುಜನರನ್ನು ಪೊರೆದ ನಿಜವ ಪೇಳುತಿಹರು ೨

ಅರಳು ಮಲ್ಲಿಗೆ ಪುಷ್ಪದ ಹಾರಗಳು
ಮುತ್ತಿನ ಪದಕಗಳು
ಕೊರಳೊಳು ಮುತ್ತಿನ ಸರಗಳಿಂದೊಪ್ಪುತ
ಮುರುಳಿಯ ನೂದುತ ಸರಸರ ಬಾರೆಂದು ೧

ಗುರುಳು ಕೂದಲೊಳೊಪ್ಪುವ ಅರಳೆಲೆಯು
ಸೊಗಸಿನ ನವಿಲ್ಗರಿಯು
ಬಿಗಿದು ಸುತ್ತಿದ ಸಿರದಲಿ ಕೇಶಗಳು
ಅತಿ ಶೋಭಿಸುತಿಹವು
ಚದುರಿದ ಕೇಶದಿ ಕೆಂದೂಳಿಗಳು
ಮಧುವೈರಿಯ ಕೇಳು
ವಿಧವಿಧ ರಾಗದಿ ಪಾಡುತ ನಿನ್ನನು
ಸದನದಿ ಪೂಜಿಸಿ ನೋಡುವೆ ಬಾರೆಂದು ೨

ನೊಸಲಲ್ಲಿ ಕುಡಿನಾಮವನಿಟ್ಟಿಹಳು
ನೋಡುತ ಹಿಗ್ಗುವಳು
ಎಸಳು ಕಣ್ಣಿಗೆ ಕಪ್ಪನೆ ತೀಡುವಳು
ಬಣ್ಣಿಸಿ ಕರೆಯುವಳು
ಎಸೆವೊ ಕರ್ಣಕೆ ನೀಲದ ಬಾವುಲಿಯೂ
ರತ್ನದ ಚೌಕಳಿಯು
ಬಿಸುಜನಾಭ ನಿನ್ನ ಶಶಿಮುಖಿಯರುಗಳು
ರಸಕಸಿ ಮಾಳ್ಪರು ಹಸನಾಗಿ ಕೂಡೆಂದು ೩

ಅರಳುಕೆಂದಾವರೆ ಪೋಲುವ ಚರಣ
ಸ್ಮರಿಸುವರಘಹರಣ
ಸುರರು ಕಿನ್ನರರೋಲೈಸುವ ಚರಣ
ವರ ಸುಗುಣಾಭರಣ
ಘಲುಘಲುಘಲುರೆಂದೊಪ್ಪುವ ಚರಣ
ಸಜ್ಜನರಾಭರಣ

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|

## ಭಾಗ-೨

### ದೀರ್ಘ ಕೀರ್ತನೆಗಳು

ಕರದಿ ಕಂಕಣ ಭೂಷಣ ಕರುಣದಿ ಸುರರ
ಪೊರೆವ ವೈಭವ ಕಾರಣ
ಕರವ ತೋರುತ ತನ್ನ ಚರಣ ಸೇವೆಯ ಮಾಳ್ಪ
ಪರಮ ಭಕ್ತರನೆಲ್ಲ ತ್ವರದಿ ಪಾಲಿಪೆನೆಂದು
ಸುರವರ ವಂದ್ಯನು ಪರಿಪರಿವರಗಳ
ಕರದು ನೀಡುವ ಸಿರಿ ಕರಿರಾಜವರದನು
ಸರಸಿಜನಾಭ ಸನ್ಮಂಗಳ ಮಹಿಮನು
ಉರಗಗಿರಿಯ ಶ್ರೀ ವರ ಶ್ರೀನಿವಾಸನು ೨

ಪಟ್ಟೆನಾಮವು ಫಣೆಯೊಳು
ಕಸ್ತೂರಿ ತಿಲಕ ಒಪ್ಪುತಿರೆ ವೈಭವದೊಳು
ಸರ್ಪಶಯನ ಸರ್ವೋತ್ತಮ ಸಿರದೊಳು
ರತ್ನಕಿರೀಟನಿಟ್ಟು ಅತ್ಯಂತ ಶೋಭಿಸಲು
ಸುತ್ತಲ ಚಾಮರವೆತ್ತಿ ಬೀಸುತಿರೆ
ನರ್ತನ ಗಾಯನ ವಿಸ್ತರಿಸಲು ಪುರು–
ಷೋತ್ತಮ ತಾನಿರ್ಲಿಪ್ತನಾಗಿ ಸರ್ವ
ಕರ್ತೃಕಮಲ ನಾಭ ವಿಠ್ಠಲ ಸರ್ವೋತ್ತಮ ೩

## ೮

ಎರೆದು ಪೀತಾಂಬರವನುಡಿಸಿದಳಾಗ
ವರ ಗೋಪಿಯು ಬೇಗ ಪ

ಮುರುಳಿಯನೂದುತ ಪರಿಪರಿ ಗೆಳೆಯರು
ಪರಮಾತ್ಮನೆ ನಿನ್ನರಸುತಲಿಹರೆಂದು ಅಪ

ಗುರುಳು ಕೂದಲು ಮುಖದಲ್ಲಿ ಹೊಸ ಬೆವರು
ಥಳಥಳಿಸುತಲಿಹುದು
ಎಳೆಯ ಶ್ರೀ ತುಳಸಿಯ ವನಮಾಲೆಗಳು
ಗಳದಲಿ ಶೋಭಿಪುದು

ಮರಳಿ ಭಸ್ಮಾಸುರನ ಭಾಧೆಗೆ
ತರಹರಿಸಿ ಮುಂದೋರದಿರುವ
ಸಮಯದಲಿ ಸ್ತ್ರೀರೂಪ ತಾಳುವ
ತ್ವರದಿ ರಕ್ಷಿಸಿ ಪೊರೆದ ದೇವನು ೯

ಕಮಲಸಂಭವನಯ್ಯ ಕಮಲ ಜಾತೆಯ ಪ್ರಿಯ
ಕಮಲಾಕ್ಷ ಕಂಸಾರಿ ಕರುಣಾನಿಧೆ
ಶರಣು ಶರಣೆನ್ನುತ ನಭವ ತುಂಬಲು ಸ
ಸುರಗಂಧರ್ವರು ಪಾಡಿಪೊಗಳುತಿಹರು ದೇವ
ಕನಕಗರ್ಭನ ಪಿತನೆ ರಕ್ಷಿಸು
ಕಮಲನಾಭ ವಿಠ್ಠಲನೆ ನಮಿಸುವೆ
ಸವಿನಯದಿ ನಿನ್ನ ಸ್ತುತಿಪ ಭಾಗ್ಯವ
ಕರುಣಿಸೆನಗೆ ಶ್ರೀ ಕರುಣಾನಿಧಿಯೆ ೧೦

೭

ಎಂಥಾ ಚಲುವ ಶ್ರೀ ಹರಿ ಭಕ್ತರೋದ್ಧಾರಿ
ಎಂಥಾ ಚಲುವ ಶ್ರೀ ಹರಿ ಪ

ಎಂಥಾ ಚಲುವ ಲಕ್ಷ್ಮೀಕಾಂತ ಶ್ರೀಭೂಸಹಿತ
ಚಿಂತಿತಾರ್ಥವ ನೀವ ಕಂತುಪಿತನು ಹರಿ ಅಪ

ಚರಣದಂದುಗೆ ಗೆಜ್ಜೆಯು ಘಲುಘಲುರೆಂದು
ಮೆರೆವ ಪೈಜನರುಳಿಯು ಜರದ ಪೀತಾಂಬರವು
ನಡುವಿನ ಚಲ್ಲಣವು ಸಡಗರದಿಂದ ನಿಂತ
ಮದನಗೋಪಾಲನು ಹೃದಯದಿ ಹಾರವು
ಕೌಸ್ತುಭ ಹೊಳೆಯಲು ವಿಧವಿಧ
ಪದಕಗಳಿಂದಲಿ ಶೋಭಿಪ
ಅದ್ಭುತ ಮಹಿಮನು ವಿಧಿಭವವಂದ್ಯನು
ಸದಮಲಕಾಯನು ಸಚ್ಚಿದಾನಂದನು ೧

೧

## ಗಣೇಶ ಪ್ರಾರ್ಥನೆ

ವಂದಿಪೆ ನಾ ನಿನ್ನನು ಸೊಂಡಿಲ ಗಣಪ ಧ
ಬಂದೆನ್ನ ಸಲಹೊ ನೀನು ಪ

ಪುಂಡರೀಕಾಕ್ಷನುದ್ದಂಡ ಪರಾಕ್ರಮ
ಕೊಂಡಾಡಿಸುವಿ ವಕ್ರತುಂಡನೆಂಬರೊ ನಿನ್ನ ಅಪ

ಪಾಶಾಂಕುಶಧರನೇ ಮೋದಕ ಹಸ್ತ
ಭಾಷಿಗ ನೀನಹುದೋ
ಆಶಾಪಾಶಗಳಿಂದ ಘಾಸಿಗೊಂಡಿಹ ಮನ
ಬೇಸರ ಕಳೆದೆಮ್ಮ ಪೋಷಿಪನನು ತೋರೊ ೧

ಗೌರಿಯ ವರಪುತ್ರನೆ ಪ್ರಾರ್ಥಿಸುವೆ ಶ್ರೀ–
ಶೌರಿಯ ಪಾದ ಸ್ಮರಣೆ
ಗೌರವದಿಂ ಮಾಳ್ಪ ಶೌರ್ಯ ಎನಗೆ ಕೊಟ್ಟು
ಮಾರ ಪಿತನ ಪಾದ ತೋರಿಸು ತವಕದಿ ೨

ಅಂತರಂಗದ ಶತ್ರುಗಳಿಂದಲಿ ಮನ
ಚಿಂತೆಗೆ ಗುರಿಗೈಸಿತೊ
ಎಂತು ಈ ಭವ ದಾಂಟುವಂಥ ಪಥವ ಕಾಣೆ
ಕಂತುಪಿತನ ಪಾದ ಚಿಂತನೆ ಕೊಡಿಸಯ್ಯ ೩

ವಾನರ ನಿಕರದೊಳು ಶ್ರೇಷ್ಠನ ಪ್ರಭು
ವಾರಿಧಿಯನು ಬಂಧಿಸೆ
ಆದಿಮೂರುತಿ ನಿನ್ನ ಆರಾಧಿಸಿದನೆಂಬ
ಸೋಜಿಗ ಸುದ್ದಿಯು ಮೂರ್ಜಗದೊಳಗುಂಟು ೪

ಚಂದ್ರ ಸೂರ್ಯರ ಪೋಲ್ವ ಚೌರಿ ರಾಗಟಿ ಜಡೆ
ಬಂಗಾರ ಹೊಳೆಯುತ್ತ ಬಡನಡು ಬಳುಕುತ್ತ
ಕಂಗಳ ಕಡೆನೋಟದಿಂದಲಿ
ಭಂಗಪಡಿಸುತ ಅಸುರ ಕೋಟಿಯ
ಮಂದಗಮನದಿ ಅಡಿಯನಿಡುತಲಿ
ಬಂದಳಮೃತದ ಕಲಶ ಪಿಡಿಯುತ ೬

ಕಂಗಳು ಮುಚ್ಚಿ ಕುಳಿತಿರಲು ದಾನವ ಪಂಕ್ತಿ
ಮುಂದೆ ಕಾಲ್ಗೆಜ್ಜೆ ಧ್ವನಿಯ ಮಾಡುತ
ಅಂದಿಗೆ ಸರಪಣಿನಾದ ತುಂಬಲು ಭರದಿ
ಸುಂದರಿ ಬಂದಿಹಳೆಂದು ದಾನವರೆಲ್ಲ
ಮಂದಹಾಸದಿ ಮೈಮರೆತು ಮ
ತ್ತೊಂದು ತೋರದೆ ಕಳವಳಿಸುತಲಿರೆ
ಇಂದಿರೇಶನು ದೇವತೆಗಳಿಗೆ
ಪೊಂದಿಸಿದ ಅಮೃತವನು ಹರುಷದಿ ೭

ಕಲಕಲಕೂಗುತ ಕಲಹಕೆನ್ನುತ ಬರೆ
ಬಲವು ಸಾಲದೆ ಹಿಂದಿರುಗಲವರು
ಸುರರು ಪುಷ್ಪದ ಮಳೆಕರೆದರು ದೇವನ
ವರ ಋಷಿಗಳು ನೆರೆದು ಸ್ತುತಿಸಿ ಕೊಂಡಾಡಲು
ಪರಮ ಪುರುಷನೆ ಪುಣ್ಯಚರಿತನೆ
ಗರುಡ ಗಮನನೆ ಉರಗಶಯನನೆ
ಸರಸಿಜಾಕ್ಷನೆ ನಮಿಪೆವೆನ್ನುತ
ಸನಕಾದಿಗಳು ಸಂಸ್ತುತಿಸೆ ದೇವನ ೮

ಪರಶಿವನಿದ ನೋಡಿ ಪರಿಪರಿ ಪ್ರಾರ್ಥಿಸಿ
ತರುಣಿಯ ರೂಪವ ನೋಡಲನುವಾಗಲು
ಸರಸಿಜಾಕ್ಷನ ಸ್ತ್ರೀರೂಪ ನೋಡುತಲಿ ಮೈ
ಮರೆದು ಕೈಮುಗಿದು ಕೊಂಡಾಡಿ ಸುತ್ತಿಸಿದನು

ಕಮಲ ನಾಭವಿಠ್ಠಲ ಭಕ್ತರ ಹೃದಯ
ಕಮಲದೊಳಗೆ ಶೋಭಿಪ
ಮಿನುಗುವ ಮಧ್ವಮಂಟಪದೊಳು ರಾಜಿಪ
ಸನಕಾದಿವಂದ್ಯನ ಕ್ಷಣ ಬಿಡದಲೆ ತೋರು ೫

## ಭಗವಂತನ ಸಂಕೀರ್ತನೆ

### ೨

ಅಷ್ಟರೊಳಗೆ ಕೃಷ್ಣ ಬಂದನೆ
ಸೃಷ್ಟಿಗೊಡೆಯ ದೇವನು ಪ

ಜಗದುದರ ಜ್ಞಾನಿಗಳ ಧ್ಯಾನಕೆ
ಗೋಚರಾಗೋಚರನಾಗುತ ಅಪ

ಅಂದಿಗೆ ಕಾಲ್ಗೆಜ್ಜೆ ಸರಪಣಿ
ಬಂದಿ ಕಂಕಣ ತೋಳಬಾಪುರಿ
ಮಂದಹಾಸ ಮುಂಗುರುಳು ಮುಖದ
ಸುಂದರಾಂಗನ ಹುಡುಕುತಿರಲು ೧

ತರಳರೊಡನೆ ಕೂಡಿ ಕೃಷ್ಣ
ಮುರಳಿನಾದ ಗೇಯ್ಯುತಿರಲು
ಸರಸಿಜಾಕ್ಷನ ಕಾಣದೆ ತವಕಿಸಿ
ಹರಿಯ ಹುಡುಕುತಿರಲೆಶೋದೆ ೨

ವತ್ಸಗಳ ಬಾಲಗಳನೆ ಪಿಡಿದು
ಸ್ವೇಚ್ಛೆಯಿಂದ ನಲಿಯುತಿರಲು
ಅಚ್ಚುತನೆಲ್ಲೊ ಕಾಣೆನೆನುತ
ಕೃಷ್ಣ ಕೃಷ್ಣನೆಂದು ಕರೆಯೆ ೩

ಗಂಗೆಯ ಪಡೆದ ಪಾದಗಳ ಶೃಂಗಾರ
ಅಂದಿಗೆ ಕಿರುಗೆಜ್ಜೆ ಸರಪಣಿಯು
ಚಂದುಳ್ಳ ಬೆರಳುಗಳಿಗೆ ಪಿಲ್ಲಿ ಕಿರುಪಿಲ್ಲಿ ಕಾ-
ಲುಂಗರಗಳನಿಟ್ಟು ರಂಭೆಯಂತ್ಹೊಳೆಯಲು
ಬಂದಿ ಬಾಪುರಿ ಥಳಥಳಿಸುತಲಿ
ಚಂದದ ನಾಗ ಮುರಿಗಿ ತಾಯಿತ
ಸುಂದರ ಹಸ್ತ ಕಡಗ ಹಾಸರ
ಇಂದಿರಾಕ್ಷಿ ಕೈ ಬಳೆಗಳ್ಹೊಳೆಯುತ ೩

ಹಲವು ಸೂರ್ಯರ ಕಾಂತಿ ಹೊಳೆವೊ ಪೀತಾಂಬರ
ಸರಿಗೆ ಅಂಚಿನ ಕುಪ್ಪುಸವನೇ ತೊಟ್ಟು
ನಡುವಿಗೆ ನವರತ್ನ ಬಿಗಿದ ಪಟ್ಟೆಯನಿಟ್ಟು
ಸಡಗರದಲಿ ಆಣೆಮುತ್ತಿನ ಸರಗಳು
ಸರಗಿ ಏಕಾವಳಿಯು ವಜ್ರದ
ಪದಕಗಳು ಥಳಕೆಂಬ ಸರಗಳು
ಕೊರಳ ಗೆಜ್ಜೆಟ್ಟಿಕೆಯು ಕಂಠಿಯು
ಮುರಳಿಸರ ಕಠ್ಠಾಣಿವಲಿಯುತ ೪

ಹೊಳೆವೊ ಗಲ್ಲಕೆ ಥಳಥಳಿಪ ಅರಿಶಿನ ಹಚ್ಚಿ
ಹೊಳೆವೊ ಮೀನ್ ಬಾವುಲಿ ಕರ್ಣದಲಿ
ಗಿಳಿಗೆಜ್ಜೆ ಚಳತುಂಬು ಬುಗುಡಿ ಬಾವುಲಿ ಚಂದ್ರ
ಮುರುವು ಸರಪಳಿಗಳು ಥಳಥಳ ಹೊಳೆಯಲು
ಆಣಿಮುತ್ತಿನ ಮುಖುರ ಬೇಸರಿ
ಜಾಣೆ ನಾಶಿಕದಲ್ಲಿ ಹೊಳೆವ ಬು-
ಲಾಕುನಿಟ್ಟಿ ಬೆಳಕು ಗಲ್ಲದ
ಮೇಲೆ ಥಳಥಳ ಹೊಳೆವ ಕಾಂಚಿಯು ೫

ಸಣ್ಣ ಬೈತಲೆ ಬಟ್ಟು ಚಂದ್ರ ಸೂರ್ಯರ ನಿಟ್ಟು
ಹಿಂದೆ ಜಡೆಬಿಲ್ಲೆ ಗೊಂಡ್ಯಗಳನಿಟ್ಟು

ಛತ್ರಿ ಚಾಮರಗಳನೆ ಪಿಡಿದಿಹರು ಎಡಬಲದಿ
ಸ್ತುತಿಸುತ ಎತ್ತಿ ಸ್ವರಗಳ ಗಾನಪಾಡುವರು
ಚಿತ್ತೈಸು ಹರಿ ಬಾ ಬಾರಿತ್ತ
ಬಾಬಾರೆಂದು ಕರೆಯುವರು
ಸುತ್ತ ತುಂಬರು ನಾರದರ ಪರಿ
ನೃತ್ಯಗಾನಗಳಿಂದ ಸ್ತುತಿಪರು
ಕರ್ತೃ ಕಮಲನಾಭ ವಿಠ್ಠಲರ–
ಥೋತ್ಸವದಿ ನಲಿನಲಿವ ದೇವನ ೫

೬

ಎಂತು ಶೋಭಿಸುತಿಹಳು ಈ ಕನ್ನಿಕೆ
ಸಂತೋಷದಿಂದಲಿ ಸುರರು ಸ್ತುತಿಸುತಿರಲು ಪ

ಮಂಥರಗಿರಿ ತಂದು ಸಿಂಧುವಿನೊಳಗಿಟ್ಟು
ಚಂದದಿಂ ಮಥಿಸಲಮೃತ ಪುಟ್ಟಲು
ಬಂದು ದಾನವರ ಪಹರಿಸಬೇಕೆನುತಿರಲು
ನಿಂದರು ಸುರರು ಮುಂದೋರದೆ ಚಿಂತಿಸೆ
ಇಂದಿರಾಪತಿ ಇವರ ಭಾವವ
ಕಂಡುಮನದಲಿ ಹರುಷಪಡುತಲಿ
ಬಂದು ಅಸುರರ ಸುರರ ಮನ್ನಿಸಿ
ನಿಂದ ಶ್ರೀ ಗೋವಿಂದ ಮುದದಲಿ ೧

ಸಾಲಾಗಿ ಕುಳಿತಿರಿ ಮೇಲಾದಮೃತವನ್ನು
ಲೀಲೆಯಿಂದಲಿ ಬಡಿಸುವೆನೆನ್ನಲು
ಕೇಳಿ ಅಸುರರು ಹರುಷತಾಳಿ ಸಂಭ್ರಮದಿಂದ
ಸಾಲಾಗಿ ಕುಳಿತು ಆ ವೇಳೆ ನೋಡುತಲಿರಲು
ಶ್ರೀ ರಮಣ ಕರದಲ್ಲಿ ಕಲಶವ
ಲೀಲೆಯಿಂದಲಿ ಪಿಡಿದು ನಿಲ್ಲಲು
ತಾಳಿ ಹರುಷವ ದಾನವರು ಸು–
ಮ್ಮಾನದಿಂದಲಿ ನೋಡುತಿಹರು ೨

ಮನೆ ಮನೆಗಳ ಪೊಕ್ಕು ಪಾಲು
ಮೊಸರು ಬೆಣ್ಣೆ ಮೆಲುವೆನೆನುವ
ವನಿತೆಯರ ಸಂತೈಸಿ ಕಳುಹಿ
ತನಯನೆಲ್ಲೆಂದುಡುಕುತಿರಲು ೪

ಬಂದನು ಬಲರಾಮ ಭಯದಿ
ಇಂದಿರೇಶ ಮಣ್ಣು ಮೆಲುವ
ನೆಂದು ಪೇಳೆ ಬಾಯ ತೆಗಿಸಿ
ಕಂಡು ವಿಶ್ವವ ವಿಸ್ಮಯಗೊಳುತಿರೆ ೫

ಸುರಗಂಧರ್ವರು ನೆರೆದರಂಬರದಿ
ಪರಮ ಧನ್ಯಳೆಶೋದೆ ಎನುತ
ಹರಿಯ ಗುಣಗಳನ್ನೆ ಸ್ತುತಿಸಿ
ಹರುಷದಿಂದ ನಲಿಯುತಿರಲು ೬

ಕಮಲ ಸಂಭವ ಜನಕನನೆತ್ತಿ
ವಿನಯದಿಂದ ಮುದ್ದಿಸುತ್ತಿರೆ
ಕಮಲನಾಭ ವಿಠ್ಠಲನ ಸಿರದಿ
ಕಮಲ ಕುಸುಮ ಮಳೆಗರೆದರು ೭

ಮಂಗಳಂ ಜಯ ಮಂಗಳಂ ಶುಭ
ಮಂಗಳಂ ಶ್ರೀ ಕೃಷ್ಣಗೇ

## ೩

ಉಡುಪಿ ಕೃಷ್ಣನ ನೋಡಿರಿ ಶ್ರೀಹರಿ ಚರಿತ
ಸಡಗರವನು ಕೇಳಿರಿ ಪ

ಪೊಡವಿಯೊಳು ಸಮರಿಲ್ಲ ಈತನ
ಉಡುಪ ಮುಖ ಶ್ರೀ ಕೃಷ್ಣರಾಯನ
ಕಡಲತಡಿಯಲಿ ನೆಲಸಿದಾತನ
ಮೃಡಪುರಂದರೊಡೆಯ ದೇವನ ೧

ಮಧ್ವಸರೋವರ ಸ್ನಾನವ ಮಾಡುತ ಮನ
ಶುದ್ಧಭಾವದಿ ನಲಿದು
ಮಧ್ವಶಾಸ್ತ್ರವ ಸಾಧು ಸಜ್ಜನರಿಗೆ ಪೇಳ್ದ
ಪದ್ಧತಿ ಮೀರದೆ ಶ್ರದ್ಧಾಭಕುತಿಯಿಂದ ೨

ಮಧ್ಯದಲ್ಲಿಹ ಅನಂತೇಶ್ವರನನು
ಶುದ್ಧ ಭಕುತಿಲಿ ನಮಿಸಿ ಸ್ತುತಿಸುತ
ಮುದ್ದು ಕೃಷ್ಣನ ಹೆಜ್ಜೆ ಪಂಜ್ತಯ
ಶ್ರದ್ಧೆ ಸಡಗರ ನೋಳ್ಪಸುಜನರು ೩

ಕಾಲಲಂದುಗೆ ಗೆಜ್ಜೆಯು ಕಯ್ಯೊಳು ಕಡ–
ಗೋಲನೇಣನೆ ಪಿಡಿದು
ಬಾಲನಂದದಿ ಗೋಪಾಲರೂಪವ ತೋರ್ದ
ಶ್ರೀ ಲಲಾಮನ ದಿವ್ಯ ಬಾಲಕೃಷ್ಣನ ರೂಪ ೪

ಬಾಲಯತಿಗಳು ವೇಳೆ ವೇಳೆಗೆ
ಬಾಲಕೃಷ್ಣನ ಪೂಜೆ ಮಾಡುತ
ಬಾಲರೂಪವ ನೋಡಿ ಸುಖಿಪರು
ಶೀಲ ಗುಣ ಸುರವರನ ಸ್ತುತಿಪರು ೫

ಮಧ್ವರಾಯರಿಗೊಲಿದು ಉಡುಪಿಯ ಮಣ್ಣ–
ಗೆಡ್ಡೆಯೊಳಗೆ ಪೊಳೆದು
ಅದ್ವೈತ ಮತದ ಸದ್ದಡಗಿಸಿ ಮೆರೆದಂಥ
ಮುದ್ದು ಸರ್ವಜ್ಞರ ಆಜ್ಞಾಧಾರಕರೆಲ್ಲ ೬

ಶುದ್ಧ ತತ್ವಜ್ಞರು ರಚಿಸಿದ
ಪದ್ಧತಿಯ ಸಾಧಿಸುತ ಸಂತತ
ಶ್ರದ್ಧೆಯೊಳು ಹರಿಕಾರ್ಯ ನಡೆಸುವ
ಶುದ್ಧಯತಿಗಳ ಸೇವೆಗೊಲಿಯುವ ೭

ಭಕ್ತರನು ಉದ್ಧರಿಸಲೋಸುಗ
ಬೆಟ್ಟದಲಿ ಉದ್ಭವಿಸಿದಾತನ ೧

ವಾಸುದೇವನ ಮಹಿಮೆ ಪೊಗಳುತ್ತ ನ-
ರಸಿಂಹ ಲಕ್ಷ್ಮೀ ನಾರಸಿಂಹ ನ-
ರಸಿಂಹ ನರಸಿಂಹ ಎಂದೆನುತ ಹರಿ-
ದಾಸರೆಲ್ಲರು ಸಾರಸಾಕ್ಷನೆ ನಿನ್ನ ಪೊಗಳುತ್ತ
ದ್ವಾರ ದ್ವಾರದಿ ಪೂಜೆಗೊಳ್ಳುತ
ಮಾರಪಿತ ಮಹಲಕ್ಷ್ಮೀ ಸಹಿತದಿ
ದೋರ ರಥದೆಡೆಯಲ್ಲಿ ನಿಲ್ಲುತ
ತೇರ ನೇರುವ ಶ್ರೀ ರಮೇಶನ ೨

ಸಾರಪದಕಗಳಿಂದ ಶೋಭಿಸುತ ಝಳಝಳಿಪ
ವಜ್ರದ ತೋರ ಮುತ್ತಿನ ಮಾಲೆ
ಹೊಳೆಯುತ್ತ ಥಳಥಳಿಪ ನೊಸಲಲಿ
ಸಾರ ಕಸ್ತೂರಿ ತಿಲಕ ರಂಜಿಸುತ
ಮಾರ ಬಿಲ್ಲೆಂತೆಸೆವ ಪುಬ್ಬಿನ
ಚಾರುತರ ಶೃಂಗಾರ ನಯನದ
ವಾರೆ ನೋಟದಿ ನೋಡಿ ಭಕುತರ ಅ-
ಪಾರ ದುಃಖಗಳನ್ನ ನೀಗುವರ ೩

ಕೋಟಿ ಸೂರ್ಯ ಪ್ರಕಾಶಮಯವಾದ
ನವರತ್ನ ಖಚಿತ ಕಿರೀಟ
ಕುಂಡಲ ಧರಿಸಿ ಅನುವಾದ
ಎಡಬಲದ ಭುಜದಲಿ
ಮಾಟದ ಭುಜಕೀರ್ತಿ ಸುಲಲಿತದ
ನೋಟಕಾಶ್ಚರ್ಯವನೆ ತೋರುತ
ಶ್ರೀ ಕಳತ್ರನು ರಥದಿ ಮೆರೆಯುತ ದಿ-
ವಾಕರನ ಪ್ರಭೆಯಂತೆ ಪೊಳೆಯುವ
ರಮಾ ಮನೋಹರ ರಮೆಯ ರಮಣನ ೪

ಪರಿಯಾಯ ದಿನ ಬರಲು ಶ್ರೀ ಹರಿಯನ್ನು
ಪರಿ ಪರಿ ವಿಧ ಪೂಜಿಸಿ
ಪರಮ ವೈಭವದಿಂದ ಹರಿಯನ್ನು ಕರ ತಂದು
ವರರಥವೇರಿ ಕುಳ್ಳಿರಿಸುವ ಭಕುತಿಯಲಿ ೮

ಪರಿಪರಿಯ ವಾದ್ಯಗಳು ಮೊಳಗಲು
ಸರುವ ಯತಿಗಳು ನೆರೆದು ಹರುಷದಿ
ಪರಮ ಮಂಗಳ ಮೂರ್ತಿ ಕೃಷ್ಣನ
ಹರುಷದಲಿ ಕೊಂಡಾಡಿ ಸುತ್ತಿಪರು ೯

ಕೊರಳ ಕೌಸ್ತುಭ ಮಾಲೆಯು ವೈಜಯಂತಿಯು
ಮುರುಡಿ ಸರಪಣಿ ಗೆಜ್ಜೆಯು
ಪರಿಪರಿ ರತ್ನಾಭರಣಗಳ್ಹೊಳೆಯುತ
ಜರದ ಪೀತಾಂಬರದಿಂದ ಶೋಭಿಪ ದಿವ್ಯ ೧೦

ಕನಕ ಕಸ್ತೂರಿ ತಿಲಕ ಫಣೆಯಲಿ
ಮಿನುಗುತಿಹ ಸ್ತ್ರೀ ರೂಪ ಧರಿಸಿದ
ಕನಕ ಪೀಠದಿ ಮೆರೆದ ಕಮಲ–
ನಾಭ ವಿಠ್ಠಲನ ಸೇವಿಸುವ ಜನ ೧೧

೪

ಊದೊ ಕೊಳಲನು ಕೃಷ್ಣ ಊದೊ ಕೊಳಲನು
ವೇದ ವೇದ್ಯ ಊದು ಕೊಳಲ ನಾದ ತುಂಬೆ ನಭದಿ ಕೃಷ್ಣ ಪ

ಮದನ ಜನಕ ಮೋಹನಾಂಗ
ಚದುರೆಯರಿಗೊಲಿದು ವನದಿ
ವಿಧ ವಿಧ ಕ್ರೀಡೆಗಳನಾಡಿ
ಮುದವನಿತ್ತ ಮಧುಸೂದನನೆ ೧

ಸರಸವಾಡುತಿಹಿರಿ ಎನ್ನ
ಸ್ಮರಣೆಯಿಂದ ತನುವ ಮರೆತು
ಕ್ಷಮಿಪೆ ನಿಮ್ಮ ಗೃಹಕೆ ತೆರಳಿ
ವನಜ ಮುಖಿಯರೆಲ್ಲರು
ತೆರಳಿರೆಂದನು ತರುಣಿಯರೆನ್ನ ಸ್ಮರಿಸಿರೆಂದನು ೧೨

ಕರುಣದಿಂದ ಸಲಹುತಿಹೆನು
ದುರಿತವೆಲ್ಲ ತರಿದು ಮುದದಿ
ಕಮಲನಾಭ ವಿಠ್ಠಲನೆಂದು
ಕುಣಿದು ಪಾಡಿ ವನಿತೆಯರೆ
ನಲಿದು ಪಾಡಿರೆ ನಾರಿಯರೆಲ್ಲ ಕುಣಿದು ಪಾಡಿರೆ ೧೩

೫

ಎಂತು ವರ್ಣಿಸಲಹುದು ಸಿರಿವರನ
ಸಿರಿ ನಾರಸಿಂಹನ ಪ

ಅಂತರಂಗದಿ ಹರಿಯ ಸ್ಮರಣೆಯ
ಸಂತತವು ಬಿಡದಂತೆ ಮಾಡುವ
ಕಂತುಪಿತ ಭಕ್ತರನು ಪೊರೆಯಲು
ನಿಂತಿರುವ ಸಿರಿಕಾಂತನೆನುತಲಿ ಅಪ

ನಿಷ್ಠೆಯಿಂದಲಿ ಬೆಟ್ಟವೇರುತ್ತ
ಹರಿಭಕುತರೆಲ್ಲರು
ಕಷ್ಟಗಳ ಪರಿಹರಿಸು ಎಂದೆನುತ
ಮನಮುಟ್ಟಿ ಭಜಿಪರು
ಸೃಷ್ಟಿಕರ್ತನೆ ರಕ್ಷಿಸೆಂದೆನುತ
ಇಷ್ಟದಾಯಕ ನಿನ್ನ ಮಹಿಮೆಯ
ಎಷ್ಟು ಪೊಗಳುವರಯ್ಯ ಕೇಶವ

ಪರಮ ಪುರುಷನೆ ಪುಣ್ಯಚರಿತನೆ
ತ್ವರದಿ ಎಮ್ಮಯ ಮೊರೆಯ ಕೇಳೆಂದು
ಭರದಿ ಪ್ರಾರ್ಥನೆ ಮಾಡುತಿಹರು ೧

ಖೂಳ ದೈತ್ಯರು ನಮ್ಮ ಬಾಳಗೊಡರೊ ದೇವ
ಭಾಳ ವ್ಯಾಕುಲರಾಗಿ ದು:ಖಿಪೆವು
ಕೇಳಿ ತಡಮಾಡದೆ ಪಾಲಿಸಿ ಸಲಹಯ್ಯ
ಶ್ರೀಲೋಲ ಶ್ರೀವರ ಶ್ರೀವತ್ಸಲಾಂಛನ
ಶ್ರೀಶ ಶ್ರೀ ಭೂದೇವಿ ರಮಣನೆ
ಮಾತುಳಾಂತಕ ಮದನಜನಕನೆ
ವಾಸುದೇವನೆ ಭಜಿಪ ಭಕ್ತರ
ಸೋಸಿನಲಿ ರಕ್ಷಿಸುತ ಪೊರೆಯುವೆ ೨

ಭಕ್ತವತ್ಸಲ ಸ್ವಾಮಿ ಭಕ್ತರ ಸುರಧೇನು
ಯುಕ್ತ ಮಾತುಗಳಾಡಿ ಸಂತಯಿಸಿ
ಸತ್ಯ ಸಂಕಲ್ಪನು ಮತ್ತವರನು ಕಳುಹಿ
ಸತ್ಯಸಂಧನ ದಶರಥನುದರದಿ ಪುಟ್ಟಿ
ಮತ್ತೆ ವಿಶ್ವಾಮಿತ್ರ ಬರಲು
ಅರ್ಥಿಯಲಿ ಯಾಗವನೆ ನಡೆಸಲು
ಸುತ್ತಿ ಬರುವ ಸುರರನೆ ಸದೆದು
ಮತ್ತೆ ಯಾಗ ನಿರ್ವಿಘ್ನ ಮಾಡಿದ ೩

ಸೀತಾಸ್ವಯಂವರಕ್ಕಾಗಿ ಬರುತಿರಲಾಗವರು
ಗೌತಮ ಸತಿಯ ಶಾಪಹರಿಸಿ
ಪಾತಕಿ ತಾಟಕಿಯನು ಕೊಂದು ಹರುಷದಿ ನಿ–
ರ್ಭೀತನಾಗಿ ಮಿಥಿಲಾಪುರಕೆ ಸೇರಲು ಬಂದು
ಆತ ಲಕ್ಷ್ಮಣನೊಡನೆ ಶಿವಧನು
ನೀತಿಯಿಂದೆತ್ತುತಲಿ ಸೀತೆಯು
ಪ್ರೀತಿಯಲಿ ವನಮಾಲೆ ಹಾಕಲು
ಆಕೆಯ ಕೈಪಿಡಿದ ರಾಮನೆ ೪

ಗೊಲ್ಲತಿಯರ ಮನೆಯ ಪೊಕ್ಕು
ಮೆಲ್ಲುತಿರಲು ಬೆಣ್ಣೆ ಮೊಸರು
ನಲ್ಲೆಯರು ಪಿಡಿದು ಹರಿಯ
ನಿಲ್ಲೊ ನಿಲ್ಲೊ ನಿಲ್ಲೊ ಕೃಷ್ಣ
ಚೋರ ಕೃಷ್ಣನೆ ತೋರೊ ನಿಜವ ಜಾರ ಕೃಷ್ಣನೆ ೭

ಚಿಕ್ಕ ಪ್ರಾಯದವರೆ ಕೇಳಿ
ಸೊಕ್ಕಿನಿಂದ ನುಡಿವರೇನೆ
ಬೆಕ್ಕು ತಿಂದ ತೆರವರಿಯದೆ
ಧಿಃಕರಿಸುವುದುಚಿತವಲ್ಲ
ನುಡಿವರೇನೆಲೆ ನಿಷ್ಠುರ ನುಡಿವರೇನೆಲೆ ೮

ಮಕ್ಕಳೆಲ್ಲ ಆಡುತಿರಲು
ಕಕ್ಕು ಬಿಕ್ಕು ಮಾಡಿ ಅವರ
ದಿಕ್ಕು ದಿಕ್ಕುಗಳಿಗೆ ನಡೆಸಿ
ಠಕ್ಕುತನವು ತರವೆ ಕೃಷ್ಣ
ನಡತೆಯಲ್ಲವೊ ತುಡುಗ ಕೃಷ್ಣ ನಡತೆಯಲ್ಲವೊ ೯

ಮಕ್ಕಳಾಡುತಿರಲು ಮಧ್ಯ
ಸರ್ಪವೆರಡು ಕಾದಿ ಬರಲು
ದಿಕ್ಕು ತೋರದಂತೆ ಭಯದಿ
ದಿಕ್ಕು ದಿಕ್ಕಿಗೆ ಓಡದಿಹರೆ
ದುಡುಕು ನನ್ನದೆ ದೂರುವಿರೆನ್ನ ದುಡುಕು ನನ್ನದೆ ೧೦

ಹರಿಯ ಮಾತು ಕೇಳಿ ಮುದದಿ
ಹರುಷದಿಂದ ನಮಿಸಿ ಕೃಷ್ಣಗೆ
ತ್ವರಿತದಿಂದಲಿ ಒಲಿಯೊ ಮುರಳೀ–
ಧರನೆ ಹರುಷದಿಂದ ಕೃಷ್ಣ
ನಮಿಸಿ ಬೇಡುವೆವೊ ಕೃಷ್ಣ ಸ್ಮರಿಸಿ ಪಾಡುವೆವೊ ೧೧

ಗೋಪಿಕಾ ಸ್ತ್ರೀಯರ ವಾಕ್ಯ
ಶ್ರೀಪತಿಯು ಕೇಳಿ ಮುದದಿ
ತಾಪ ಕಳೆದು ಸುರರು ತಲೆಯ
ತೂಗೆ ಹರುಷದಿಂದ
ಕೊಳಲನೂದಿದ ಚಲುವ ಕೊಳಲನೂದಿದ ೨

ನಾರಿಯರು ನಲಿದು ಬಂದು
ವಾರಿಧಿಯೊಳು ಸರಸವಾಡೆ
ಮಾರಮಣನು ಸೀರೆಗಳನು
ಗಾರು ಮಾಡಿ ಕದಿವರೇನೊ
ತಾರೊ ವಸನವ ದುರುಳ ಕೃಷ್ಣ ತಾರೊ ವಸನವ ೩

ಅಂಗನೆಯರೆ ನಿಮ್ಮ ವ್ರತಕೆ
ಭಂಗವಾದ ಕಾರ್ಯವೆಸಗೆ
ವಂದಿಸಿದರೆ ಕೊಡುವೆನೆಂದು
ರಂಗ ನಲಿದು ನುಡಿದ ಮುದದಿ
ವಸನ ನೀಡಿದ ರಂಗ ವಸನ ನೀಡಿದ ೪

ತರುಳರೆಲ್ಲ ಕೂಡಿಕೊಂಡು
ಕರುಗಳನ್ನೆ ಪಾಲಿಸುತಿರೆ
ಮರೆಯ ಮಾಡಿ ಕರುಗಳನ್ನು
ದುರುಳತನವು ತರವೆ ಕೃಷ್ಣ
ತಾರೊ ಕರುಗಳ ಕೃಷ್ಣ ತಾರೊ ಕರುಗಳ ೫

ಮಾತೆಯರನೆ ಅರಸುತಿರಲು
ಪ್ರೀತಿಯಿಂದ ಕರುಗಳನ್ನು
ಜೋಕೆಯಿಂದ ಪಿಡಿದು ತರಲು
ಯಾತಕೀಪರಿ ನಿಂದಿಸುವದು
ನೋಡಿ ಕರುಗಳ ನಿಂತಿರುವದು ನೋಡಿ ಕರುಗಳ ೬

ನವವಿಧ ಭಕ್ತಿಗಳಲ್ಲಿ ಆತ್ಮನಿವೇದನೆಯೂ ಒಂದು. ಬದುಕಿನಲ್ಲಿ ಹಲವು ರೀತಿಯಿಂದ ನೊಂದ ಜೀವಮ್ಮ ಆರ್ತಳಾಗಿ ತನ್ನನ್ನು ಸಂಪೂರ್ಣವಾಗಿ ಶ್ರೀಹರಿಗೆ ಸಮರ್ಪಿಸಿಕೊಂಡು ನೀನಲ್ಲದೆ ಅನ್ಯರಿಲ್ಲ ಕಾಪಾಡು ಎಂದು ಮೊರೆ ಇಡುತ್ತಾರೆ.

ಕರೆ ಕರೆ ಭವದೊಳು ಮುಳುಗಿರುವೆ
ದುರಿತ ದೂರನೆ ದು:ಖ ತರತರ ವ್ಯಥೆಯಲಿ ಪ

ನಾನು ನನ್ನದು ಎಂಬ ಹೀನ ವೃತ್ತಿಗಳಿಂದ
ಹಾನಿಯಾಯಿತು ಆಯು ಶ್ರೀನಿಧಿಯೆ
ಜ್ಞಾನಿಗಳೊಡನಾಡಿ ಮೌನದಿಂದಿರದಲೆ
ಶ್ವಾನಸೂಕರನಂತೆ ತಿರುಗಿ ಬಾಯ್ಬಿಡುತಲಿ

ಎಂದು ಪಶ್ಚಾತ್ತಾಪ ಪಡುತ್ತಾರೆ.

ದಾನ ಧರ್ಮವು ಮಾಡಬೇಕೆಂದು ಮನವಿರೆ
ದಾನವಾಂತಕ ಕೃಷ್ಣ ಧನವಿಲ್ಲವಯ್ಯ

ಎಂದು ವಾಸ್ತವವನ್ನು ಅರುಹುತ್ತಾರೆ.

ಲೇಸು ಭಕುತಿಯ ಮಾಡದಲೆ ಬಲು
ಘಾಸಿಯಾಗುತ ಮನದಿ ನೊಂದು
ದಾಸನಾಗದೆ ಕ್ಲೇಶಪಟ್ಟೆನೊ
ಈಸು ದಿನಗಳ ಕಳೆದೆನೊ ವೃಥಾ

ಇನ್ನಾದರೂ

ನಿನ್ನ ದಾಸರ ಕೀರ್ತಿ ನಿನ್ನ ದಾಸರ ವಾರ್ತೆ
ನಿನ್ನ ನಾಮಾಮೃತವು ಎನ್ನ ಕಿವಿ ತುಂಬಿರಲಿ

ಎಂದು ಬೇಡುತ್ತಾರೆ.

ಸ್ನಾನ ಜಪತಪವ ನೇಮಗಳ ಬಿಟ್ಟೆ
ಮೌನವನು ಬಿಟ್ಟೆ ದಾನಧರ್ಮವ ಕೊಡದೆ ಕೆಟ್ಟೆ
ಶ್ರೀನಿವಾಸನ ಪೂಜೆ ನೇಮ ನಿಷ್ಠೆ ಮಾಡದಲೆ ಬಿಟ್ಟೆ
ಶ್ವಾನ ಸೂಕರನಂತೆ ಪೊರೆದೆ ಹೊಟ್ಟೆ

ಶಂಕರನಾರಾಯಣಭಟ್ ಅವರು ತಾಳೆ ನೋಡುವಲ್ಲಿ ತುಂಬಾ ಸಹಕರಿಸಿದ್ದಾರೆ. ಶ್ರೀಮಾನ್ ಎಂ. ರಾಜಗೋಪಾಲಚಾರ್ಯ, ಶ್ರೀ ಮುಕುಂದ ಪ್ರಭು, ಡಾ॥ಪ್ರಭಾಕರಜೋಶಿ, ಶ್ರೀಮತಿ ಕೃಷ್ಣವೇಣಿ ಕೆಲವೊಂದು ಮಾಹಿತಿಗಳನ್ನು ಒದಗಿಸುವಲ್ಲಿ ನೆರವಾಗಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು.

ಸಮಗ್ರ ದಾಸವಾಙ್ಮಯ ಪ್ರಕಟಣ ಯೋಜನೆಯನ್ನು ಕೈಗೊಂಡಿರುವ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಿಗೆ, ಕಾರ್ಯವಾಹಕ ಸಂಪಾದಕರಲ್ಲಿ ಒಬ್ಬರಾದ ಡಾ॥ ಶ್ರೀನಿವಾಸ್ ಹಾವನೂರ್ ಅವರು ಸಲಹೆ ಸೂಚನೆಗಳನ್ನಿತ್ತು ಪ್ರೋತ್ಸಾಹಿಸಿದ್ದಾರೆ ಅವರಿಗೆ, ಮತ್ತೊಬ್ಬ ಕಾರ್ಯವಾಹಕ ಸಂಪಾದಕರಾದ ಡಾ॥ ಟಿ.ಎನ್. ನಾಗರತ್ನ ಅವರಂತೂ ನನ್ನ ಸಂಪಾದನಾ ಕಾರ್ಯದುದ್ದಕ್ಕೂ ಮಾರ್ಗದರ್ಶನ ಮಾಡಿದ್ದಾರೆ ಅವರಿಗೆ ನನ್ನ ಅನಂತಾನಂತ ವಂದನೆಗಳು.

ಲೀಲಾವತಿ ಎಸ್. ರಾವ್

ಏನು ಹೇಳಲಿ ಪರರ ದ್ರವ್ಯಪಹರಿಸುತಿಹ
ಹೀನ ಜನರ ಸಂಗ ಮಾಡಿ ಬಳಲಿ ಬಂದೆ

ಎಂದು ಮುಂತಾಗಿ ಮತ್ತೆ ಮತ್ತೆ ತಮ್ಮ ಅಜ್ಞಾನವನ್ನು ಹೇಳಿಕೊಳ್ಳುತ್ತಾರೆ.

ತಂದೆ ತಾಯಿ ಬಂಧು ನೀನೆ ಪದ್ಮನಾಭ ನಿನ್ನ
ನಂಬಿದ ಭಕ್ತರೊಳಿರಿಸಿ ಪದ್ಮನಾಭ
ಅಂಬುಜಾಕ್ಷಿ ಸಲಹಬೇಕೊ ಪದ್ಮನಾಭ

ಎಂದು ಶರಣಾಗುತ್ತಾರೆ. ಆತ್ಮನಿವೇದನೆಯ ಹಾಡುಗಳು ಕವಯಿತ್ರಿಯ ಹೃದಯದಿಂದ ನೇರವಾಗಿ ಹರಿದು ಬಂದಿವೆ.

ಲೋಕದ ಜನರಿಗೆ, ಭವ ಬಂಧನದಲ್ಲಿ ಸಿಲುಕಿ ಕರೆಕರೆ ಅನುಭವಿಸುತ್ತಿರುವ ಜೀವಿಗಳಿಗೆ ಸನ್ಮಾರ್ಗದ ಪರಿಯನ್ನು ತಿಳಿಯಹೇಳಿ, ಅಹಂಕಾರವನ್ನು ಬಿಟ್ಟು ಶರಣಾದರೆ ಹರಿ ಕಾಪಾಡುವ ಎಂಬ ಭರವಸೆ ತುಂಬಿದ್ದಾರೆ.

ಏನು ಮಾಡಿದರೇನು ಹಾನಿಯಾಗದು ಪಾಪ
ಶ್ರೀನಿಕೇತನನ ದಿವ್ಯನಾಮ ನೆನೆಮನವೆ ಪ

ದಾನ ಧರ್ಮಗಳಿಂದ ಧನ್ಯನಾದೆನು ಎನಲು
ಹಾನಿಯಾಗೋದು ಆಯು ಪ್ರತಿನಿಮಿಷದಿ
ಸ್ನಾನ ಜಪತಪದೊಳಗೆ ಯಾರೆನಗೆ ಸರಿ ಎನದೆ
ಮೌನದಿಂದ್ಹರಿ ನಾಮ ಧ್ಯಾನಿಸುವ ತನಕ
ಮಾಡಿದ ಪಾಪ ಪರಿಹಾರವಾಗಬೇಕಾದರೆ
ಬಂಧು ಬಳಗ ಮಂದಿ ಮಕ್ಕಳೆಲ್ಲರು ಕೂಡಿ
ಒಂದೆ ಸ್ಥಳದಿ ಭಜನೆಯ ಮಾಡಿ
ಇಂದಿರಾರಮಣನ ಚಂದದಿ ಪೊಗಳಲು
ಬಂದ ದುರಿತಗಳ ಪೊಂದಿಪನೆಂದೆಂದು

ಇಷ್ಟು ಹೇಳಿದರೂ ವಿಶ್ವಾಸವಿಲ್ಲದೆ ತೊಳಲುವರ ಕಂಡು

ಯಾಕೆ ಮನದಲಿ ಶೋಕಿಸುತ್ತಿರುವೆ ಜಗ
ದೇಕನಾಥನು ಸಾಕುತಿರುವನು ನೀ ತಿಳಿಯದಿರುವೆ
ಸೃಷ್ಟಿಕರ್ತನು ರಕ್ಷಿಸುತ್ತಿರುವ
ದುರಿತಂಗಳ ರಾಸಿಯ
ಬೆಟ್ಟಗಳ ತರಿದೊಟ್ಟುತಿರುವ
ಅದು ತಿಳಿಯದು ನೀ ಬಲು
ಕಷ್ಟಗಳ ಪಡುತಿರ್ಪ ವಿಷಯಗಳ
ನೋಡುತ ನಗುತಿರುವ
ಇಷ್ಟು ಈತನ ಪ್ರಭಾವವು ತಿಳಿಯದೆ
ಲಕ್ಷ್ಮೀರಮಣ ರಕ್ಷಿಸೆನುತ ಸ್ಮರಿಸದೆ

ಎಂದು ನುಡಿದು ಹರಿನಾರಾಯಣ ಎನುತಾ ಹರಿದಾಸರೊಡನೆ ಕೂಡಿ ಸತ್ಸಂಗದಲ್ಲಿದ್ದರೆ ದುರಿತಗಳೆಲ್ಲ ಪರಿಹಾರ ಎನ್ನುತ್ತಾರೆ. ಇಷ್ಟು ಹೇಳಿದರೂ ಕೆಲವರು ಹರಿದಾಸರನ್ನು ನಿಂದಿಸುವುದನ್ನು ಕಂಡು

'ದಾಸರ ದೂಷಿಪರೋ ಕುಜನರು' ಎಂದು ನೊಂದು ನುಡಿಯುತ್ತಾರೆ. ದಾಸರ ಹಿರಿಮೆಯನ್ನು ಹೇಳುತ್ತಾರೆ.

'ಬೆಳಗಾಗಲು ಅರಘಳಿಗೆಯು ಇರುತಿರೆ' ಎಂಬ ದೀರ್ಘ ಕೀರ್ತನೆಯಲ್ಲಿ ಬೆಳಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗಿನ ದಿನಚರಿಯನ್ನು ವಿವರಿಸಿದ್ದಾರೆ.

ಸಂಪ್ರದಾಯದ ನಡುವೆಯೇ ಬೆಳೆದು, ಮನಸ್ಸಿನ ನೆಮ್ಮದಿ, ಧೈರ್ಯಗಳಿಗಾಗಿ ವ್ರತ-ನೇಮ-ಪೂಜೆಗಳನ್ನು ಭಕ್ತಿಯಿಂದ ನಡೆಸುತ್ತಾ ಬಂದ ಜೀವೂಬಾಯಿ, ಸಾಕಷ್ಟು ಸಂಖ್ಯೆಯ ಸಂಪ್ರದಾಯದ ಹಾಡುಗಳನ್ನು ರಚಿಸಿದ್ದಾರೆ. ಹಸೆಗೆ ಕರೆಯುವುದು, ಆರತಿ ಎತ್ತುವುದು, ಬಾಗಿಲು ಕಟ್ಟುವುದು, ಉಡಿ ತುಂಬುವದು, ಜೋಗುಳ, ಮಂಗಳ, ಶೋಭಾನೆ ಇಂತಹ ಹಾಡುಗಳಲ್ಲಿ ಅವರಿಗಿರುವ ಧಾರ್ಮಿಕ

# ಕೃತಜ್ಞತೆಗಳು

ನಾನು ಶಾಲೆಯಲ್ಲಿ ಓದುತ್ತಿದ್ದ ಕಾಲದಲ್ಲಿ ಮೈಸೂರಿನಲ್ಲಿ ಜೀವೂಬಾಯಿ ಅವರನ್ನು ಹಲವು ಸಲ ಕಂಡಿದ್ದೆ. ಸಂಗೀತದಲ್ಲಿ ಆಸಕ್ತಿಯಿದ್ದ ನನ್ನ ತಂದೆ ಶ್ರೀಮಾನ್ ಪಿ.ಹೆಚ್. ಸೇತುರಾವ್ ಅವರಲ್ಲಿ ಕೆಲವು ಹಾಡುಗಳಿಗೆ ರಾಗಹಾಕಿ ಕೊಡಲು ಜೀವಮ್ಮನವರು ಕೊಡುತ್ತಿದ್ದರು. ಅವರ ಕೆಲವು ಹಾಡುಗಳು ನಮ್ಮ ಮನೆಯಲ್ಲಿತ್ತು. ಆದರೆ ಕಾಲಕ್ರಮೇಣ ತಂದೆಯುವರು ನಿಧನರಾದ ಮೇಲೆ ಸಂಪರ್ಕ ತಪ್ಪಿಹೋಯಿತು. ಈಗ ಈ ಹಾಡುಗಳನ್ನು ಸಂಗ್ರಹಿಸುವ ಸಂದರ್ಭದಲ್ಲಿ ಮೈಸೂರಿನಲ್ಲಿ ಅವರಿದ್ದ ಮನೆಗಾಗಿ ಹುಡುಕುವಾಗ ಅವರೆಲ್ಲಾ ಮೈಸೂರು ಬಿಟ್ಟು ಬೆಂಗಳೂರಿಗೆ ಹೋದ ವಿಷಯ ತಿಳಿಯಿತು. ಆ ಮಹಾನಗರದಲ್ಲಿ ಜೀವಮ್ಮನವರ ತಮ್ಮನ ಮಗಳನ್ನು ಹುಡುಕುವುದು ಸುಲಭ ಸಾಧ್ಯವಾದ ಕೆಲಸ ಅಲ್ಲ. ಅದನ್ನು ನಮ್ಮ ಕುಟುಂಬದ ಸ್ನೇಹಿತರಾದ ಶ್ರೀ ವೇಣುಗೋಪಾಲ ಅವರು ಬಹಳ ಶ್ರಮಪಟ್ಟು ಸಾಧಿಸಿ, ವಿಳಾಸವನ್ನು ಒದಗಿಸಿ ಕೊಟ್ಟರು. ನನ್ನ ಅಣ್ಣಂದಿರಾದ ಶ್ರೀ. ಪಿ.ಎಸ್.ರಘುನಾಥರಾವ್ ಅವರು ಹಸ್ತಪ್ರತಿಯನ್ನು ಪಡೆಯುವಲ್ಲಿ ನನ್ನೊಂದಿಗೆ ಸಹಕರಿಸಿದ್ದಲ್ಲದೆ, ಇಡೀ ಒಂದು ಹಸ್ತ ಪ್ರತಿಯನ್ನು ನಕಲು ಮಾಡಿಕೊಟ್ಟು ತುಂಬಾ ಉಪಕರಿಸಿದ್ದಾರೆ. ಜೀವೂಬಾಯಿ ಅವರು ರಚಿಸಿದ ಎಲ್ಲಾ ಕೃತಿಗಳನ್ನು ಬಹಳ ಅಚ್ಚುಕಟ್ಟಾಗಿ, ತುಂಬಾ ಶ್ರಮ ವಹಿಸಿ, ಶ್ರದ್ಧೆಯಿಂದ ಅವರ ತಮ್ಮಂದಿರಾದ ದಿವಂಗತ ಶ್ರೀ ನಾಗೇಶ ಮೂರ್ತಿಯವರು ಬರೆದಿಟ್ಟಿದ್ದಾರೆ. ಅವುಗಳನ್ನು ಬಹು ಜೋಪಾನವಾಗಿ ಅವರ ಮಗಳು ರಮಾಮಣಿ ಮತ್ತು ಅಳಿಯಂದಿರಾದ ಶ್ರೀ ಎಂ.ಎಸ್.ರಂಗನಾಥರಾವ್ ಕಾಪಾಡಿಕೊಂಡು ಬಂದಿದ್ದಾರೆ. ನಾನು ಕೇಳಿದಾಗ ವಿಶ್ವಾಸದಿಂದ ಅವುಗಳನ್ನು ಒದಗಿಸಿ ಕೊಟ್ಟಿದ್ದಾರೆ. ಶ್ರೀರಂಗನಾಥರಾಯರ ಅಳಿಯಂದಿರಾದ ಶ್ರೀ ಜಯಸಿಂಹ ಅವರು ತಮ್ಮಲ್ಲಿದ್ದ ಜೀವುಬಾಯಿಯವರ ಹಾಡುಗಳ ಮತ್ತೊಂದು ಪ್ರತಿಯನ್ನು ಕೊಟ್ಟು ಸಹಕರಿಸಿದ್ದಾರೆ. ಇವರಿಗೆಲ್ಲಾ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಶ್ರೀಮತಿಯರಾದ ರೂಪಶ್ರೀ ನಾಗರಾಜ್, ಸರಸ್ವತಿ, ಶಾರದಾ ಅವರು ಹಸ್ತಪ್ರತಿಯನ್ನು ನಕಲುಮಾಡಿ ಕೊಟ್ಟಿದ್ದಾರೆ. ನಮ್ಮ ಸಹೋದ್ಯೋಗಿಗಳಾದ ಶ್ರೀ

ಸಂಪ್ರದಾಯದ ಅರಿವು, ಶ್ರದ್ಧಾಭಕ್ತಿಗಳು ಗೋಚರವಾಗುತ್ತದೆ. ಬಾಗಿಲು ತೆಗೆಯುವ ಹಾಡುಗಳಲ್ಲಿ ಅವರ ಹಾಸ್ಯ ಪ್ರವೃತ್ತಿಯ ಪರಿಚಯವಾಗುತ್ತದೆ.

'ಕದವ ತೆಗೆಯೆ ಸುಂದರಿ ವಯ್ಯಾರಿ ಮುತ್ತಿನ' ಎಂಬ ಹಾಡಿನಲ್ಲಿ ಕೃಷ್ಣ ರುಕ್ಮಿಣಿಯನ್ನು ಬಾಗಿಲು ತೆರೆಯುವಂತೆ ಕೇಳಿಕೊಳ್ಳುತ್ತಾನೆ.

ಯಾರು ನಿನ್ನಯ ಪೆಸರ ಏನೆಂದು ತಿಳಿಯದೆ
ಹೇಗೆ ತೆಗೆಯಲಿ ಕದವಾ

ಎಂದು ರುಕ್ಮಿಣಿ ಪ್ರಶ್ನಿಸುತ್ತಾಳೆ. ಕೃಷ್ಣ ತನ್ನ ಗುರುತು ಹೇಳಲು ಪ್ರಾರಂಭಿಸುತ್ತಾನೆ. ತಾನು ಧರಣಿಧರ ಎಂದು ಹೇಳಿದರೆ ರುಕ್ಮಿಣಿ 'ಧರೆಯೆಲ್ಲವ ಸಿರದ ಮೇಲಿರಿಸಿಕೊಂಡು ಜನರಿಗೆ ಭಯಪಡಿಸುವ ಉರಗರಾಜ ನೀನೆಂದು ತಿಳಿದೆ, ಸರ್ಪಗಳೊಳಗೆ ನೀನಿರು' ಎನ್ನುತ್ತಾಳೆ. ಆಗ ಕೃಷ್ಣ ತಾನು ಹರಿ ಎನ್ನುತ್ತಾನೆ. ರುಕ್ಮಿಣಿ 'ಕೋತಿ ನೀನಹುದಾದರೆ ಮಾತುಗಳ್ಯಾಕೆ ಜಾತಿ ಕಪಿಗಳ ಕೂಡು, ಕೋತಿಗಳ ಗುಂಪಿನಲ್ಲಿ' ಎನ್ನುತ್ತಾಳೆ. ಕೊನೆಗೆ ತಾನು ಪ್ರೀತಿಯಿಂದ ಬಂದಿದ್ದೇನೆ ಎಂದಾಗ ಕೂಡಲೇ ಬಾಗಿಲು ತೆರೆಯುತ್ತಾಳೆ. ಹೀಗೆಯೆ ಶಿವ ಪಾರ್ವತಿಯನ್ನು ಬಾಗಿಲು ತೆರೆಯುವಂತೆ ಕೇಳುವ ಹಾಡು ಇದೆ.

ಬಾಗಿಲು ತೆರೆಯಲೆ ಭಾಮತಿ ರನ್ನಳೆ
ಈಗ ನಾ ಬಂದೆನು ಇಂದು ಮುಖಿ ಪ

ಎಂಬ ಹಾಡಿನಲ್ಲಿ ಶಿವ ತನ್ನ ಪರಿಚಯ ಹೇಳುವಾಗ 'ನೀಲಕಂಠ' ಎಂದರೆ ಪಾರ್ವತಿ 'ನವಿಲ ಮರಿ' ಎಂದು ಭಾವಿಸುತ್ತಾಳೆ. 'ಸ್ಥಾಣು' ಎಂದರೆ 'ಮೋಟುಮರ' ಎನ್ನುತ್ತಾಳೆ. 'ಪಶುಪತಿ ' ಎಂದರೆ ಪಶುಗಳ ಮಂದೆಗೆ ಹೋಗು ಎನ್ನುತ್ತಾಳೆ. 'ಶೂಲಿ' ಎಂದರೆ ಭಾದೆಯಿದ್ದರೆ ವೈದ್ಯರ ಬಳಿ ಹೋಗು ಎನ್ನುತ್ತಾಳೆ. ಪದಗಳಿಗಿರುವ ಬೇರೆ ಬೇರೆ ಅರ್ಥಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಚಮತ್ಕಾರ ಪೂರ್ವಕ ಹೆಣೆದಿರುವ ಈ ಸಂಭಾಷಣೆ ಸ್ವಾರಸ್ಯವಾಗಿ ಮುಂದುವರಿಯುತ್ತದೆ.

ಸುಮನಸರೊಡೆಯ ಮುಂತಾದ ಶಬ್ದಗಳನ್ನು ಪದೇ ಪದೇ ಬಳಸುತ್ತಾರೆ. ಶಬ್ದಾಲಂಕಾರಗಳ ಆಡಂಬರವಿಲ್ಲ. ಪ್ರಾಸ ನಿಯಮಿತವಾಗಿ ಬಂದಿಲ್ಲ.

ವರ್ಣನೆಗಳು ಹಿತಮಿತವಾಗಿ ಬಂದಿದೆ. ಪುರವರ್ಣನೆ ಮದುವೆಯ ವೈಭವದ ವರ್ಣನೆ, ಹರಿಯಮೋಹಿನಿ ಅಲಂಕಾರದ ವರ್ಣನೆ, ದಶಾವತಾರ ವರ್ಣನೆ ಇತ್ಯಾದಿಗಳು ಜೀವೂಬಾಯಿಯವರ ವರ್ಣನಾವೈಖರಿಯನ್ನು ಪರಿಚಯಿಸುತ್ತವೆ. ಹರಿಯ ಮಹಿಮೆಯೇ ಅವರ ಕೃತಿಗಳ ಮುಖ್ಯ ವಸ್ತುವಾದ್ದರಿಂದ ಭಕ್ತಿರಸವೇ ಪ್ರಧಾನ. ಶೃಂಗಾರ 'ಹಾಸ್ಯ' ಕರುಣಗಳು ಅದಕ್ಕೆ ಪೂರಕವಾಗಿ ಅಲ್ಲಲ್ಲಿ ಬಂದಿವೆ.

ತಾನು ಕಲಿತವಳಲ್ಲ, ಹೆಚ್ಚು ತಿಳಿದವಳಲ್ಲ ಎಂಬ ಸಂಕೋಚ ಜೀವೂಬಾಯಿಯವರಲ್ಲಿ ತುಂಬಾ ಇದೆ. ಅವರು ಪದೇ ಪದೇ

'ಅರಿತ ಸಜ್ಜನರು ಜರಿಯದೆ ಆಲಿಸಿ
ಸರಿಮಾಳ್ಪದು ತಪ್ಪುಗಳನ್ನು'
'ತಪ್ಪುಗಳೆಣಿಸಲಾಗದು ಬುಧರು'
'ಆದರದಿ ತಪ್ಪುಗಳ ತಿದ್ದುತಲಿ ಮನನಲಿದು
ದೂರಗೈಸಿರಿ ದೋಷರಾಶಿಗಳನೆ'

ಎಂದು ಕೇಳಿಕೊಳ್ಳುತ್ತಾರೆ. ಶ್ರೀಹರಿವಾಯುಗುರುಗಳ ಅನುಗ್ರಹದಿಂದಲೇ ಪ್ರೇರೇಪಿಸಲ್ಪಟ್ಟು ಬರೆದುದಾಗಿ ಭಾವಿಸುತ್ತಾರೆ. ಜೀವೂಬಾಯಿಯವರ ಒಂದು ವೈಶಿಷ್ಟ್ಯವೆಂದರೆ ಅವರ ಹೆಚ್ಚಿನ ಕೃತಿಗಳು ರಚನೆಯಾದ ದಿನಾಂಕವನ್ನು ಸೂಚಿಸಿರುವುದು ಮತ್ತು ಕಮಲನಾಭವಿಠಲದಾಸ ನಿಡಗುರುಕಿ ಜೀವೂಬಾಯಿ ಎಂದು ತಮ್ಮ ಹೆಸರನ್ನು ದಾಖಲಿಸಿರುವುದು. ಇಂತಹ ಅಧಿಕೃತ ಮಾಹಿತಿ ಅಪರೂಪ.

'ಮಧುಸೂದನನಿಗೂ ಸುದತಿರಾಧೆಗೂ ಮದುವೆಯ ಮಾಡಬೇಕೆಂದು' ನಿಶ್ಚಯಿಸುತ್ತಾರೆ. ನಂದಗೋಪನ ಅರಮನೆಗೆ ಬಂದು ವಿಷಯ ತಿಳಿಸುತ್ತಾರೆ. ಆತ 'ಇಂದೆ ಶ್ರೀಹರಿ ಲಗ್ನವೆಂದು ಪೇಳಿದನು' ಸರಿ ಎಲ್ಲೆಲ್ಲು ಉತ್ಸಾಹ, ಸಂಭ್ರಮ, ಭರದ ಸಿದ್ಧತೆಗಳು, ಕವಯಿತ್ರಿ ಬಹಳ ಉತ್ಸಾಹದಿಂದ ನಾಂದಿಯಿಂದ ಹಿಡಿದು ಮದುವೆ, ಲಾಜಹೋಮ, ಉರುಟನೆ, ನಾಗವಲ್ಲಿ ಎಲ್ಲವನ್ನು ವರ್ಣಿಸುತ್ತಾರೆ.

ರಾಧಮಾಧವ ವಿಲಾಸವ ಮುದದೊಳು
ಆದರದಿಂದಲಿ ಕೇಳುವರ
ಸಾಧುಗಳರಸನು ಸಂಭ್ರಮದಿಂದಲಿ
ಕಾದುಕೊಂಡಿರುವನು ಹಗಲಿರುಳು

ಇತ್ಯಾದಿ ಫಲಶೃತಿಯೊಂದಿಗೆ ಕೃತಿ ಮುಗಿಯುತ್ತದೆ. ಕೃಷ್ಣನ ಬಾಲಲೀಲೆಗಳು, ರಾಧಾಮಾಧವರ ಒಡನಾಟ, ಅಲ್ಲಲ್ಲಿ ಬರುವ ಪ್ರಕೃತಿಯ ಚಿತ್ರಣಗಳು ಹೃದ್ಯವಾಗಿ ಮೂಡಿ ಬಂದಿದೆ.

ಜೀವೂಬಾಯಿಯವರ ದೀರ್ಘ ಕೀರ್ತನೆಗಳು ಹರಿಕತೆಯ ಧಾಟಿಯಲ್ಲಿವೆ. ಗದ್ಯ, ಪದ್ಯ ಹಾಡುಗಳ ಮಿಶ್ರಣ ಇಲ್ಲಿದೆ. ಮೊದಲೇ ಹೇಳಿದಂತೆ ಗ್ರಾಂಥಿಕ ಸಾಹಿತ್ಯದ ಛಂದಸ್ಸಿನ ಬಿಗಿ ಹಾಗೂ ನಿರ್ದಿಷ್ಟ ನಿಯಮಪಾಲನೆ ಇವುಗಳಲ್ಲಿ ದೊರೆಯುವುದಿಲ್ಲ. ಆರ್ಯೆ, ಕಂದ, ಷಟ್ಪದಿ, ಸೀಸಪದ್ಯ ಎಂದು ಮುಂತಾಗಿ ಕವಯಿತ್ರಿ ಛಂದಸ್ಸನ್ನು ನಿರ್ದೇಶಿಸಿದ್ದರೂ. ಅವು ಹಾಡಿನ ಧಾಟಿಯನ್ನು ಅನುಸರಿಸಿದೆಯೇ ಹೊರತು ಬೇರೆಯಲ್ಲ ಎಂಬಂತೆ ತೋರುತ್ತದೆ. ಆಕೆಯೆ 'ಅರಿಯೆ ಯತಿ ಗಣಪ್ರಾಸನೇಮಗಳನೆಂದೆಂದು' ಎಂದು ಹೇಳಿಕೊಂಡಿದ್ದಾರೆ. ಕಥಾ ವಸ್ತುವಿಗಿಂತ, ಭಕ್ತಿಪ್ರಧಾನವಾದ ಹಾಡುಗಳೇ ಹೆಚ್ಚಾಗಿ ಬಂದಿದೆ.

ಭಾಷೆ ಬಹು ಸರಳವಾಗಿದ್ದು ಆಡುನುಡಿಗೆ ಹತ್ತಿರವಾಗಿದೆ. ಅಕ್ಷರೇಢ್ಯ ಸೋಸಿಲಿ, ಗಾಢದಿ, ಗಾಡನೆ, ಕಡಲೊಡೆಯ, ಪರಿಸರನೊಡೆಯ,

ಸಾಮಾನ್ಯವಾಗಿ ವಿವಾಹಕಾಲದಲ್ಲಿ ಹೆಣ್ಣು ಒಪ್ಪಿಸಿ ಕೊಡುವ ಕಾರ್ಯಕ್ರಮವೊಂದಿರುತ್ತದೆ. ಆಗ ವಧುವಿಗೆ ಹಿರಿಯರು ಬುದ್ಧಿವಾದ ಹೇಳುತ್ತಾರೆ. 'ಪತಿ ಮಂದಿರದಲಿ ನೀ ಸುಖವಾಗಿ ಬಾಳು' ಮತ್ತು 'ಪತಿ ಮಂದಿರದಲಿ ಸುಖವಾಗಿ ಬಾಳಮ್ಮ' ಎಂಬ ಎರಡು ಹಾಡುಗಳಲ್ಲಿ ಮಹಾಲಕ್ಷ್ಮಿಗೆ ಮತ್ತು ಪಾರ್ವತಿಗೆ ಪತಿ ಗೃಹದಲ್ಲಿ ಹೇಗಿರಬೇಕು ಎಂದು ತಿಳಿ ಹೇಳಿದ ರೀತಿಯಲ್ಲಿ ಬುದ್ಧಿವಾದವನ್ನು ಹೇಳಲಾಗಿದೆ.

ರತ್ನಾಕರನು ತಂದೆ ಎನುತ ಗರ್ವಿಸಬೇಡ
ಮತ್ತೆನಗೆ ಸರಿ ಯಾರು ಎಂದೆನಲು ಬೇಡ
ಚಿತ್ತಜನಯ್ಯನ ಮನವರಿತು ನಡೆಯಮ್ಮ
ಹೊತ್ತು ಹೊತ್ತಿಗೆ ಪತಿಯ ಸೇವೆ ನಿರತಳಾಗಿ

ಎಂದು ಹೇಳಿ ದಶಾವತಾರಗಳನ್ನು ವರ್ಣಿಸಿ ಅವರ ಈ ಗುಣಗಳನ್ನು ಒಡೆದು ಹೇಳದೆ ಗುಟ್ಟಾಗಡಗಿಸಿ ನಡೆಯಮ್ಮ ಎಂದಿದ್ದಾರೆ. ಪಾರ್ವತಿಯನ್ನು ಕುರಿತು ಪತಿಗೃಹದಲ್ಲಿ ಸಖಿಯರು ನಿನ್ನ ಪತಿಯನ್ನು ಕುರಿತು ಸ್ಮಶಾನದಲ್ಲಿದ್ದಾನೆ, ಹಸಿ ಚರ್ಮ ಉಡುತ್ತಾನೆ, ಹೊಟ್ಟೆಗಿಲ್ಲದೆ ವಿಷಕುಡಿದ ಎಂದೆಲ್ಲಾ ಹೇಳಿದರೆ ಬೇಸರಿಸಬೇಡ ಎಂದು ಬುದ್ಧಿ ಹೇಳುತ್ತಾರೆ.

ಆರತಿಯ ಹಾಡುಗಳಲ್ಲಿ ಮುತ್ತಿನ ಆರತಿ, ರತ್ನದಾರತಿ, ಕನಕದಾರತಿ, ಕುಶಲದಾರತಿ, ಪದುಮದಾರತಿ, ಗೋಮೇಧಿಕದಾರತಿ, ನವರತ್ನದಾರತಿ, ನೀಲಮಾಣಿಕ್ಯದ ಆರತಿ, ರಂಗಿನಾರತಿ ಇತ್ಯಾದಿ ಬಗೆ ಬಗೆಯ ಆರತಿಗಳನ್ನು ಭಕ್ತಿಯಿಂದ ಎತ್ತಿದ ವರ್ಣನೆ ವಿವರವಾಗಿ ಬಂದಿದೆ. 'ಸತಿ ಸಹಿತಕಶ್ಯಪರು ರತುನದಾರತಿ' ಎಂಬ ಹಾಡಿನಲ್ಲಿ ಸಪ್ತ ಮಹರ್ಷಿಗಳು ಶ್ರೀಹರಿಯನ್ನು ಕರೆದು, ತಮ್ಮ ತಮ್ಮ ಪತ್ನಿಯರೊಂದಿಗೆ ಆತನನ್ನು ಸ್ತುತಿಸುತ್ತಾ ಆರತಿ ಎತ್ತಿದ ಬಗೆಯನ್ನು ಕವಯಿತ್ರಿ ಹೃದ್ಯವಾಗಿ ಹಾಡಿದ್ದಾರೆ. ಶೋಭಾನೆ ಮತ್ತು ಮಂಗಳದ ಹಾಡುಗಳಲ್ಲಿ ಶ್ರೀ ಹರಿಯ ಶಿಷ್ಟರಕ್ಷಣ, ದುಷ್ಟಮರ್ದನ ವಿಸ್ತಾರವಾಗಿ ವರ್ಣಿತವಾಗಿದೆ.

ಜೀವೂಬಾಯಿಯವರು ಪಾಲಿಸಿಕೊಂಡು ಬಂದ ಒಂದು ವಿಶಿಷ್ಟ ಪದ್ಧತಿ ಎಂದರೆ ಪ್ರತೀ ಯುಗಾದಿಯಂದು ಒಂದೋ ಎರಡೋ ಕೀರ್ತನೆಗಳನ್ನು ರಚಿಸಿ ಅದನ್ನು ಶ್ರೀಹರಿಗೆ ಅರ್ಪಿಸುವುದು. ಈ ಹಾಡುಗಳಲ್ಲಿ ಸಾಮಾನ್ಯವಾಗಿ ಸಂವತ್ಸರದ ಹೆಸರು ಬರುತ್ತದೆ. ಖಚಿತವಾಗಿ ಯುಗಾದಿಯಂದೇ ರಚಿತವಾದದ್ದು ಎಂದು ತಿಳಿದು ಬರುವ ೨೨ ಹಾಡುಗಳು ಮತ್ತು 'ಶ್ರೀರಾಮ ಜನನ ಮತ್ತು ಸೀತಾಕಲ್ಯಾಣ' 'ಶ್ರೀಹರಿಲೀಲಾ' ಎಂಬ ಎರಡು ದೊಡ್ಡ ಹಾಡುಗಳು ಇಲ್ಲಿವೆ. ಇವುಗಳಲ್ಲಿ ಹರಿ ಸ್ತುತಿ, ಸಂಪ್ರದಾಯದ ಹಾಡುಗಳು, ಆತ್ಮನಿವೇದನೆ ಎಲ್ಲವೂ ಸೇರಿದೆ. ಸಂವತ್ಸರದ ಹೆಸರು ಹೇಳಿರುವುದಕ್ಕೆ ಕೆಲವು ಉದಾಹರಣೆಗಳು

'ವಿಶ್ವ ವ್ಯಾಪಕ ನೀನೆ ವಿಶ್ವಮೂರುತಿ ನೀನೆ
ವಿಶ್ವಕರ್ತನು ನೀನೆ ವಿಶ್ವನೀನೆ ಶ್ರೀ
ವಿಶ್ವ ವಸುನಾಮ ಸಂವತ್ಸರದೊಳು ಮೆರೆವ ....'

'ಪರಿ ಪರಿ ವಿಧದಲಿ ಹರಿ ಸ್ಮರಣೆಯ ಮಾಡೆ
ಪರಾಭವ ನಾಮ ಸಂವತ್ಸರದಿ ...'

'ಮಂಗಳಾಂಗ ಪ್ಲವಂಗ ವತ್ಸರ
ಗಂಗಾಜನಕ ನಿನ್ನಂಘ್ರಿ ಭಜಕರ ....'

'ಸೌಮ್ಯ ನಾಮ ಸಂವತ್ಸರದಂದು
ನೇಮದಿಂದ ಭಜಿಪ ಭಕುತರ .....'

'ಸಾಧಾರಣ ವತ್ಸರದಲಿ ಸಲಹುವ
ಶ್ರೀದ ಕಮಲನಾಭ ವಿಠ್ಠಲ ಸುಜನರ'

ಯಾವ ವಿಭಾಗಕ್ಕೂ ಸೇರದ ೪,೫, ಹಾಡುಗಳಲ್ಲಿ ಜೀವೂಬಾಯಿ ತಮ್ಮದೇ ಛಾಪನ್ನು ಮೂಡಿಸಿದ್ದಾರೆ. 'ಆ ಹಣ್ಣು ಈ ಹಣ್ಣು ನೆನೆಸಿ ಫಲವೇನ' ಎಂಬ ಹಾಡಿನಲ್ಲಿ ಹಣಸೇ ಹಣ್ಣಿಗೆ ಸಮಾನವಾದ ಹಣ್ಣು ಬೇರಿಲ್ಲ. ಅದು ಎಲ್ಲರಿಗೂ ಬೇಕು ಎಂಬುದನ್ನು ಒತ್ತಿ ಹೇಳಿದ್ದಾರೆ.

ತೊಡೆಯ ಮೇಲೆ ಕಂದನನ್ನು ಮಲಗಿಸಿಕೊಂಡು ಸಂತಸದಿಂದಿರುವಾಗ ಅಲ್ಲಿಗೆ ನಂದಗೋಪ ಬರುತ್ತಾನೆ. ಅವನು ಕೃಷ್ಣನ ಬಾಲಲೀಲೆಗಳನ್ನೆಲ್ಲಾ ಒಂದೊಂದಾಗಿ ನೆನೆಪಿಸಿಕೊಳ್ಳುತ್ತಾನೆ. ಇದ್ದಕ್ಕಿದ್ದಂತೆ ಬಲುಭಾರವಾಗಿ ತೋರಲು ಗೋಪಿ ಕೃಷ್ಣನನ್ನು ತೊಡೆಯಿಂದ ಕೆಳಗೆ ಇಳಿಸುತ್ತಾಳೆ. ಕೂಡಲೆ ಕೃಷ್ಣ ಚೀರುತ್ತಾ ಅಳತೊಡುಗುತ್ತಾನೆ. 'ಬಾರೊ ಬಾರೊ ಎನ್ನ ಮೋಹದ ಅರಗಿಣಿ ನಿನಗೆ ನೀಡುವೆನು ಪಾಲ್ಬೆಣ್ಣೆಮೊಸರು ಕಜ್ಜಾಯಗಳ ಹೋಳಿಗೆಣ್ಣೂರಿಗೆಯು ಕಡುಬು ದೋಸೆಗಳನ್ನು' ಎಂದು ಆಸೆ ತೋರಿಸಿ ಸಮಾಧಾನ ಮಾಡುತ್ತಾಳೆ. ಒಮ್ಮೆ ಕೃಷ್ಣ 'ಚಂದ್ರನ ತೋರೆ ಅಮ್ಮಾ ಅಮ್ಮಾ ಅಮ್ಮಾ' ಎಂದು ಹಟ ಹಿಡಿಯುತ್ತಾನೆ. ತೋರಿಸಿದರೆ ಸಾಲದು 'ಅಂಗೈಯಲಿ ಚಂದ್ರನ ತಂದುಕೊಡಮ್ಮ' ಎಂದು ಕಾಡುತ್ತಾನೆ. ಮಗುವಿನ ಆಸೆಯನ್ನು ಪೂರೈಸಲಾಗದ ದುಗುಡದಿಂದ ಯಶೋದೆ 'ಗಗನದಿ ಬೆಳಗುವ ಚಂದ್ರನ ತಂದು ನಿನ್ನ ಕರದಲಿ ನೀಡುವದೆಂತೋ ಕಾಣೆನೊ ಕೃಷ್ಣಾ' ಎನ್ನುತ್ತಾಳೆ. ಆಗ ಕೃಷ್ಣ 'ಯಶೋದೆ ನೋಡೆ ಚಂದ್ರನ ಕರೆಸುವನೇ' ಎಂದು ಹೇಳಿ 'ಕರದಿ ಚಂದ್ರನ ಪಿಡಿದು ಮಾತೆಗೆ ತೋರಿದನು.' ಈ ಕಲ್ಪನೆ ನವೀನವಾಗಿದ್ದು ಹೃದಯಂಗಮವಾಗಿದೆ. ಹಗಲು ಇರಳು ಒಂದಲ್ಲ ಒಂದು ಹಟದಿಂದ ತುಂಟಾಟದಿಂದ ಪೀಡಿಸುವ ಕೃಷ್ಣನನ್ನು ಹೇಗಪ್ಪಾ ಸುಧಾರಿಸುವುದು ಎಂದು ಯಶೋದೆ ಚಿಂತಿಸುತ್ತಾ ಇರುವಾಗ 'ಬೇಗನೆ ರಾಧೆಯು ಬಂದಳು ದೇವನ ನಾನೆತ್ತುತ ಆಡಿಪೆನೆಂದು' ಅವನನ್ನು ತನ್ನ ಮನೆಗೆ ಕರೆದೊಯ್ಯುತ್ತಾಳೆ. ಅಲ್ಲಿ ಅವನನ್ನು ಬಗೆ ಬಗೆಯಾಗಿ ಉಪಚರಿಸುತ್ತಾಳೆ. ಹೂದೋಟಕ್ಕೆ ಕರೆದೊಯ್ದು ಅಲ್ಲಿ ಅವನೊಂದಿಗೆ ಆಡುತ್ತಾಳೆ. ಕೊನೆಗೆ 'ಇನ್ನು ಎನಗೆ ಪ್ರಸನ್ನನಾಗು ಶ್ರೀಚನ್ನಕೇಶವ ಮಾಧವಹರಿ' ಎಂದು ಪ್ರಾರ್ಥಿಸುತ್ತಾಳೆ. ಅವಳ ಬಿನ್ನಹವನ್ನು ಮನ್ನಿಸಿ ಹರಿ 'ನಿನ್ನ ಮನಸಿನ ಕೋರಿಕೆಗಳನ್ನು ಇನ್ನು ತಡಮಾಡದಲೆ ಪೇಳು ನೀ' ನಿನ್ನ ಮನದಿಷ್ಟಗಳ ಸಲಿಸುವೆ 'ಎಂದು ಭರವಸೆ ಕೊಡುತ್ತಾನೆ' 'ಹಗಲಿರುಳು ನಿನ್ನ ಬಿಡಲಾರೆ ಶ್ರೀ ಕಮಲನಾಭವಿಠ್ಠಲನೆ ನಲಿದು ಅಗಲದಂತಿರು ಎನ್ನ ಮನದಲಿ' ಎಂದು ರಾಧೆ ಬೇಡುತ್ತಾಳೆ. ಕೃಷ್ಣ ಅದಕ್ಕೆ ಒಪ್ಪುತ್ತಾನೆ. ಬಹುದಿನಗಳ ಕಾಲ ಇಬ್ಬರು ಒಟ್ಟಿಗೆ ಸಂತೋಷದಿಂದಿರುತ್ತಾರೆ. ಇದನ್ನು ನೋಡಿದ ದೇವತೆಗಳು

ಹುಣಸೇ ಹಣ್ಣಿಲ್ಲದೆ ಭಾಂಡ ಶುದ್ಧಿಗಳಿಲ್ಲ
ಹುಣಸೇ ಹಣ್ಣಿಲ್ಲದೆ ಸ್ವಯಂ ಪಾಕ ರುಚಿಯು ಇಲ್ಲ
ಹುಣಸೇ ಮರಕ್ಕಿಂತ ಗಟ್ಟಿ ಮರಗಳಿಲ್ಲ
ಎಲ್ಲರಿಗೂ ಬೇಕಾದ ಈ ಹುಣಸೇ ಹಣ್ಣು
ಹುಣಸೇ ಕಾಯಿಯ ಕುಟ್ಟಿ ರಸವ ಮಾಡುವರು
ಹುಣಸೇ ಹಣ್ಣನು ಕುಟ್ಟಿ ಅಣಿ ಮಾಡಿಡುವರು
ಹುಣಸೇ ಹಣ್ಣಿನ ಬೆಲೆ ಮುಗಿಲಿಗೇರಿರಲು
ಎಲ್ಲರಿಗೂ ಬೇಕಾದ ಈ ಹುಣಸೇ ಹಣ್ಣು

ಹರಿಯ ಅಪ್ಪಣೆಯಂತೆ ಹುಣಸೆಯ ಮರಹುಟ್ಟಿ
ಪರರಿಗೆ ಉಪಕರಿಸುವದಿದು ಹರಿಯಾಜ್ಞೆ

ಪರೋಪಕಾರಿಯಾದ ಹುಣಸೆ ಮರ ಹರಿಯು ಆಜ್ಞೆಯಿಂದಲೇ ಹುಟ್ಟಿದೆಯಂತೆ!

ಹೀಗೆಯೆ ನೀರಿನ ಮಹತ್ತ್ವವನ್ನು ಸಾರಿ ಹೇಳುವ ಹಾಡು ಒಂದುಂಟು.

ನೀರಿನಿಂದಲೆ ಸರ್ವಫಲ ಬಾಹೋದು
ನೀರಜಾಕ್ಷನ ಸೇವೆ ಮಾಳ್ಪ ಸುಜನರಿಗೆ ಪ

ನೀರಿಲ್ಲದಲೆ ಯಾವ ಸಾಧನವು ನಡೆಯದು
ನೀರಿಲ್ಲದಲೆ ಯಾಗ ತಪಸ್ಸು ನಿಲ್ಲುವದು
ನೀರಿಲ್ಲದಲೆ ಸ್ನಾನ ಆಚಾರ ಹೀನವು
ನೀರಿಲ್ಲದಲೆ ದೇವತಾರ್ಚನೆಯು ಇಲ್ಲವು ೧

ಕವಯಿತ್ರಿಯ ಪಾಲಿಗೆ 'ನೀರೆಂದರೆ ಬರಿಯ ಜಡವಾದ ನೀರಲ್ಲ' ಏಕೆಂದರೆ 'ನೀರಜಾಕ್ಷನು ಜಲದಿ ವಾಸವಾಗಿಹನು ' 'ನೀರಿನೊಳು ಮುಳುಗಿ ವೇದವ ತಂದು ! ನೀರಿನೊಳು ಮುಳುಗಿ ಭಾರವ ಪೊತ್ತು ನಿಂತನು' 'ನೀರಿನೊಳು ಗಜದ ಶಾಪವ ಕಳೆದು ಪೊರೆದನು' 'ನೀರ ಮಧ್ಯದಿ ದ್ವಾರಕಾಪುರವ ರಚಿಸಿದನು'

ತರಳರೆಲ್ಲ ಒಂದಾಗುತ ವರಳನು
ತವಕದಿಂದ ಏರುತ ನವನೀತವ ಕದ್ದೆವು ತಾಯೆ'

ಎಂದು ಸತ್ಯವನ್ನೇ ಹೇಳುತ್ತಾನೆ. ಕೃಷ್ಣನ 'ಮಾತನ್ನು ಕೇಳಿ ಗೋಪಿದೇವಿಯು ಬಹುಕೋಪದಿಂದ ಕೃಷ್ಣಾ ನಿಲ್ಲು ನಿನ್ನ ಜತೆಯಲ್ಲಿ ಈ ಜಡವಾದ ವರಳು ಸಹ ಕಳ್ಳತನಕ್ಕೆ ಪ್ರಾರಂಭಿಸಿತೇ?' ಎಂದು ಹೇಳಿ ಅವನನ್ನು ವರಳಿಗೆ ಕಟ್ಟಿಹಾಕುತ್ತಾಳೆ. ತಾಯಿ ಆ ಕಡೆ ಮನೆಕೆಲಸಕ್ಕೆ ಹೊರಟಕೂಡಲೆ ಕೃಷ್ಣ ವರಳನ್ನು ಎಳೆಯುತ್ತಾ ಹೋಗಿ ಎರಡು ಮರಗಳ ನಡುವೆ ನುಸುಳಿ ಅವುಗಳನ್ನು ಬೀಳಿಸುತ್ತಾನೆ. ಆ ಶಬ್ದಕ್ಕೆ ಗಾಬರಿಗೊಂಡು ಎಲ್ಲರೂ ಓಡಿ ಬರುತ್ತಾರೆ. ಆ ಮರಗಳ ಒಳಗಿಂದ ಇಬ್ಬರು ಗಂಧರ್ವರು ಹೊರಬಂದು ಶ್ರೀಹರಿಯನ್ನು ಸ್ತುತಿಸುತ್ತಾರೆ. ಅವರೇ ಯಮಳಾರ್ಜುನರು. ಗೋಪಿದೇವಿ ಕೃಷ್ಣನನ್ನು ಎತ್ತಿ ಮುದ್ದಾಡುತ್ತಾಳೆ. ಎಲ್ಲರೂ ಮಂಗಳವನ್ನು ಹಾಡುತ್ತಾರೆ. ಹರಿದಾಸರ ಅನೇಕ ಕೀರ್ತನೆಗಳಲ್ಲಿ ವರ್ಣಿತವಾಗಿರುವ ಈ ಪ್ರಸಂಗವನ್ನು ಜೀವೂಬಾಯಿ ಅವರೂ ಭಕ್ತಿಯಿಂದ ಹಾಡಿದ್ದಾರೆ.

## ಶ್ರೀಹರಿ ಮಾನಸ ಪೂಜಾ

ಜೀವೂಬಾಯಿ, ಅವರ ತಾಯಿ ಮತ್ತು ಅಜ್ಜಿ ಹಾಡುತ್ತಿದ್ದ ಒಂದು ದೊಡ್ಡ ಹಾಡನ್ನು ಕೇಳಿ ಕೇಳಿ ರೂಢಿಯಾಗಿದ್ದು ಅದನ್ನೆ ಆಧಾರವಾಗಿಟ್ಟುಕೊಂಡು ಇದನ್ನು ರಚಿಸಿದುದಾಗಿ ಕವಯಿತ್ರಿ ಹೇಳಿಕೊಂಡಿದ್ದಾರೆ. ಉದಯಕಾಲದಲ್ಲೆದ್ದು ಸ್ನಾನಮಾಡಿ, ದೇವರ ಪೂಜೆಗೆ ಎಲ್ಲವನ್ನು ಅಣಿಮಾಡಿಕೊಂಡು ಕ್ರಮಪ್ರಕಾರವಾಗಿ ಶ್ರೀಹರಿಯನ್ನು ಪೂಜಿಸುವ ಬಗೆ ಈ ಕೃತಿಯಲ್ಲಿ ವಿವರಗಳೊಂದಿಗೆ ವರ್ಣಿತವಾಗಿದೆ. ತುಂಬಾ ಶ್ರದ್ಧೆ ಮತ್ತು ಭಕ್ತಿಗಳಿಂದ ರಚಿತವಾದ ಚಿಕ್ಕ ಕೃತಿ.

### ರಾಧಾಮಾಧವ ವಿಲಾಸ

ಈ ಕೃತಿಯಲ್ಲಿ ಅರ್ಧಭಾಗದಷ್ಟು ಶ್ರೀ ಕೃಷ್ಣನ ಬಾಲಲೀಲೆಗಳು, ಉಳಿದರ್ಧ ರಾಧಾಮಾಧವರ ವಿಲಾಸವು ವರ್ಣಿತವಾಗಿದೆ. ಒಂದು ದಿನ ಯಶೋದೆ ತನ್ನ

ಅಣುರೇಣು ತೃಣದಲ್ಲಿ ಹರಿಯು
ಇಹನೆಂದು ಶೃತಿ ಸಾರುತಲಿರಲು
ಎಣಿಸಬಹುದೇ ಅಣುಮಹದ್ರೂಪನ
ಗುಣಗಳನೆಂದೆನುತಾ

ಜಗವೆಲ್ಲಾ ತುಂಬಿರುವ ದೇವನ
ಹುಡುಕುವದುಂಟೇ ಲೋಕದಜನರು
ಅಗಣಿತ ಆಶ್ಚರ್ಯನ ಮಹಾಮಹಿಮೆ
ಪೊಗಳಲು ಎನ್ನಳವೇ

ಎಂದುಕೊಂಡು ತಾನು ಧನ್ಯನಾದೆ ಎಂದು ಭಾವಿಸುತ್ತಾರೆ. ಪರಿಪರಿ ಯಾಗಿ ಶ್ರೀಹರಿಯನ್ನು ಕೊಂಡಾಡುತ್ತಾರೆ. ಅವರ ಭಕ್ತಿಗೆ ಮಚ್ಚಿದ ಹರಿ

ಯಾರು ಈ ವಿನೋದದ ಕಥೆಯನು ಪ್ರತಿದಿನ
ಗಾನವ ಮಾಡುತ ಕೇಳುವರೋ
ನೀರಜಾಕ್ಷಿಸಹಿತವರ ಹೃದಯ ಮಂ
ದಿರದಲಿ ನೆಲಸಿರುವೆನು ಕೇಳು

ಎಂದು ನುಡಿಯುತ್ತಾನೆ. ಒಟ್ಟಿನಲ್ಲಿ ಶ್ರೀಹರಿ ಎಲ್ಲೆಲ್ಲೂ ವ್ಯಾಪಿಸಿದ್ದಾನೆ. ಸರ್ವವ್ಯಾಪಕ ಎಂಬ ತತ್ವವನ್ನು ಸರಸ ಸುಂದರವಾಗಿ ನಿರೂಪಿಸುವ ಕೃತಿ ಇದು.

### ಶ್ರೀಕೃಷ್ಣ ಲೀಲಾ

ಕೃಷ್ಣನ ಬಾಲಲೀಲೆಗಳಲ್ಲಿ ಒಂದಾದ ಯಮಳಾರ್ಜುನ ಪ್ರಸಂಗವನ್ನು ವಿವರಿಸುವ ಸಣ್ಣ ಕೃತಿ. ಕೃಷ್ಣನ ಕೈಯಲ್ಲಿದ್ದ ಬೆಣ್ಣೆಯನ್ನು ನೋಡಿದ ಗೋಪಿ ಅದು ಎಲ್ಲಿಂದ ಸಿಕ್ಕಿತೆಂದು ಕೇಳುತ್ತಾಳೆ. ಕೃಷ್ಣ ಏನೇನೋ ಸಬೂಬು ಹೇಳಲು ನೋಡಿ ತಾಯಿ ಒಪ್ಪದಿರಲು

ನೆಲುವಿನ ಮೇಲಿರುತಿದ್ದ ಬೆಣ್ಣೆಯು
ನಿಲುಕದಿರಲು ಯೋಚಿಸಿ ಮನದಿ

ಚಂದ್ರ, ಕಾಮದೇನು, ಐರಾವತಗಳು ಹುಟ್ಟಿದ್ದು ನೀರಿನಲ್ಲಿ, ಕಡೆಗೆ 'ಕಮಲಾಕ್ಷಿ ಪುಟ್ಟಿರುವ ಕಮಲ ಜಲದಲ್ಲಿಹುದು' ಅಂದ ಮೇಲೆ ನೀರು ಸಾಮಾನ್ಯವಾದುದೇ? ನೀರು ಮತ್ತು ನೀರೆ ಎಂಬ ಶಬ್ದಗಳನ್ನು ಬಹು ಚಮತ್ಕಾರವಾಗಿ ಬಳಸಿರುವ ಕವಯಿತ್ರಿಯ ಜಾಣ್ಮೆಯನ್ನು ಮೆಚ್ಚಬೇಕು.

'ಒಂದು ದಿನದಲಿ ಇಂದಿರೇಶನು' ಎಂಬ ಗೋಪೀಗೀತದಲ್ಲಿ ಕೃಷ್ಣ ಕೊಳಲೂದುವ ಪರಿಯನ್ನು, ಅದರ ಮೋಹಕ ಪರಿಣಾಮವನ್ನು ಪರಣಾಮಕಾರಿಯಾಗಿ ನಿರೂಪಿಸಲಾಗಿದೆ. ಗೋಪಿಯರೆಲ್ಲಾ ಕೊಳಲ ದನಿಗೆ ಮೈಮರೆತು ಓಡಿ ಬಂದು ಮರುಳಾಗಿ ನಿಂತಿರಲು ಕೃಷ್ಣ ಮಾಯವಾಗುತ್ತಾನೆ. ಕೃಷ್ಣನನ್ನು ಕಾಣದ ಗೋಪಿಯರು ಕಾತುರದಿಂದ

'ಜಾಜಿ ಸಂಪಿಗೀ ಸೂಜಿ ಮಲ್ಲಿಗೀ<br>
ರಾಜೀವಾಕ್ಷನಾ ಕಾಣಲಿಲ್ಲವೇ<br>
ಬಿಳಿಯ ಮಲ್ಲಿಗೀ ಎಳೆಯ ತುಳಸಿಯೇ<br>
ನಳಿನ ನಾಭನಾ ಸುಳಿವು ಕಾಣಿರಾ

ಎಂದು ಕೇಳುತ್ತಾ ವಿರಹದಿಂದ ಪರಿತಪಿಸುತ್ತಾರೆ.

ಸುಂದರಾಂಗನೇ ಮಂದಹಾಸನೇ<br>
ಮಂದರೋದ್ಧರ ಬಾರೋ ಬೇಗನೇ

ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ.

ಹೀಗೆ ಗೋಪೇರು ಮೊರೆಯನಿಡುತಿರೆ<br>
ಮಂಗಳಾಂಗನೂ ಬಂದನೆದುರಿಗೆ

ಎಲ್ಲರೂ ಸಂತಸದಿಂದ ನಲಿಯುತ್ತಾರೆ. ಕೃಷ್ಣ ಗೋಪಿಯರ ಮಧುರ ಭಾಂಧವ್ಯ ಈ ಹಾಡಿನಲ್ಲಿ ಸೊಗಸಾಗಿ ಮೂಡಿ ಬಂದಿದೆ.

ನವವಿಧ ಭಕ್ತಿ ಎಂಬ ೯ ನುಡಿಗಳ ಹಾಡಿನಲ್ಲಿ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ, ಸಖ್ಯ, ಆತ್ಮ ನಿವೇದನಗಳ ಮೂಲಕ ಹೇಗೆ ಹರಿಯನ್ನು ಒಲಿಸಿಕೊಳ್ಳಬಹುದು ಎಂಬ ವಿವರವಿದೆ.

ಸತ್ಯಭಾಮೆಯ ರಮಣನ ಕ್ರಿಯೆಗಳು
ಉತ್ತಮ ಋಷಿವರರರಿಯರೆನಲು ಬಹು ಅ.ಪ

ಮಿತ್ರೆ ರುಕ್ಮಿಣಿ ಕೂಡುತ ಹರಿ ಇರಲು ಪಾರಿಜಾತದ ಹೂ
ಮತ್ತೆ ಮಾಧವಗೀಯಲು ನಾರದರು ಕೌತುಕವನೆ ಕೇಳುತ
ಸತ್ಯಭಾಮೆಯು ಕೋಪವ ತಾಳುತಲಿ ಶಚಿಪತಿಯೊಳು ಕಲಹ
ಉತ್ತಮ ಶ್ರೀಹರಿ ಸಮರದಿ ಸೋಲಲು
ಮತ್ತೆ ಇಂದ್ರ ಜಯಭೇರಿಯ ಹೊಡಿಸಲು
ಸತ್ಯಭಾಮೆ ಸಮರದಿ ಗೆಲ್ಲುತ ಪುಷ್ಪ
ವೃಕ್ಷಸಹಿತ ದ್ವಾರಕಿಗೈತರೆ ಬಹು ೧

ದುರುಳ ದೈತ್ಯರು ಕೂಡುತ ಗುಂಪಾಗಿ ಶ್ರೀಹರಿಯನು ಪಿಡಿಯಲು
ಭರದಿಂದೋಡುತ ಬರುತಿರಲದ ನೋಡಿ ಶ್ರೀಹರಿ ತಾ ತಿಳಿದು
ತ್ವರದಿಂದೋಡುತ ಬರುತಲಿ ಗುಹೆ ಸೇರಿ ಮುಚುಕುಂದರಾಯನಿಗೆ
ಜರದವಲ್ಲಿ ಹೊದಿಸುತ ಮಾಯವಾಗಲು
ಖಳರು ಬಂದೊದ್ದರು ಮುಚುಕುಂದಗೆ
ತೆರೆದು ಕಣ್ಣ ನೋಡಲು ಖಳರೆಲ್ಲರು
ಉರಿದು ಭಸ್ಮವಾದರು ಕೇಳಿರಿ ಬಹು ೨

ಮತ್ತೊಮ್ಮೆ ಖಳರೆಲ್ಲರು ಸೇರುತಲಿ ಸತ್ಯೇಶನ ಪಿಡಿಯಲು
ಸುತ್ತಮುತ್ತ ಚೀರುತ ಬರುತಿರಲು ಹರಿಬೆದರಿದ ಪರಿ
ಮತ್ತೋಡೂತ ಹಿಂದಕೆ ನೋಡುತ ಓಡುತಲಿ ಪರ್ವತವನೆ ಏರಲು
ಸುತ್ತಲು ನಿಂತರು ಖಳರೆಲ್ಲರು ಹರಿ
ಒತ್ತಿ ತುಳಿಯೆ ಪರ್ವತ ಕುಸಿಯಲು ಜಲ
ಎತ್ತಿ ಮುಖಕೆರಚಲು ಖಳರೋಡಲು
ಮೆತ್ತನಿಳಿದುದ್ವಾರಕಿ ಸೇರಿದ ಬಹು ೩

ಚಕ್ರವ್ಯೂಹದಿ ಸಿಕ್ಕಿದ ಅಭಿಮನ್ಯು ಷಡುರಥದೊಳು ಕಾದಿ
ದಿಕ್ಕು ದಿಕ್ಕಿಲಿ ಬಾಣದ ಮಳೆಸುರಿಸಿ ರಥಿಕ ಮಹರಥರೊಳು

ರಾಮಲಕ್ಷ್ಮಣ ಭರತ ಶತ್ರುಘ್ನರಿಗೆ ಲಗ್ನ
ನೇಮದಿಂದಲಿ ಮಾಡಿ ಕಳುಹಲಾಗ
ಸಾಮಜವರ ಅಯೋಧ್ಯಾಪುರದಿ ಭಕ್ತ–
ಸ್ತೋಮವನೆರಹಿ ರಾಜ್ಯಾಭಿಷೇಕವ ನಡಸೆ
ಆ ಮಹಾಮುನಿ ಸ್ತೋಮ ಸುರಗಣ
ರಾಮನಿಗೆ ಪಟ್ಟವೆನುತ ಹರುಷಿಸೆ
ಆ ಮಹಾಕೈಕೆ ವರವ ಬೇಡುತ
ರಾಮನಿಗೆ ವನವಾಸವೆನಲು ೫

ವನವನ ಚರಿಸುತ ಘನರಕ್ಕಸರ ಕೊಂದು
ವನಜಾಕ್ಷಿ ಮಾಯಾಮೃಗವೆ ಬೇಡಲು
ವನಮೃಗ ಬೆನ್ನಟ್ಟಿ ತರುವೆನೆನುತ ಪೋಗಿ
ಬಣಗು ರಾವಣ ಸೀತಾಹರಣವ ಮಾಡಲು
ಕುರುಹು ಕಾಣದೆ ಸೀತೆಯ ವನವನದಿ
ಚರಿಸುವ ಸಮಯದಲಿ ಕಪಿ
ವರರ ಸೈನ್ಯವ ಕಳುಹಿ ಮುದ್ರಿಕೆ
ಇತ್ತು ಜನಕ ಜಾತೆಯ ನೋಡಿ ಬರಲು ೬

ಕಡಲ ಕಟ್ಟುತ ಸೈನ್ಯ ನಡಿಸಿ ಯುದ್ಧವ ಮಾಡೆ
ಬಿಡದೆ ರಾವಣ ಸಹಿತೆಲ್ಲರನು ಕೊಂದು
ಕಡು ಭಕ್ತನಿಗೆ ಲಂಕಾಪುರದಲಿ ಪಟ್ಟವ ಕಟ್ಟಿ
ಮಡದಿ ಸಹಿತ ಪುಷ್ಪಕವನೇರಿ ಬರುತಿರೆ
ಸಡಗರದಿ ಹನುಮಂತ ಭರತಗೆ
ಒಡೆಯ ಬರುತಿಹನೆಂದು ಪೇಳಲು
ಕಡುಹರುಷದಿ ಅಯೋಧ್ಯೆಯನಾಳಿದ
ಕಡಲೊಡೆಯ ಕಮಲನಾಭ ವಿಠ್ಠಲನೆ ೭

ಹಿರಣ್ಯಕಶ್ಯಪು ತನ್ನ ತರಳ ಪ್ರಹ್ಲಾದನಿಗೆ
ಪರಿಪರಿ ಬಾಧೆ ಪಡಿಸೆ
ಹರಿಯ ತೋರೆಂದು ಆರ್ಭಟಿಸಿ ನುಡಿಯೆ ದೈತ್ಯ
ನರಮೃಗ ರೂಪನಾಗಿ ಭರದಿ ಕಂಬದಿ ಬಂದ ೩

ಪತಿಗಳೈವರು ಲಕ್ಷ್ಮೀಪತಿಯ ಧ್ಯಾನದೊಳಿರೆ
ಮತಿಹೀನನೆಳೆತರಲು
ಗತಿನೀನಲ್ಲದೆ ಮತ್ತೆ ಹಿತರೊಬ್ಬರಿಲ್ಲವೆನೆ
ಅತಿಬೇಗದಿಂದ ಧರ್ಮಸತಿಗೆ ಅಕ್ಷಯವಿತ್ತ ೪

ಇದರಂತೆ ತರಳಧ್ರುವ ಒದಗಿದ ತಾಪದಿಂದ
ಪದುಮನಾಭನ ಭಜಿಸೆ
ಮುದದಿಂದಾತಗೆ ಧ್ರುವಪದವಿಯನಿತ್ತು ಕಾಯ್ದೆ
ಪದುಮನಾಭನೆ ನಿನಗೆದುರುಂಟೆ ತ್ರಿಜಗದಿ ೫

ಫಣಿಶಾಯಿ ನಿನ್ನ ಗುಣ ಮಹಿಮೆಯ ಪೊಗಳಲು
ಅಹಿಭೂಷಣನಿಗಳವೆ
ಕ್ಷಣ ಬಿಡದಲೆ ನಿನ್ನ ಚರಣಸೇವೆಯ ಮಾಳ್ಪ
ಸಿರಿದೇವಿ ಅರಿಯೆನೆಂದೆನಲು ನಿನ್ನಯ ಗುಣ ೬

ಕರುಣಾಸಾಗರ ದೇವ ವಿಮಲ
ಸ್ವರೂಪನೆ ಕಮಲನಾಭ ವಿಠ್ಠಲ
ಶರಣಜನರ ಬಹುತ್ವರದಿಂದ ಬಂದು ಕಾಯ್ದ
ಪರಮ ದಯಾಳೊ ನಿನ್ನ ಚರಣಕ್ಕೆ ನಮೋ ಎಂಬೆ ೭

## ೧೩

ಚಿತ್ರ ವಿಚಿತ್ರವು ಹರಿ ವ್ಯಾಪಾರ
ಚಿತ್ತದಿ ಚಿಂತಿಪರಿಗೆ ಪ

ಹೀಗೆ ಜೀವಮ್ಮನವರ ಸಣ್ಣ ಹಾಡುಗಳಲ್ಲಿ ಬೇಕಾದಷ್ಟು ವೈವಿಧ್ಯವಿದ್ದು, ಅವರ ಕವಿತಾ ಸಾಮರ್ಥ್ಯಕ್ಕೂ ಸಹಜ ಪ್ರತಿಭೆಗೂ ಪುರಾಣ ಪುಣ್ಯ ಕತೆಗಳ ಅರಿವಿಗೂ ಸಂಪ್ರದಾಯ ಆಚಾರ ವಿಚಾರಗಳ ತಿಳಿವಿಗೂ ಶುದ್ಧ ಹೃದಯದ ಭಕ್ತಿಗೂ ಉದಾಹರಣೆಗಳನ್ನು ಒದಗಿಸುತ್ತವೆ.

## ದೀರ್ಘ ಕೀರ್ತನೆಗಳು

### ಶ್ರೀ ಪುರಂದರ ವಿಠಲದಾಸರ ಚರಿತ್ರೆ

ಜೀವೂಬಾಯಿ ಅವರು ಒಟ್ಟು ಹತ್ತು ದೀರ್ಘ ಕೀರ್ತನೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಶ್ರೀ ಪುರಂದರ ವಿಠಲ ದಾಸರ ಚರಿತ್ರೆ' ಎಲ್ಲಕ್ಕಿಂತ ದೀರ್ಘವಾಗಿದೆ. ಗದ್ಯ ಪದ್ಯ ಮಿಶ್ರವಾಗಿದೆ. ಜಿಪುಣರಾದ ಶ್ರೀನಿವಾಸ ನಾಯಕರು ಹರಿಕೃಪೆಯಿಂದ ಪುರಂದರದಾಸರಾದ ಕಥೆ ಇದರ ವಸ್ತು. ಶ್ರೀ ಹರಿ ವೈಕುಂಠದಲ್ಲಿ ನಾರದರ ಭಕ್ತಿಗೆ ಮೆಚ್ಚಿ ಬೇಕಾದ ವರಕೇಳಿ ಎಂದಾಗ ಅವರು 'ಹಗಲಿರುಳೆಡೆ ಬಿಡದಲೆ ಎನ್ನೊಡನಾಡುತಲಿರು ಕಮಲನಾಭ ವಿಠ್ಠಲನೆ' ಎಂದು ಪ್ರಾರ್ಥಿಸುತ್ತಾರೆ. ಆಗ ಹರಿ 'ಕಲಿಯುಗದಿ ನಿನ್ನಭೀಷ್ಟಗಳ ಸಲಿಸುವೆ' ಎಂದು ಅಭಯ ನೀಡುತ್ತಾನೆ. ನಾರದರು ಪುರಂದರಗಡದಲ್ಲಿ ವರದಪ್ಪನಿಗೆ ಮಗನಾಗಿ ಜನಿಸುತ್ತಾರೆ. ವೆಂಕಟಪತಿ ಎಂದು ಮಗುವಿಗೆ ಹೆಸರಿಡುತ್ತಾರೆ. ಮುಂದೆ ವ್ಯಾಪಾರ ಕೈಗೊಂಡ ವೆಂಕಟಪತಿ ಪರಮಲೋಭಿಯಾಗಿ, ಹಣ ಸಂಪಾದಿಸಿ ' ನವಕೋಟಿ ನಾರಾಯಣ ' ಎಂಬ ಬಿರುದು ಪಡೆದು ನಾರಾಯಣನನ್ನೇ ಮರೆತಾಗ, ಹರಿ ಬ್ರಾಹ್ಮಣ ವೇಷದಲ್ಲಿ ಬಂದು ಮಗನ ಉಪನಯನಕ್ಕಾಗಿ ಹಣ ಕೇಳುವುದು, ಮೂಗುತಿಯ ಪ್ರಸಂಗ ಇತ್ಯಾದಿ ವಿಷಯಗಳು ದೀರ್ಘವಾಗಿ ವರ್ಣಿತವಾಗಿದೆ. ಹರಿ ದರ್ಶನಕ್ಕಾಗಿ ಅವರು ಪಡುವ ಹಂಬಲ ಹೃದಯ ಸ್ಪರ್ಶಿಯಾಗಿದೆ. ಹರಿ ಪ್ರೇರಣೆಯಂತೆ ಹಂಪೆಗೆ ಬಂದು ಶ್ರೀವ್ಯಾಸರಾಯರ ಶಿಷ್ಯರಾಗಿ ಪುರಂದರ ವಿಠಲನೆಂಬ ಅಂಕಿತ ಪಡೆದು ದಾಸರಾದ ವಿಷಯ ಸರ್ವವಿಧಿತ.

ಉದ್ಯೋಗಪರ್ವ ಹೇಳುತ್ತಿದ್ದ ದಾಸರು ' ಈ ಉದ್ಯೋಗಪರ್ವ ಕೇಳತಕ್ಕವರು ಅವರವರ ಮನಸ್ಸಿನಲ್ಲಿ ಯಾವಯಾವ ಕಾರ್ಯ ಮಾಡಬೇಕೆಂದು ಉದ್ದೇಶಮಾಡಿಕೊಂಡಿರುತ್ತಾರೋ ಆ ಕಾರ್ಯಗಳನ್ನು ಶ್ರೀ ಹರಿವಾಯುಗಳು ನಿಂತು ನಡೆಸಿಕೊಡುತ್ತಾರೆ' ಎಂದು ಹೇಳಿದರಂತೆ. ಆ ಮಾತನ್ನು ಕೇಳಿದ ಜೀವೂಬಾಯಿ ಅವರಿಗೆ ಪರಮಾನಂದವೂ ಆಶ್ಚರ್ಯವು ಆಯಿತಂತೆ. ಇದಾದ ಎರಡು ಮೂರು ದಿನಗಳಲ್ಲಿ ಒಂದು ಕನಸು. ಗುರುಗಳ ಸೇವೆ ಮಾಡುವವರೊಬ್ಬರು ದೊಡ್ಡ ಪುಸ್ತಕಗಳ ಗಂಟೊಂದನ್ನು ತಂದು ಪಡಸಾಲೆಯಲ್ಲಿಟ್ಟ ಹಾಗೆ. ಇದೆಲ್ಲದರ ಪ್ರೇರಣೆಯ ಫಲವೇ ಶ್ರೀ ಹರಿಲೀಲಾ ಎಂಬ ಕೃತಿ.

ನಾರದರು ಒಮ್ಮೆ ದ್ವಾರಕೆಗೆ ಬಂದು ಶ್ರೀ ಕೃಷ್ಣ ರುಕ್ಮಿಣಿ ಸತ್ಯಭಾಮೆಯ- ರೊಂದಿಗೆ ಸಂತಸದಿಂದಿರುವುದನ್ನು ಕಂಡು ಪಾಪ! ಉಳಿದ ಮಹಿಷಿಯರ ಪಾಡೇನು ಎಂದು ಚಿಂತಿಸಿ ಅವರ ಮನೆಗಳಿಗೆಲ್ಲಾ ಭೇಟಿ ಕೊಡುತ್ತಾರೆ. ಏನಾಶ್ಚರ್ಯ! ಜಾಂಬವತಿಯ ಮನೆಯಲ್ಲಿ ಅವಳೊಂದಿಗೆ ಕೃಷ್ಣ ರತ್ನಗದ್ದುಗೆಯಲ್ಲಿ ಕುಳಿತಿದ್ದಾನೆ. ಮಿತ್ರವಿಂದೆಯ ಮನೆಗೆ ಹೋದರೆ ಮುತ್ತು ಕೆತ್ತಿದ ಪಟ್ಟೆಮಂಚದಿ ಇಬ್ಬರು ಕುಳಿತಿದ್ದಾರೆ. ನೀಲಾದೇವಿಯ ಮನೆಗೆ ಬಂದರೆ ದಾಳ ಪಗಡೆಯನಾಡುತ ಕೃಷ್ಣ ಸರಸದಲ್ಲಿದ್ದಾನೆ. ಲಕ್ಷಣದೇವಿಯ ಮನೆಗೆ ಬಂದರೆ ಅವಳು ಕೃಷ್ಣನನ್ನು ಮುತ್ತುರತ್ನದ ಪೀಠದ ಮೇಲೆ ಕೂಡಿಸಿ ಬಗೆಬಗೆಯಾಗಿ ಅಲಂಕರಿಸುತ್ತಿದ್ದಾಳೆ. ಕಾಳಾದೇವಿಯ ಮನೆಗೆ ಹೋದರೆ ತೂಗೊಮಂಚದಲ್ಲಿ ಕೃಷ್ಣನ್ನ ಕೂಡಿಸಿ ಆಕೆ ತೂಗುತ್ತಿದ್ದಾಳೆ. ಆಗ ನಾರದರು ' ಸೌಳಸಾಸಿರ ಸತಿಯರನೆಲ್ಲಾ ನೋಡಿ ಬರುವೆ ' ಎಂದು ಹೊರಡುತ್ತಾರೆ. ಒಬ್ಬಳ ಮನೆಯಲ್ಲಿ ಮದುವೆ, ಒಬ್ಬಳ ಮನೆಯಲ್ಲಿ ಉಪನಯನ, ಒಬ್ಬಳ ಮನೆಯಲ್ಲಿ ಯಾಗದಕಾರ್ಯ ಹೀಗೆ ಒಬ್ಬೊಬ್ಬರ ಮನೆಯಲ್ಲಿ ಒಂದೊಂದು ಮಹೋತ್ಸವ ಸಂಭ್ರಮ. ಎಲ್ಲೆಲ್ಲೊ ಕೃಷ್ಣ ಉಪಸ್ಥಿತನಿದ್ದಾನೆ! ಇದನ್ನು ಕಂಡ ನಾರದರು

ಸಂಪ್ರದಾಯದ ಹಾಡುಗಳಿಂದ ಕೂಡಿದ ಈ ಚಿಕ್ಕ ಕೃತಿ ಲಕ್ಷ್ಮೀಪೂಜೆಯ ಸಂದರ್ಭದಲ್ಲಿ ಹೇಳಲು ಯೋಗ್ಯವಾಗಿದೆ.

### ಸಮುದ್ರಮಥನ

ದೇವತೆಗಳು ಅಮೃತವನ್ನು ಪಡೆದ ಪ್ರಸಿದ್ಧ ಕತೆ ಇದರ ವಸ್ತು. ರಾಕ್ಷಸರ ಉಪಟಳ ತಾಳಲಾರದೆ ದೇವತೆಗಳು ಶ್ರೀ ಹರಿಯಲ್ಲಿ ಮೊರೆ ಇಡುತ್ತಾರೆ. ಬಗೆ ಬಗೆಯಾಗಿ ಅತನನ್ನು ಸ್ತುತಿಸುತ್ತಾರೆ. ಆಗ ಹರಿ

ಮಂದಿಗಳೆಲ್ಲರು ಇಂದು ಕೇಳಿರಿ
ಚಂದದ ಅಮೃತದ ಬಲದಿಂದ
ಪೊಂದಿದ ಕಷ್ಟವು ಪರಿಹರವಾಗಿ ಸುಖ
ದಿಂದ ಬಾಳುವಿರೆಂದೆನಲು

ದೇವತೆಗಳು ಅಮೃತವನ್ನು ಪಡೆಯುವ ಬಗೆ ಹೇಗೆಂದು ಕೇಳುತ್ತಾರೆ. ಮಂದರ ಪರ್ವತದಿಂದ ಕ್ಷೀರ ಸಮುದ್ರವನ್ನು ಕಡೆಯುವಂತೆ ತಿಳಿಸುತ್ತಾನೆ. ಅದಕ್ಕಾಗಿ ದಾನವರ ಸ್ನೇಹಮಾಡಲು ಸೂಚಿಸುತ್ತಾನೆ. ದಾನವರು, ದೇವತೆಗಳು ಸೇರಿ ಸಮುದ್ರ ಮಥನ ಮಾಡುತ್ತಾರೆ. ಅಮೃತ ದೊರೆಯುತ್ತದೆ. ವಿಷ್ಣು ಮೋಹಿನಿ ರೂಪ ಧರಿಸಿ ಅಮೃತ ಹಂಚುತ್ತಾನೆ. ಲಕ್ಷ್ಮೀದೇವಿ ಶ್ರೀಹರಿಗೆ ಮಾಲೆಹಾಕಿ ವರಿಸುತ್ತಾಳೆ. ಮಂಗಳದೊಂದಿಗೆ ಕೃತಿ ಮುಗಿಯುತ್ತದೆ. ಮೋಹಿನಿ ಅವತಾರದ ವರ್ಣನೆ, ಶ್ರೀಹರಿಯ ದಶಾವತಾರದ ವರ್ಣನೆ ಮುಂತಾದುವು ಬಹು ಸೊಗಸಾಗಿ ಈ ಪುಟ್ಟ ಕೃತಿಯಲ್ಲಿ ಬಂದಿದೆ.

### ಶ್ರೀ ಹರಿಲೀಲಾ

ಶ್ರೀ ಪಾರ್ಥಿವ ಸಂವತ್ಸರ ಚೈತ್ರಶುದ್ಧ ಪಾಡ್ಯ ಶುಕ್ರವಾರ ಅಂದರೆ ೧೩-೪-೧೯೪೫ ರಂದು ಈ ಕೃತಿಯನ್ನು ರಚಿಸಿದ್ದಾರೆ. ಇದರ ವಸ್ತು ನಾಲ್ಕಾರುದಿನ ಅವರ ಮನಸ್ಸಿನಲ್ಲೇ ಸುತ್ತುತ್ತಿತಂತೆ. ಭಾಗವತ ಸಪ್ತಾಹ ನಡೆಯುತ್ತಿದ್ದಾಗ

ಪುರಂದರ ದಾಸರು ಅನೇಕ ಪವಾಡಗಳನ್ನು ಮೆರೆದರೆಂಬ ನಂಬಿಕೆಯಿದೆ. ಅದೆಲ್ಲವನ್ನು ಜೀವಮ್ಮ ಮನದುಂಬಿ ವರ್ಣಿಸಿದ್ದಾರೆ. ದುರಾಚಾರಿ ಮೈಲಾರಪ್ಪನನ್ನು ಉದ್ಧಾರ ಮಾಡಿದ್ದು, ದೇವಾಲಯದ ತೆರೆಗೆ ಬೆಂಕಿ ಬಿದ್ದಾಗ ಅದನ್ನು ಇದ್ದಲ್ಲಿಂದಲೇ ಆರಿಸಿದ್ದು, ಕೃಷ್ಣಾರ್ಪಣ ಎಂದು ಹೇಳಿ ಹರಿ ಕಲಗಚ್ಚನ್ನು ಕುಡಿಯುವಂತೆ ಮಾಡಿದ್ದು, ವ್ಯಾಸ ಪೀಠದ ಮೇಲಿಟ್ಟ ಅವರ ಹಾಡುಗಳ ಗ್ರಂಥವನ್ನು ಉಳಿದ ಶಿಷ್ಯರು ಮತ್ಸರದಿಂದ ತೆಗೆದು ಬಿಸಾಡಿದರೂ ಆ ಗ್ರಂಥ ಮತ್ತೆ ಮತ್ತೆ ವ್ಯಾಸ ಪೀಠದ ಮೇಲೆ ಬಂದು ಕುಳಿತದ್ದು, ಒಂದು ರಾತ್ರಿ ದೇಹಬಾಧೆಗೆ ಹೋಗಲು ದಾಸರು ನೀರು ಕೇಳಿದಾಗ ಪಾಂಡುರಂಗನೆ ಶಿಷ್ಯನಂತೆ ಬಂದು ನೀರು ಕೊಡಲು, ತಡವಾಯಿತೆಂದು ದಾಸರು ಗಿಂಡಿಯಿಂದ ಹೊಡೆಯಲು ಮರುದಿನ ಪಾಂಡುರಂಗ ಮುಯ್ಯಿ ತೀರಿಸುವವನಂತೆ ದಾಸರ ವೇಷದಲ್ಲಿ ಸೂಳೆಗೆ ಪಾಂಡುರಂಗನ ಕಂಕಣಕೊಟ್ಟು, ದಾಸರನ್ನು ಕಂಬಕ್ಕೆ ಕಟ್ಟಿಸಿ ಹೊಡೆಸಿದ್ದು ಇತ್ಯಾದಿ.

ಪುರಂದರ ದಾಸರ ಚರಿತ್ರೆ ಬರೆಯುವಾಗ ಜೀವಮ್ಮ ಮುಖ್ಯವಾಗಿ ಬೇಲೂರು ಕೇಶವದಾಸರ ಶ್ರೀ ಕರ್ನಾಟಕ ಭಕ್ತಿವಿಜಯವನ್ನು ಅನುಸರಿಸಿದ್ದಾರೆ. ಕೊನೆಯಲ್ಲಿ ೨೮-೧-೪೬ ರ ಪುರಂದರದಾಸರ ಆರಾಧನೆಯಲ್ಲಿ ಶ್ರೀ ಪೂಜ್ಯ ಗುರುಗಳಿಗೆ ಈ ಕೃತಿಯನ್ನು ಸಮರ್ಪಿಸುದುದಾಗಿ ಹೇಳಿದ್ದಾರೆ.

### ಶ್ರೀ ರಾಮಜನನ ಮತ್ತು ಸೀತಾಕಲ್ಯಾಣ

ಕೀಲಕನಾಮ ಸಂವತ್ಸರ ಯುಗಾದಿ ಪ್ರಯುಕ್ತ ರಚಿಸಿದ ಗದ್ಯ ಪದ್ಯ ಮಿಶ್ರ ಕಾವ್ಯ ಇದು. ಗುರು ವಾಲ್ಮೀಕರು ಲವಕುಶರಿಗೆ ಹೇಳಿದ ರಾಮಚರಿತೆಯನ್ನು ತಾನು ಹೇಳುತ್ತಿರುವಾಗಿ ಹೇಳಿದ ಕವಯಿತ್ರಿ ವೈಕುಂಠದಿಂದ ಕತೆ ಪ್ರಾರಂಭಿಸುತ್ತಾಳೆ. ದುರಳ ದೈತ್ಯರ ಉಪಟಳ ಬಹು ಹೆಚ್ಚಿರುವುದರಿಂದ ತಮ್ಮನ್ನು ಕಾಪಾಡಬೇಕೆಂದು ಇಂದ್ರಾದಿಗಳು ಹರಿಯಲ್ಲಿ ಮೊರೆ ಇಡುತ್ತಾರೆ. ವಿಷ್ಣು ಮೌನದೊಳಿರಲು ದಶಶಿರನ ಉಪಟಳವನ್ನು ಅರುಹುತ್ತಾರೆ. ಆಗ ಹರಿ 'ಪೊಡವಿಪನುದರದಿ ಜನಿಸುತ ನಿಮ್ಮನು ಕಡುಹರುಷದಿ ಪೊರೆಯುವೆ' ಎಂದು ಭರವಸೆ ನೀಡುತ್ತಾನೆ.

ಅರಿವಾಗುತ್ತದೆ. ಗಂಡನಿಗೆ ಎಲ್ಲವನ್ನು ತಿಳಿಸುತ್ತಾಳೆ. ಇಬ್ಬರೂ ಸೇರಿ ಪಾಂಡುರಂಗನನ್ನು ಸ್ತುತಿಸುತ್ತಾರೆ. ಆಗ ಶ್ರೀಹರಿ ಕೃಪೆತೋರಿ

'ಒಲ್ಲೆನು ಮಾನವ ವಲ್ಲಭೆಯನು ನಾ
ಕಲ್ಲಾಗಿರುತಿಹೆನಿದು ನೋಡಿ
ಮೆಲ್ಲನೆ ನಿಮ್ಮಯ ಸ್ಥಳಕೆ ಪೋಗಿ ಎನ್ನ
ಉಲ್ಲಾಸದಿ ಸ್ತುತಿ ಮಾಡಿರೆನೆ

ಬಂದರು ದಂಪತಿಗಳು ಕುವರಿಯ ಆ
ನಂದಕಂದನಿಗರ್ಪಿಸಿ ಮುದದಿ
ನಿಂದರು ಮಾನಸಮಂದಿರದಲಿ ಗೋ
ವಿಂದನ ಧ್ಯಾನವ ಮಾಡುತಲಿ'

ಈ ಕಾವ್ಯದ ಹೆಸರು ಪಾಂಡುರಂಗ ಚರಿತ್ರೆ ಎಂದಿದ್ದರೂ ಪುಂಡರೀಕನ ಕಥೆ ಇದರಲಿಲ್ಲ. ವಸ್ತುವಿನ ಮೂಲ ಎಲ್ಲಿಯದು ಎಂಬ ಸ್ಪಷ್ಟ ನಿರ್ದೇಶನವಿಲ್ಲ. ಅಲ್ಲಲ್ಲಿ ಅಸ್ಪಷ್ಟತೆ ಇದೆ.

### ಶ್ರೀ ವರಮಹಾಲಕ್ಷ್ಮಿಯ ಕಥೆ

ಚಾರುಮತಿ ಎಂಬ ಮುತ್ತೈದೆ ಮಹಾಲಕ್ಷ್ಮಿಯು ಮನೆಗೆ ಬಂದಂತೆಯೂ ಆಕೆಯನ್ನು ಪೀಠದಲ್ಲಿ ಕೂರಿಸಿ ಪೂಜೆ ಮಾಡಿದಂತೆಯೂ ಕನಸು ಕಂಡು ಅರ್ಧದಲ್ಲಿ ಎಚ್ಚರಗೊಳ್ಳುತ್ತಾಳೆ. ಈ ವಿಷಯವನ್ನು ಹಿರಿಯ ಮುತ್ತೈದೆಯರಲ್ಲಿ ತಿಳಿಸಿದಾಗ ಅವರು ಅವಳ ಭಾಗ್ಯವನ್ನು ಕೊಂಡಾಡಿ ಶ್ರಾವಣಮಾಸದ ವರಮಹಾಲಕ್ಷ್ಮೀ ವ್ರತವನ್ನು ನಡೆಸುವಂತೆ ತಿಳಿಸುತ್ತಾರೆ. ಚಾರುಮತಿ ಶ್ರಾವಣಮಾಸಕ್ಕಾಗಿ ಕಾದು, ಬಹುವೈಭವದಿಂದ ವರಮಹಾಲಕ್ಷ್ಮೀ ಪೂಜೆ ಮಾಡುತ್ತಾಳೆ. ಈ ಸಂಗತಿಯನ್ನು ಪಾರ್ವತಿಯ ಕೋರಿಕೆಯ ಮೇರೆಗೆ ಶಿವ ಆಕೆಗೆ ಹೇಳುತ್ತಾನೆ. ಕೇಳಿ ಅವಳು ತುಂಬಾ ಸಂತೋಷಪಡುತ್ತಾಳೆ.

ಇತ್ತ ದಶರಥ ಮಕ್ಕಳಿಲ್ಲದೆ

ಯಾತರ ಬದುಕಿದು ಯಾತಕೀರಾಜ್ಯವು
ಯಾತಕೀ ದೊರೆತನವು
ಯಾತಕೀ ವೈಭವ ಯಾತಕೀ ಅರಮನೆ
ಯಾತಕೀ ಸಂಪದವು

ಎಂದು ಕೊರಗುತ್ತಿರುತ್ತಾನೆ. ಪುತ್ರಕಾಮೇಷ್ಟಿ ಯಾಗವನ್ನು ಮಾಡುವ ಸಲಹೆ ಮುನಿಗಳಿಂದ ಬಂದಾಗ ಒಪ್ಪುತ್ತಾನೆ. ಯಾಗದ ಫಲದಿಂದ ನಾಲ್ಕು ಮಕ್ಕಳು ಜನಿಸುತ್ತಾರೆ. ನಾಮಕರಣ, ತೊಟ್ಟಿಲುತ್ಸವ, ಚೌಲ, ಉಪನಯನಗಳು ಸಾಂಗವಾಗಿ ನೆರವೇರುತ್ತವೆ. ವಿಶ್ವಾಮಿತ್ರ ಯಜ್ಞಸಂರಕ್ಷಣೆಗಾಗಿ ರಾಮನನ್ನು ಕಳುಹು ಎಂದು ಕೇಳಲು ಬರುತ್ತಾನೆ. 'ವ್ಯಾಕುಲದಿ ಕೌಸಲ್ಯೆ ನುಡಿದಳು ಚಿಂತೆಯಿಂದಲಿ ಘನಮಹಿಮ ಶ್ರೀರಾಮಚಂದ್ರನ ಕಳುಹಲಾರೆ' ದಶರಥ ಪತ್ನಿಯರನ್ನು ಒಪ್ಪಿಸಿ, ರಾಮ ಲಕ್ಷ್ಮಣರನ್ನು ಕಳುಹಿಸುತ್ತಾನೆ. ಯಾಗ ಮುಗಿಯುತ್ತಿದ್ದಂತೆಯೇ ಸೀತಾ ವಿವಾಹದ ಪತ್ರ ತಲುಪುತ್ತದೆ. ಎಲ್ಲರೂ ಮಿಥಿಲೆಗೆ ಹೊರಡುತ್ತಾರೆ.

ಹಾದಿಹಾದಿಗು ತಳಿರು ತೋರಣಗಳು
ಬೀದಿ ಬೀದಿ ಶೃಂಗಾರಗಳು
ಮೋದದಿ ರಚಿಸಿದ ಕಲಶಕನ್ನಡಿಗಳು
ಆದರದಿ ಕರೆಯುವ ಭಟರುಗಳು

ಎಲ್ಲವನ್ನು ನೋಡುತ್ತಾ ಬರುತ್ತಿರುವಾಗ

ಯಾರು ಈ ಬಾಲಕರು ಮುನಿವರ
ಮಾರಪಿತನ ಸೌಂದರ್ಯದ ರಾಶಿಯೊ

ಎಂದು ಜನಕ ಪ್ರಶ್ನಿಸಿ, ರಾಮಲಕ್ಷ್ಮಣರ ವಿಷಯ ತಿಳಿಯುತ್ತಾನೆ. 'ಧನುವೆತ್ತಿದವರಿಗೆ ತನಯಳ ನೀವೆ' ಎಂದು ಡಂಗುರ ಹೊಡೆಸುತ್ತಾನೆ.

ಈ ಪರಿ ಭೇರಿಯ ಹೊಡೆಸಲು

'ಬಾಲಕನಾದರೆ ಆಳನು ಮಾಡುವೆ
ಬಾಲಕಿಯಾದರೆ ಧಾರೆಯನೆರೆಯುವೆ'

ಎಂದು ಹರಕೆ ಹೊರುತ್ತಾಳೆ. ಪಾಂಡುರಂಗನ ಕೃಪೆಯಿಂದ ಹೆಣ್ಣು ಮಗುವೊಂದು ಜನಿಸುತ್ತದೆ. ಶ್ರೀಹರಿ ಆಗಾಗ ಬಂದು ಮಗುವನ್ನು ಕೊಡು ಎಂದು ಕೇಳಿದಾಗಲೆಲ್ಲಾ ಆ ತಾಯಿ ಮಗು ಕುಳಿತುಕೊಳ್ಳಲಿ, ಆಟ ಆಡಲಿ, ನಡೆಯಲಿ ಎಂದು ನೆಪ ಹೇಳುತ್ತಾ ಇರುತ್ತಾಳೆ. ಮಗು ಬೆಳೆದು ದೊಡ್ಡವಳಾದಾಗ ಆಕೆಯ ತಂದೆ ವರನೋಡಿ ಮದುವೆ ನಿಶ್ಚಯಿಸುತ್ತಾನೆ. ಆಗ ಪಾಂಡುರಂಗ ವಧುವಿನ ತಾಯಿಯ ಬಳಿ ಬಂದು 'ಯಾರಿಗೆ ನೀಡುವೆ ಕನ್ಯೆಯನು ಆಡಿದ ಮಾತನು ನಡೆಸದಿರುವದು ನಾರಿ ನಿನ್ನಪರಾಧವಿದು' ಎಂದು ಎಚ್ಚರಿಸುತ್ತಾನೆ. ಪ್ರಯೋಜನವಾಗದಿರಲು ಮದುವೆಯದಿನ ಇರುಳು ಮಳೆ ಸುರಿಯುವಂತೆ ಮಾಡಿ ವರನರೂಪದಿಂದ ಬಂದು

'ಮೀರುವದು ಶುಭ ಮುಹೂರ್ತವು
ಮೂರು ಜನವು ಬಂದಿಹೆವು
ಧಾರೆಯೆರೆದು ಧನ್ಯರಾಗಿ
ರೆಂದು ನುಡಿದನು'

ಕನ್ನೆಯನ್ನು ಧಾರೆಯೆರೆದು ಮದುವೆ ಮಾಡಿದರು. ಅಷ್ಟರಲ್ಲಿ ಮಳೆ ನಿಂತು ಬೀಗರೆಲ್ಲಾ ಬಂದರು. ಮದುವೆ ಮುಗಿದಿರುವುದು ನೋಡಿ ಕೋಪತಾಪಗಳಿಂದ ಬಿರುನುಡಿಗಳನ್ನಾಡಿ ಹಿಂದಕ್ಕೆ ಹೋದರು. ಮದುವೆಯ ಮನೆಯಲ್ಲಿ ಬೆಳಿಗ್ಗೆ ಎದ್ದು ನೋಡಿದರೆ ವಧುವರರಿಲ್ಲ. ಅಷ್ಟರಲ್ಲಿ ವಿಠ್ಠಲನ ಗುಡಿಯ ಬಾಗಿಲು ತೆರೆದ ಅರ್ಚಕರು ವಿಠ್ಠಲನ ಮೂರ್ತಿಯ ಸೆರಗಿಗೆ ಗಂಟುಹಾಕಿ ಇರುವ ವಧುವನ್ನು ನೋಡಿ ಅಚ್ಚರಿಗೊಳ್ಳುತ್ತಾರೆ. ಊರಜನರೆಲ್ಲರೂ ಅಲ್ಲಿ ಸೇರುತ್ತಾರೆ. ತಂದೆ ತಾಯಿಯರು ಅಗಮಿಸುತ್ತಾರೆ. 'ಕರತಂದವರ್‍ಯಾರಿಲ್ಲಿಗೆ ನಿನ್ನನು ಸುಮನಸವಂದ್ಯನ ಬಳಿಯಲ್ಲಿ' ಎಂದು ಮಗಳನ್ನು ಪ್ರಶ್ನಿಸುತ್ತಾರೆ. 'ನೀವೇಧಾರೆಯನೆರೆದಿಹಿರಿನ್ನು .... ಶ್ರೀವರ ಎನ್ನನು ಕರೆತಂದಿಹನು' ಎನ್ನುತ್ತಾಳೆ. ಆಗ ತಾಯಿಗೆ ತನ್ನ ತಪ್ಪಿನ

ಭೂಪತಿಗಳೆಲ್ಲ ಕೇಳುತ ತ್ವರದಿ
ತಾಪಸರನು ಲೆಕ್ಕಿಸದಲೆ
ಆತುರದಿ ಬಂದೆತ್ತುತಿದ್ದರು ಧನುವ

ವೀರಾಧಿವೀರರೆಲ್ಲ ಬರುತಲಿ ಮಹ
ಘೋರರೂಪದಿ ತೋರುವ
ಭಾರಿಯ ಧನುವೆತ್ತಿ ಕಾಲು ಮುರಿಯಲು
ಹೇಳಕೇಳದೆ ತಮ್ಮ ತಮ್ಮ ಪೀಠಗಳೇರಲು

ದಶಶಿರ ಧನುವೆತ್ತಿದ ಜಾನಕಿ ತನ್ನ
ವಶಳಾಗಬೇಕೆನ್ನುತ
ಕುಶಲದಿಂದೆತ್ತಲು ಕುಸಿಯಲು ಬಲವೆಲ್ಲ
ಅಸುರನು ತಲೆಕೆಳಗಾಗಿ ಬೀಳಲು ಭರದಿ

ಇದನ್ನೆಲ್ಲಾ ನೋಡಿ ಜನಕರಾಜ 'ಧನುರ್ವೀರರಿಲ್ಲ' ಎಂದು ಚಿಂತಿಸುತ್ತಾನೆ. ಆಗ ವಿಶ್ವಾಮಿತ್ರ ರಾಮನನ್ನು ಬಿಲ್ಲೆತ್ತುವಂತೆ ಹೇಳುತ್ತಾನೆ. ಈ ಸನ್ನಿವೇಶದಲ್ಲಿ ಜೀವಮ್ಮ ಹೊಸ ಕಲ್ಪನೆಯೊಂದನ್ನು ಹೆಣೆದಿದ್ದಾರೆ. ಶ್ರೀರಾಮ ಲಕ್ಷ್ಮಣನನ್ನು ಕುರಿತು ಹೀಗೆ ಹೇಳುತ್ತಾನೆ.

ತೆರೆಯ ಮರೆಯಲಿ ಜಾನಕಿ ಇರುತಿರೆ
ಅರಿತು ಪೇಳ್ವುದು ಚಲ್ವಿಕೆಯ
ಸರಿಬಂದರೆ ಎನ ಮನಸಿಗೆ ಧನುವನು
ಅರೆ ನಿಮಿಷದಿ ಬಾಗಿಪೆನೆನಲು

ಸೀತೆ ಸುಂದರಿಯಿಲ್ಲದಿದ್ದರೆ ಬಿಲ್ಲು ಬಾಗಿಸುವ ಸಾಹಸ ವ್ಯರ್ಥವೆಂದು ರಾಮನ ಎಣಿಕೆ. ಲಕ್ಷ್ಮಣ ಮನದಲ್ಲಿ ಮಹಾಲಕ್ಷ್ಮಿಯನ್ನು ಸ್ಮರಿಸಿ ಸೀತೆಯನ್ನು ಅಡಿಯಿಂದ ಮುಡಿಯವರೆಗೆ ವರ್ಣಿಸುತ್ತಾನೆ. ವರ್ಣನೆ ಕೇಳಿದ ರಾಮ ನಗುತ್ತಾ 'ಇಷ್ಟು ಯಾರ ವರ್ಣನೆ' ಎನಲು, ಲಕ್ಷ್ಮಣ 'ಶ್ರೇಷ್ಠರಾಮರ ಪಟ್ಟದರಸಿಯದು' ಎನ್ನುತ್ತಾನೆ. ದಿಟ್ಟ ರಾಮ ಧನುವ ಮೆಟ್ಟಿ ಮುರಿಯುತ್ತಾನೆ. ಸೀತೆ ಅವನ

ಈ ಕಾವ್ಯಕ್ಕೆ ಕವಯಿತ್ರಿ 'ಗಾಲವ ಚರಿತ್ರೆ' ಎಂದು ಹೆಸರುಕೊಟ್ಟಿರುವುದಕ್ಕೆ ಪುರಾಣಗಳಲ್ಲಿ ಸಮರ್ಥನೆ ಇಲ್ಲ. ಪುರಾಣದಲ್ಲಿ ಬರುವ ವಿಶ್ವಾಮಿತ್ರನ ಶಿಷ್ಯ ಗಾಲವನಿಗೂ ಇಲ್ಲಿಯ ಗಾಲವನಿಗೂ ಸಂಬಂಧವಿಲ್ಲ. ಗಯ ಎಂಬ ಗಂಧರ್ವನ ಕತೆಯೊಂದು ಇದನ್ನು ಹೋಲುತ್ತದೆ. ಗಯನು ಉಗುಳಿದ ತಾಂಬುಲ ಕೃಷ್ಣನು ಅರ್ಘ್ಯಕೊಡಲು ಹಿಡಿದಿದ್ದ ಬೊಗಸೆಯ ನೀರಿನಲ್ಲಿ ಬೀಳುತ್ತದೆ. ಇದರಿಂದ ಕೋಪಗೊಂಡ ಕೃಷ್ಣ ಅವನನ್ನು ಕೊಲ್ಲುವ ಪ್ರತಿಜ್ಞೆ ಮಾಡುತ್ತಾನೆ. ನಾರದರ ಸೂಚನೆಯ ಮೇರೆಗೆ ಗಯ ಅರ್ಜುನನ ಮೊರೆ ಹೋಗುತ್ತಾನೆ. ಅರ್ಜುನ ಹಿಂದೆ ಮುಂದೆ ವಿಚಾರಿಸದೆ ಅಭಯ ನೀಡುತ್ತಾನೆ. ವಿಷಯ ತಿಳಿದು ತನ್ನ ಅವಿವೇಕವನ್ನು ನಿಂದಿಸಿ ಕೊಳ್ಳುತ್ತಾನೆ. ಕೊನೆಗೆ ಗಯನಿಗಾಗಿ ಕೃಷ್ಣಾರ್ಜುನರಲ್ಲಿ ಯುದ್ಧ ನಡೆಯಬೇಕಾಗುತ್ತದೆ. ಆಗ ದೇವತೆಗಳೆಲ್ಲಾ ಅಲ್ಲಿ ಸೇರಿ ಗಯನನ್ನು ಕೃಷ್ಣನ ಚರಣದ ಮೇಲೆ ಅಡ್ಡ ಬೀಳಿಸಿ ಕ್ಷಮಾದಾನ ಕೊಡಿಸುತ್ತಾರೆ. ಭಾರತ ಭಾಗವತಾದಿಗಳಲ್ಲಿ ಎಲ್ಲಿಯೂ ಇಲ್ಲದ ಈ ಕಥೆ 'ಗಯೋಪಾಖ್ಯಾನ' ಎಂದು ಪ್ರಸಿದ್ಧವಾಗಿದೆ. ಯಕ್ಷಗಾನದಲ್ಲಂತೂ 'ಕೃಷ್ಣಾರ್ಜುನರ ಕಾಳಗ' ಅತ್ಯಂತ ಜನಪ್ರಿಯ ಪ್ರಸಂಗವಾಗಿದೆ. ಜೀವೂಬಾಯಿ ಈ ಕಥೆಯನ್ನು ಹರಿಕತೆಯಲ್ಲಿ ಕೇಳಿ ಅದನ್ನು ಅದೇ ಧಾಟಿಯಲ್ಲಿ ವಿಸ್ತರಿಸಿ ಬರೆದಿರುವಂತೆ ಕಾಣುತ್ತದೆ. ಕೆಲವು ಭಾಗಗಳು ಸ್ವಾರಸ್ಯವಾಗಿ ಮೂಡಿ ಬಂದಿದೆ.

ಶ್ರೀಪಾಂಡುರಂಗ ಚರಿತ್ರೆ

ಪಂಢರಪುರದಲ್ಲಿ ಮಕ್ಕಳಿಲ್ಲದೆ ಕೊರಗುತ್ತಿದ್ದ ಹೆಣ್ಣೊಬ್ಬಳು

> 'ಕಂದರಾಡುತ ಬರಲು ಮೋದದಿ
> ಚಂದದಿಂ ಮುದ್ದಿಸುತ ಹರುಷದಿ
> ಅಂದವಾಗಿಹ ಮುಖನೋಡುವ ಭಾಗ್ಯವಿಲ್ಲೆನಗೆ
> ------- ಪುತ್ರರಿಲ್ಲದ ಜನ್ಮವಿದು ವ್ಯರ್ಥ,

ಎಂದು ದು:ಖಿಸುತ್ತಾ, ಹರಿಯನ್ನು ಪರಿಪರಿಯಾಗಿ ಪ್ರಾರ್ಥಿಸುತ್ತಾಳೆ.

ಕೊರಳಿಗೆ ಮಾಲೆ ಹಾಕುತ್ತಾಳೆ. ಲಕ್ಷ್ಮಣ ಊರ್ಮಿಳೆ, ಭರತ ಮಾಂಡವಿ, ಶತ್ರುಘ್ನ ಶ್ರುತಕೀರ್ತಿ ಪರಸ್ಪರ ಮಾಲೆ ಹಾಕುತ್ತಾರೆ. ಮದುವೆಯ ಸಂಪ್ರದಾಯಗಳೆಲ್ಲಾ ಬಹು ವಿಜೃಂಭಣೆಯಿಂದ ನಡೆಯುತ್ತದೆ. ಜನಕ ಮಹಾರಾಜ ನಾಲ್ಕುದಿನ ಪರ್ಯಂತ ವೈಭವದಿಂದ ಕಾರ್ಯಕ್ರಮಗಳನ್ನು ಜರಗಿಸುತ್ತಾನೆ. ಬೇಕಾದಷ್ಟು ಉಡುಗೊರೆಗಳನ್ನು ನೀಡುತ್ತಾನೆ. ಅಷ್ಟೇ ಅಲ್ಲ 'ವಿಚಿತ್ರದಿ ವರದಕ್ಷಿಣೆ' ಕೂಡ ಕೊಡುತ್ತಾನೆ!

ವಸ್ತು ರಾಮಜನನ ಮತ್ತು ಸೀತಾಕಲ್ಯಾಣವಾದರೂ ೧೨ ನುಡಿಗಳ ಮಂಗಳ ಪದ್ಯದಲ್ಲಿ ಇಡೀ ರಾಮಾಯಣವನ್ನು ಸಂಗ್ರಹವಾಗಿ ಹೇಳಲಾಗಿದೆ. ಫಲಶ್ರುತಿಯೊಂದಿಗೆ ಕಾವ್ಯ ಮುಗಿಯುತ್ತದೆ.

### ಗಾಲವ ಚರಿತ್ರೆ

ಒಂದು ದಿನ ಸ್ನಾನಕ್ಕಾಗಿ ಬಂದ ಗಾಲವ ಮುನಿಗಳು, ಸ್ನಾನ ಮುಗಿಸಿ ಸೂರ್ಯನಿಗೆ ಅರ್ಘ್ಯವನ್ನು ಕೊಡಲು ಕೈಯ್ಯಲ್ಲಿ ನೀರನ್ನು ಹಿಡಿದು ನೋಡಿದಾಗ ಅದು ಮಲಿನವಾಗಿರುವುದು ಕಂಡುಬರುತ್ತದೆ.

ಸ್ವಸ್ಥ ಚಿತ್ತವಿಲ್ಲದಿರುವ ಮನದಿ ಯೋಚಿಸಿ
ಅಸ್ತಮಾನದೊಳವನ ಸಿರವತರಿವೆನೆನುತಲಿ

ಹೊರಡುತ್ತಾನೆ. ಅದೇ ಸಮಯಕ್ಕೆ ಸರಿಯಾಗಿ ನಾರದರ ಆಗಮನವಾಗುತ್ತದೆ. ಗಾಲವರಿಂದ ವಿಷಯ ತಿಳಿದ ನಾರದರು ನಿಮ್ಮ ಪ್ರತಿಜ್ಞೆ ನೆರವೇರಬೇಕಾದರೆ ಕೃಷ್ಣನಿಂದ ಮಾತ್ರ ಸಾಧ್ಯ ಎಂದು ಹೇಳಿ, ಗಾಲವರನ್ನು ಜೊತೆಯಲ್ಲಿ ಕರೆದುಕೊಂಡು ದ್ವಾರಕಾಪುರಕ್ಕೆ ಹೋಗುತ್ತಾರೆ. ಬಾಗಿಲ ಹೊರಗೆ ನಿಂತ ನಾರದರು, ಗಾಲವರನ್ನು ಹರಿಯಲ್ಲಿಗೆ ಕಳುಹಿಸುತ್ತಾರೆ. ಗಾಲವರ ಬೇಡಿಕೆಯನ್ನು ಕೇಳಿದ ಹರಿ 'ಆಗಲಿ ನೋಡೋಣ ಹೋಗಿ ಬನ್ನಿರಿ' ಎನ್ನುತ್ತಾನೆ. ಗಾಲವರು ಸಂತೋಷದಿಂದ ಬಂದು ನಾರದರಿಗೆ ತಿಳಿಸಿದಾಗ ಅವರು,

ಅಲ್ಲದೆ ತನ್ನಣ್ಣ ಕೃಷ್ಣ ಎಂದು ಗೊತ್ತಾದಾಗ ಎಚ್ಚರ ತಪ್ಪಿ ಕುಸಿದು ಬೀಳುತ್ತಾಳೆ. ಕಡೆಗೆ ನಾರದರ ಧೈರ್ಯದ ಮಾತುಗಳನ್ನು ಕೇಳಿ ಆ ಗಂಧರ್ವನನ್ನು ತನ್ನ ಮನೆಗೆ ಕರೆದುಕೊಂಡು ಬಂದು ಗುಪ್ತಗೃಹದಲ್ಲಿರಿಸಿ, ವಸ್ತ್ರಾಭರಣಗಳನ್ನೆಲ್ಲಾ ಬಿಸಾಡಿ ಮಂಚದಲ್ಲಿ ಮಲಗುತ್ತಾಳೆ. ಅಲ್ಲಿಗೆ ಬಂದ ಅರ್ಜುನ ಪರಿಪರಿಯಾಗಿ ಕೇಳಿದಾಗ ಅವನಿಂದ ಭಾಷೆ ಪಡೆದ ಸುಭದ್ರೆ ವಿಷಯ ತಿಳಿಸುತ್ತಾಳೆ. ಆಗ ಅರ್ಜುನ 'ಕೊಟ್ಟಮಾತು ತಪ್ಪಿದರೀಗ ಮಾಡುವೆನು ಅಗ್ನಿಪ್ರವೇಶವೆನ್ನುತ ತಿಳಿ' ಎಂದು ನುಡಿಯುತ್ತಾನೆ. ನಾರದರ ಮೂಲಕವೇ ಈ ಸಕಲ ವೃತ್ತಾಂತವು ಕೃಷ್ಣನಿಗೆ ತಿಳಿಯುತ್ತದೆ.

ಅನಿವಾರ್ಯವಾಗಿ ಕೃಷ್ಣಾರ್ಜುನರ ಯುದ್ಧ ಘಟಿಸುತ್ತದೆ. 'ಹರಿಪಾರ್ಥರ ಸಮರವು ನೋಡಲು ಬಲು ಪರಮ ಆಶ್ಚರ್ಯವು' ಎಂದು ದೇವತೆಗಳೆಲ್ಲಾ ಬಂದು ಅಂಬರದಲ್ಲಿ ನೆರೆಯುತ್ತಾರೆ. ಧರ್ಮರಾಯ ಯುದ್ಧ ಬೇಡವೆಂದೂ ಭೀಮಸೇನ ಯುದ್ಧ ನಡೆಯಬೇಕೆಂದು ಹೇಳುತ್ತಾರೆ. ಕಡೆಗೂ ಯುದ್ಧ ನಡೆದು ಕೃಷ್ಣ ಚಿತ್ರರಥನ ತಲೆ ಕತ್ತರಿಸಿ, ದ್ವಾರಕಾಪುರಕೆ ಹೊರಡುತ್ತಾನೆ. ಅರ್ಜುನ ಅಗ್ನಿಪ್ರವೇಶಕ್ಕೆ ಸಿದ್ಧತೆ ನಡೆಸುತ್ತಾನೆ. ವಿಷಯ ತಿಳಿದ ಕೃಷ್ಣ ಗರುಡಗಮನನಾಗಿ ಬಂದು

'ತಡಿ ತಡಿ ತಡಿ ತಡಿ ಫಲ್ಗುಣಾ<br>
ದುಡುಕುವುದೇತಕ್ಕೆ ನಾನಿರುತಿರಲು<br>
ಬಿಡು ಬಿಡು ಅಗ್ನಿ ಪ್ರವೇಶವಾ<br>
ಸಡಗರವೇನಿದು ಸರಿಯುಲ್ಲವು ಸಾಧನ'

ಎಂದು ತಡೆಯುತ್ತಾನೆ. 'ಕಮಲಾಕ್ಷನೆ ರಕ್ಷಿಸು ಗಂಧರ್ವನ' ಎಂದು ಪಾರ್ಥ ಬೇಡಲು ಹರಿ ನಗುತ 'ಹೊಂದಿಸಿಡು ರುಂಡಮುಂಡಗಳ ಪಾರ್ಥನೆ ಎನಲು ಹರಿಯು ನುಡಿದಂದದಲಿ ನಡಿಸಿದನು ಫಲ್ಗುಣನು ಮುರವೈರಿ ಕರುಣಾಕಟಾಕ್ಷದಿಂದೀಕ್ಷಿಸಲು ಚಿತ್ರರಥ ಮೈಮುರಿದು ಎದ್ದು ಕುಳಿತಿರಲಾಗ' ಎಲ್ಲರೂ ಹರ್ಷಿತರಾಗುತ್ತಾರೆ. ಮಂಗಳದೊಂದಿಗೆ ಕೃತಿ ಮುಗಿಯುತ್ತದೆ.

ಆಗಲಿ ನೋಡೋಣವೆಂದು
ಆಗದ ಹೋಗದ ಮಾತನು ನಂಬಿ
ಈಗ ನಿಮ್ಮ ಶಪಥವು ಎಂತು
ಆಗುವುದೆಂದೆನಲು

ಗಾಲವರು ಮತ್ತೆ ಹರಿಯಲ್ಲಿಗೆ ಹೋಗಿ ಸಂದೇಹ ವ್ಯಕ್ತಪಡಿಸಲು ಶ್ರೀಹರಿಯು ತಂದೆತಾಯಿಗಳ, ಬಂಧುಬಳಗಗಳ ಮೇಲೆ ಆಣೆ ಇಟ್ಟು ನಂಬಿಕೆ ಹುಟ್ಟಿಸುತ್ತಾನೆ. ಇದನ್ನು ತಿಳಿದ ನಾರದರು 'ತಂದೆತಾಯಿಗಳಿಲ್ಲದವನ, ಬಂಧುಬಳಗಗಳಿಲ್ಲದವನ' ಮಾತನ್ನು ನಂಬಲಾಗದು ಗಟ್ಟಿ ವಚನ ಪಡೆದು ಬಾ ಎನ್ನುತ್ತಾರೆ. ಗಟ್ಟಿವಚನವೆಂದರೆ 'ಕೃಷ್ಣನವಚನವೋ ರಾಮನವಚನವೋ' ಎಂಬುದನ್ನು ಖಚಿತ ಪಡಿಸಿಕೊಳ್ಳಲು ಹೇಳುತ್ತಾರೆ. ಇದೆಲ್ಲವೂ ನಾರದರ ಕುತಂತ್ರ ಎಂದು ತಿಳಿದ ಕೃಷ್ಣ ರಾಮನ ವಚನ ನೀಡುತ್ತಾನೆ. ಆಡಿದ ಮಾತಿಗೆ ತಪ್ಪದ ರಾಮನ ಗುಣವನ್ನು ಕವಯಿತ್ರಿ ಇಲ್ಲಿ ಸೂಕ್ಷ್ಮವಾಗಿ ಸೂಚಿಸಿದ್ದಾರೆ.

ಇತ್ತ ಅರ್ಘ್ಯದ ನೀರು ಮಲಿನವಾಗಲು ಕಾರಣನಾದ ಚಿತ್ರರಥನೆಂಬ ಗಂಧರ್ವ ತನ್ನ ಸತಿಯರೊಡನೆ ಸಂತೋಷವಾಗಿ ಕಾಲಕಳಿಯುತ್ತಿರಲು, ನಾರದರು ಅಲ್ಲಿಗೆ ಬಂದು ವಿಷಯ ತಿಳಿಸುತ್ತಾರೆ. ಹೆದರಿದ ಗಂಧರ್ವ ಇದಕ್ಕೆ ಪರಿಹಾರವೇನು ಎನ್ನಲು, ಅವನನ್ನು ಕರೆದುಕೊಂಡು ಯಮುನಾ ತೀರಕ್ಕೆ ಬರುತ್ತಾರೆ. ಅಲ್ಲಿ ಮರವೊಂದರ ಮೇಲೆ ಅಡಗಿ ಕುಳಿತುಕೊಳ್ಳುವಂತೆ ಹೇಳಿ, ತಾನು ಚಪ್ಪಾಳೆ ತಟ್ಟಿದಾಗ ಕೆಳಗೆ ಬಂದು, ಅಲ್ಲಿಗೆ ಬರುವ ಹೆಂಗಸರಲ್ಲಿ ಹಿರಿಯಳ ಕಾಲು ಹಿಡಿಯಲು ಹೇಳುತ್ತಾರೆ. ಸ್ವಲ್ಪಹೊತ್ತಿನಲ್ಲಿ ಸುಭದ್ರೆ ತನ್ನ ಸಖಿಯರೊಡನೆ ಸ್ನಾನಕ್ಕೆ ಬರುತ್ತಾಳೆ. ಸಂಕಲ್ಪ ಮಾಡಿಸಲು ಪುರೋಹಿತರಿಲ್ಲವಲ್ಲ ಎಂದು ಸುತ್ತನೋಡಿದಾಗ ನಾರದರು ಕಣ್ಣಿಗೆ ಬೀಳುತ್ತಾರೆ. ಅವರನ್ನು ಕೇಳಿದಾಗ ಅವರು ಉಪಾಯವಾಗಿ ಸುಭದ್ರೆಯ ಬಾಯಲ್ಲಿ 'ಶರಣಾಗತರ ಸಂರಕ್ಷಣೆ ಮಾಳ್ಪೆ' ಎಂದು ಸಂಕಲ್ಪ ಮಾಡಿಸುತ್ತಾರೆ. ನಾರದರ ಸಂಜ್ಞೆ ತಿಳಿದ ಚಿತ್ರರಥ ಮರದಿಂದ ಕೆಳಗಿಳಿದು ಬಂದು ಸುಭದ್ರೆಯ ಕಾಲು ಹಿಡಿದು ರಕ್ಷಣೆ ಯಾಚಿಸುತ್ತಾನೆ. ಸುಭದ್ರೆ ಫಲ್ಗುಣನ ಪಾದದಾಣೆಗೂ ರಕ್ಷಿಸುವುದಾಗಿ ಭರವಸೆ ನೀಡುತ್ತಾಳೆ. ಆದರೆ ವೈರಿ ಬೇರಾರೂ

ಕೃಷ್ಣಃ ಮಾತೆಯರನೆ ಅರಸುತಿರಲು
ಪ್ರೀತಿಯಿಂದ ಕರುಗಳನ್ನು
ಜೋಕೆಯಿಂದ ಪಿಡಿದು ತರಲು
ಯಾತಕೀಪರಿ ನಿಂದಿಸುವುದು
ನೋಡಿ ಕರುಗಳ ನಿಂತಿರುವುದು ನೋಡಿಕರುಗಳ ಕೊನೆಗೆ
ಕೃಷ್ಣ ಸರಸವಾಡುತಿಹಿರಿ ಎನ್ನ
ಸ್ಮರಣೆಯಿಂದ ತನುವಮರೆತು
ಕ್ಷಮಿಪೆ ನಿಮ್ಮ ಗೃಹಕೆ ತೆರಳಿ
ವನಜ ಮುಖಿಯರೆಲ್ಲರು

ಎಂದು ಹೇಳಿ ಮನೆಗೆ ಕಳುಹಿಸುತ್ತಾನೆ.

ಚಾಡಿ ಮಾತು ಕೇಳಿ ಕೇಳಿ ಸಾಕಾಗಿ ಯಶೋದೆ

ಬ್ಯಾಡೊ ಒಬ್ಬರ ಮನೆಗೆ ನೀ ಪೋಗ
ಬ್ಯಾಡೊ ಒಬ್ಬರ ಮನೆಗೆ

ಎಂದು ಬೇಡಿಕೊಳ್ಳುತ್ತಾಳೆ. ಅವನು ಮಾಡಿದನೆಂದು ಹೇಳಿದ ತುಂಟಾಟಗಳನ್ನೆಲ್ಲ ತಿಳಿಸುತ್ತಾಳೆ.

ಮಕ್ಕಳೆಲ್ಲರು ಕೈಯ್ಯೊಳು ಬಟ್ಟಲಿ ಅವ-
ಲಕ್ಕಿಯ ತಿನ್ನುತಿರಲು
ಫಕ್ಕನೆ ಬಡಿಯೆ ದಿಕ್ಕು ದಿಕ್ಕಿಗೆ ಚಲ್ಲೆ
ಬಿಕ್ಕಿ ಬಿಕ್ಕಿ ಅಳುತಾರೆ ಗೋಪಕ್ಕ ನೀನೋಡೆಂಬರು

ಎಂದು ಹೇಳುತ್ತಾಳೆ. ಅದಕ್ಕೆ ಕೃಷ್ಣ

ನಾನೆಲ್ಲೊ ಪೋಗಲಿಲ್ಲ ನಾರಿಯರೆನ್ನ
ದೂರುವರಿದ ನೋಡಮ್ಮಾ

ಎಂದು ತನ್ನ ಅಹವಾಲನ್ನು ನಿವೇದಿಸಿಕೊಳ್ಳುತ್ತಾನೆ. ಈ ಎಲ್ಲ ಹಾಡುಗಳಲ್ಲಿ ಕೃಷ್ಣ ಕೇಶಿ, ಬಕ, ಧೇನುಕ, ವತ್ಸಾಸುರ, ಪೂತನಿ ಮುಂತಾದವರನ್ನು ಸಂಹಾರ ಮಾಡಿದ ವಿಷಯ ಮತ್ತೆ ಮತ್ತೆ ಬಂದು ಕೃಷ್ಣನ ಮಹಿಮೆ ಪ್ರಕಟವಾಗುತ್ತದೆ.

ಮುಕ್ತಿದಾಯಕ ಹರಿಗೆ ಸಮರು
ಅಧಿಕರ್‍ಯಾರಿಲ್ಲೆನುತ ನಗುವರು ೪

ಮುದ್ದು ಮಾತಗಳ ಕೇಳಿ ಸಂಭ್ರಮದಿಂದ
ಎದ್ದು ಮಗನನಪ್ಪುತ
ಶ್ರದ್ಧೆಯಿಂದಲಿ ನೋಡುವ ತೊಡೆಯಲಿಟ್ಟು
ಮುದ್ದಿಸಿ ನಸುನಗುತಾ
ಪದ್ಮನಾಭ ಶ್ರೀ ಕಮಲನಾಭನ ವಿ–
ಠ್ಠಲನ ಮುಡಿನೇವರಿಸಿ ಹರುಷದಿ
ತಿದ್ದುತಲಿ ಮುಂಗುರಳು ನಗುಮುಖ
ಮುದ್ದಿಸುತ ಮುದದಿಂದ ನಲಿವಳು ೫

ಲಾಲಿಸಿದಳು ಮಗನ ಗೋಪೀದೇವಿ
ಲಾಲಿಸಿದಳು ಮಗನ

## ೧೮

ನೂತನಕೆ ನೂತನ ಬಲು ನೂತನ
ಶೇಷಗಿರಿವಾಸ ನಿನ್ನ ಮಹಿಮೆ ನೂತನವು ಪ

ಮಾಡದನೆ ಮಾಡಿಸುವಿ ನೋಡದನೆ ನೋಡಿಸುವಿ
ಬೇಡದಿದ್ದುದನೆಲ್ಲ ಕಾಡಿ ಬೇಡಿಸುವಿ
ನಾಡೊಳಗೆ ನಿನ್ನ ಪೋಲುವರುಂಟೆ ಸರ್ವೇಶ
ಮೂಡಲಗಿರಿವಾಸ ನಿನ್ನ ಮಹಿಮೆ ನೂತನವು ೧

ಅಣುಮೇರು ಮಾಡಿಸುವಿ ಘನತೃಣವ ಮಾಡಿಸುವಿ
ಘನ ಕೃಪಾಂಬುಧಿ ನಿನ್ನ ಮಹಿಮೆ ನೂತನವೊ
ಅಣಕವಾಡುವರಲ್ಲಿ ಕುಣಿಸಿ ಮರೆಸುತಲಿರುವಿ
ಫಣಿಶಾಯಿ ನಿನ್ನ ಮಹಿಮೆ ಪ್ರತಿಕ್ಷಣಕೆ ನೂತನವು ೨

ನವನೀತ ಚೋರನೆ ಮನೆಮನೆಗಳ ಪೊಕ್ಕು
ಗಾರು ಮಾಡಿದ ಕೃಷ್ಣ ಹರಿಯೆಂದು ಸ್ಮರಿಸದೆ ೪

ಬೆತ್ತಲೆ ನಿಂತರು ಉತ್ತಮ ನೆನಿಸಿದಿ
ಸತ್ಯಮೂರುತಿ ಪುರುಷೋತ್ತಮನೆ
ಕತ್ತಿ ಕಯ್ಯಲಿ ಪಿಡಿದು ಮತ್ತೆರಾವುತನಾಗಿ
ಸುತ್ತಿ ಸುತ್ತಿದ ಸರ್ವೋತ್ತಮನರಿಯದೆ ೫

ಭಕ್ತವತ್ಸಲಸ್ವಾಮಿ ಭಯನಿವಾರಣನೆಂದು
ಭೃತ್ಯರು ನೃತ್ಯದಿ ಕುಣಿಯುವರೊ
ಸತ್ಯ ಸಂಕಲ್ಪನೆ ಸತ್ಯಭಾಮೆಯ ಪ್ರಿಯ
ಭಕ್ತರೊಡೆಯ ಪರವಸ್ತುವ ಸ್ಮರಿಸದೆ ೬

ಕರುಣವಾರಿಧಿಯೆಂದು ಸ್ಮರಿಸುವ ಭಕುತರ
ಪರಿ ಪರಿ ಅಘಗಳು ಪರಿಹಾರವೊ
ಶರಧಿಸುತೆಯ ಪತಿ ಕಮಲನಾಭ ವಿಠ್ಠಲ
ಸ್ಮರಿಸದೆ ಅಪರಾಧ ಸಲಹೆಂದು ಸ್ಮರಿಸದೆ ೭

## ೩೪

ಮಾಧವ ಮಧುಸೂದನ ಕೇಶವ ಹರೆ
ಯಾದವ ಕೃಷ್ಣ ಶ್ರೀಹರಿ ಶೌರೆ ಪ

ವೇದವೇದ್ಯ ಸನ್ಮುನಿಗುಣ ಸೇವಿತ
ಸಾಧುವಂದಿತ ಚರಣಕೆ ನಮಿಪೆ ಅ.ಪ

ಮಂದರಧರ ಗೋವಿಂದ ಮುಕುಂದನೆ
ಇಂದಿರೆಯರಸ ಹೃನ್ಮಂದಿರದಿ
ಮಂದಗಮನೆ ಮಹಾಲಕ್ಷ್ಮಿಯೊಡನೆ ಆ–
ನಂದದಿ ನಲಿನಲಿದಾಡು ಹರಿ ೧

ಕವಿಯಿತ್ರಿಯನ್ನು ವಿಶೇಷವಾಗಿ ಆಕರ್ಷಿಸಿರುವುದು ಹರಿಯ ಮೋಹಿನಿ ಅವತಾರ. ಅಮೃತವನ್ನು ಹಂಚುವಾಗ, ಶಿವ ಮೋಹಿನಿ ರೂಪ ನೋಡಬೇಕೆಂದು ಬಯಸಿದಾಗ ಮತ್ತು ಭಸ್ಮಾಸುರನನ್ನು ನಾಶಮಾಡುವಾಗ – ಹೀಗೆ ಮೂರು ಬಾರಿ ಹರಿ ಮೋಹಿನಿಯಾಗುತ್ತಾನೆ. ಇದರ ವರ್ಣನೆ ಅನೇಕ ಸಂದರ್ಭಗಳಲ್ಲಿ ಬಂದಿದೆ. ಮುಖ್ಯವಾಗಿ 'ಎಂತು ಶೋಭಿಸುತಿಹಳು ಈ ಕನ್ನಿಕೆ' ಎಂಬ ಹಾಡಿನಲ್ಲಿ ಮೋಹಿನಿಯ ರೂಪ, ಲಾವಣ್ಯ ಅವಳ ಅಲಂಕಾರ ವಿಸ್ತಾರವಾಗಿ ವರ್ಣಿತವಾಗಿದೆ.

'ಶ್ರೀನಿವಾಸನೆ ಏಳು ಶ್ರೀನಿಕೇತನೆ ಏಳು' 'ಬಾರಯ್ಯ ಶ್ರೀ ಶ್ರೀನಿವಾಸ ಭಕ್ತವತ್ಸಲ' ಮುಂತಾದ ಹಾಡುಗಳಲ್ಲಿ ತಿರುಪತಿಯ ತಿಮ್ಮಪ್ಪನ ವೈಭವದ ವಿವರ ಶ್ರೀನಿವಾಸ ಕಲ್ಯಾಣದ ಕಥೆ ಇದ್ದರೆ, 'ರಾಜೀವ ದಳ ನೇತ್ರ ರಾಮಚಂದ್ರನೆ', 'ರಾಮ ಶ್ರೀರಾಮ ಸೀತಾರಾಮ' ಇತ್ಯಾದಿಗಳಲ್ಲಿ ರಾಮಾಯಣದ ಪ್ರಮುಖ ಘಟನೆಗಳ ಪ್ರಸ್ತಾಪ ಇದೆ.

ಶ್ರೀಹರಿಯ ಮಡದಿ ಲಕ್ಷ್ಮಿಯ ಮೇಲೂ ಜೀವೂಬಾಯಿ ಅವರು ಹತ್ತಾರು ಹಾಡುಗಳನ್ನು ಬರೆದಿದ್ದಾರೆ. ಮುಖ್ಯವಾಗಿ ಇವು ಆಕೆಯನ್ನು ಕರೆಯುವ, ಪೂಜಿಸುವ, ಬೇಡುವ ಭಕ್ತಿಯ ಹಾಡುಗಳಾಗಿವೆ. ಭಾರತಾದೇವಿ, ಪಾರ್ವತಿದೇವಿಯರ ಮೇಲೂ ಒಂದೆರಡು ಹಾಡುಗಳಿವೆ.

ಪ್ರಾಣದೇವರ ಅಂಶ ತ್ರೇತಾಯುಗದಲ್ಲಿ ಹನುಮಂತನಾಗಿಯೂ ದ್ವಾಪರದಲ್ಲಿ ಭೀಮಸೇನನಾಗಿಯೂ ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ ಜನಿಸಿದ್ದೆಂಬ ನಂಬಿಕೆ ಮಾಧ್ವರಲ್ಲಿರುವುದರಿಂದ ಈ ಮೂವರನ್ನು ಸ್ತುತಿಸುವ ಹಲವು ಹಾಡುಗಳಿವೆ. ರಾಮಾಯಣ, ಮಹಾಭಾರತದ ಕತೆಗಳು ಇವುಗಳೊಂದಿಗೆ ಹಾಸುಹೊಕ್ಕಾಗಿ ಹೋಗಿವೆ. ಹನುಮನ, ಭೀಮನ ಪ್ರತಾಪವನ್ನು ವರ್ಣಿಸುವುದಕ್ಕೆ ಅವಕಾಶ ಇಲ್ಲಿ ದೊರೆಯುತ್ತದೆ. ಜೀವಮ್ಮ ಹರಿಕತೆ, ಪುರಾಣಗಳನ್ನು ಕೇಳುತ್ತಾ ಬಂದವರಾದ್ದರಿಂದ ಮೂಲಕತೆ ಉಪಕಥೆಗಳನ್ನೆಲ್ಲಾ ಚೆನ್ನಾಗಿ ತಿಳಿದವರು. ಅವುಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಹೊಂದಿಸುವ ಜಾಣ್ಮೆ ಅವರಲ್ಲಿದೆ.

ಇಲ್ಲಿ ಒಂದೇ ನುಡಿಯಲ್ಲಿ ಏಳು ಅವತಾರಗಳನ್ನು ಹೇಳಿರುವುದನ್ನು ಗಮನಿಸಬಹುದು. ಹರಿಸ್ತುತಿಯಲ್ಲಿ, ಬಾಲಲೀಲೆಗಳಲ್ಲಿ, ಮಂಗಳ ಆರತಿ ಹಾಡುಗಳಲ್ಲಿ ಮತ್ತೆ ಮತ್ತೆ ದಶಾವತಾರ ಸ್ತುತಿ ಮೂಡಿ ಬಂದಿದೆ. 'ಹಸಿವು ಬಹಳವಾಗುತ್ತಿದೆ ಕೇಳಮ್ಮಯ್ಯ' ಎಂಬ ಹಾಡಿನಲ್ಲಿ ೫ ನುಡಿಗಳಲ್ಲಿ ದಶಾವತಾರ ಹೇಳಿ ಬಹಳ ದಣಿದು ಬಂದಿದ್ದೇನೆ, ಹಸಿವು ಬಹಳವಾಗುತ್ತಿದೆ, ಬಿಸಿ ಬಿಸಿ ಕಡುಬು ಕಜ್ಜಾಯ ದೋಸೆ ಹುಗ್ಗಿ ಹಸನಾಗಿ ಬಡಿಸಮ್ಮ ಎಂದು ಬಾಲಕ ಕೃಷ್ಣ ಕೇಳುವ ಕಲ್ಪನೆ ಚೆನ್ನಾಗಿದೆ.

ದಶಾವತಾರದ ನಂತರದ ಸ್ಥಾನ ಶ್ರೀ ಕೃಷ್ಣನ ಬಾಲಲೀಲೆಗಳದ್ದು. ಭಾಗವತದ ದಶಮ ಸ್ಕಂಧದಲ್ಲಿ ಬರುವ ಶ್ರೀಕೃಷ್ಣನ ವಿವಿಧ ಕ್ರೀಡೆಗಳು ಯಾರ ಮನಸ್ಸನ್ನಾದರೂ ಸೆಳೆಯದೆ ಬಿಡುವುದಿಲ್ಲ ವಾತ್ಸಲ್ಯ ಭಕ್ತಿಗೆ ಅಲ್ಲಿ ವಿಪುಲ ಅವಕಾಶ.

ತೊಟ್ಟಿಲ ತೂಗುವೆ ಕೃಷ್ಣನ ತೊಟ್ಟಿಲ ತೂಗುವೆ
ಪುಟ್ಟ ಬಾಲಕರೊಳು ಪರಮ ಶ್ರೇಷ್ಠನಾದನಾ

ಎಂದು ಹಾಡಿ ಗೋಪಿ ತೊಟ್ಟಿಲ ತೂಗುತ್ತಾಳೆ. ದೈತ್ಯರನ್ನು ಕೊಲ್ಲುವುದಕ್ಕಾಗಿ ಹತ್ತಾವತಾರ ಎತ್ತಿ ಬಂದು ಬಳಲಿದ್ದೀಯಾ 'ಪವಡಿಸು ಪರಮಾತ್ಮಾ ಶ್ರೀಶಾ ಪವಡಿಸು' ಎಂದು ನಿದ್ರೆ ಮಾಡಿಸುತ್ತಾಳೆ. ಬೆಳಗ್ಗೆ ಎದ್ದ ಮೇಲೆ 'ಎರದು ಪೀತಾಂಬರ ನುಡಿಸಿದಳಾಗ ವರ ಗೋಪಿಯು ಬೇಗ; ಬಗೆ ಬಗೆ ಅಲಂಕಾರ ಮಾಡಿಸುತ್ತಾಳೆ. 'ಊದೋ ಕೊಳಲನು ಕೃಷ್ಣ ಊದೋ ಕೊಳಲನು' ಎಂದು ಗೋಪಿಯರೆಲ್ಲಾ ಬಂದು ಕೇಳಿ ಕೊಳ್ಳುತ್ತಾರೆ. ಕೃಷ್ಣನಿಗೂ ಗೋಪಿಯರಿಗೂ ಸರಸ ಸಂವಾದ ನಡೆಯುತ್ತದೆ.

ಗೋಪಿಯರು: ತರುಳರೆಲ್ಲ ಕೂಡಿಕೊಂಡು
ಕರುಗಳನ್ನೆ ಪಾಲಿಸುತಿರೆ
ಮರೆಯ ಮಾಡಿ ಕರುಗಳನ್ನು
ದುರುಳತನವು ತರವೆ ಕೃಷ್ಣ
ತಾರೊ ಕರುಗಳ ಕೃಷ್ಣ ತಾರೊ ಕರುಗಳ

ಉದಾ: ತ್ರಿಜಗದ್ವ್ಯಾಪಕ ಹರಿ, ನವರತ್ನ ಖಚಿತ ಮಾಣಿಕ್ಯದ ಮಂಟಪ. ಕೆಲವು ಹಾಡುಗಳ ನುಡಿಗಳು ಸಮಸಂಖ್ಯೆಯಲ್ಲಿವೆ. ಉದಾ: ಎಂತು ಶೋಭಿಸುತಿಹಳು ಈ ಕನ್ನಿಕೆ ಹತ್ತು ನುಡಿಗಳಿವೆ. ಕೆಲವೊಮ್ಮೆ ನುಡಿಗಳೆಲ್ಲಾ ಅಂಕಿತದೊಂದಿಗೆ ಮುಗಿದ ಮೇಲೆ ಎರಡು ಸಾಲು ಬರುತ್ತದೆ. ಉದಾ: ರಾಜೀವ ದಳ ನೇತ್ರ, ಅಷ್ಟರೊಳಗೆ ಕೃಷ್ಣ ಬಂದನೆ, ನಾನೆಲ್ಲೂ ಪೋಗಲಿಲ್ಲ ನಾರಿ ಇತ್ಯಾದಿ. ಪ್ರಾಸ ಕೂಡಾ ನಿಯಮಿತವಾಗಿ ಬರುವುದಿಲ್ಲ. ಸಾಮಾನ್ಯವಾಗಿ ಹರಿದಾಸರ ಹಾಡುಗಳು ವಿಶೇಷವಾಗಿ ಸಂಗೀತದ ಮಟ್ಟುಗಳಿಗೆ ಹೊಂದಿಕೆಯಾಗುವಂತೆ ರಚನೆಯಾಗಿದೆಯೇ ಹೊರತು ಸಾಹಿತ್ಯದ ಛಂದಸ್ಸಿಗೆ ಬದ್ಧವಾಗಿಲ್ಲ. ಹಾಗಾಗಿ ಜೀವೂಬಾಯಿಯವರು ತಮ್ಮ ರಚನೆಗಳಲ್ಲಿ ಸಾಕಷ್ಟು ಸ್ವಾತಂತ್ರ್ಯ ವಹಿಸಿರುವುದು ಕಂಡು ಬರುತ್ತದೆ.

ಜೀವೂಬಾಯಿಯವರ ಕೃತಿಗಳಲ್ಲಿ, ವೈವಿಧ್ಯ ಇದೆ. ತಾರತಮ್ಯಾನುಸಾರ ದೇವ, ದೇವತೆಗಳ, ಗುರುಗಳ ಸ್ತುತಿ ಮಾಡಿದ್ದಾರೆ. ಹರಿ ಸಂಕೀರ್ತನೆಯನ್ನು ಮೈಮರೆತು ಹಾಡಿದ್ದಾರೆ. ಗಣಪತಿ, ಕೃಷ್ಣ, ನರಸಿಂಹ, ಶ್ರೀನಿವಾಸ, ಶ್ರೀರಾಮ, ಲಕ್ಷ್ಮೀದೇವಿ, ಹನುಮ, ಭೀಮ, ಮಧ್ವ ಗುರುಗಳು ಎಲ್ಲರನ್ನೂ ಮನದಣಿಯೆ ಕೊಂಡಾಡಿ ಧನ್ಯರಾಗಿದ್ದಾರೆ.

ಹರಿಯ ದಶಾವತಾರಗಳನ್ನು ವರ್ಣಿಸುವುದು ದಾಸ ಪರಂಪರೆಯಲ್ಲಿ ಒಂದು ಸಂಪ್ರದಾಯವೇ ಆಗಿದೆ. ಜೀವೂಬಾಯಿ ಸಂದರ್ಭ ದೊರೆತಾಗಲೆಲ್ಲಾ ಬೇರೆ ಬೇರೆ ರೀತಿಯಲ್ಲಿ ಈ ವರ್ಣನೆ ಮಾಡಿದ್ದಾರೆ. ಕೆಲವೊಮ್ಮೆ ಅದು ದೀರ್ಘವಾಗಿ ಹತ್ತು ನುಡಿಗಳಲ್ಲಿ ಬಂದರೆ, ಮತ್ತೆ ಕೆಲವೊಮ್ಮೆ ಕೇವಲ ಒಂದೊಂದು ಪದದಲಿ ಅದನ್ನು ಸೂಚಿಸಿರುವುದೂ ಉಂಟು.

ವೇದ ತಂದು ಭಾರಪೊತ್ತು
ಕೋರೆ ತೋರಿ ಕರುಳ ಬಗೆದು
ಬೇಡಿ ಭೂಮಿ ದೂಡಿ ನೃಪರ
ಸಾಗರವ ಬಂಧಿಸಿದ ಭಯವೋ

ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೮–ಭಾಗ ೨

# ನಿಡಗುರುಕಿ ಜೀವೂಬಾಯಿಯವರ ಕೀರ್ತನೆಗಳು

*ಸಂಪಾದಕರು*
ಲೀಲಾವತಿ ಎಸ್.ರಾವ್

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

ಹಾಡುಗಳನ್ನು ರಚಿಸಿದ್ದಾರೆ. ಭಗವತ್ಪ್ರೇರಣೆಯಾಯಿತೆಂದರೆ ಕೀರ್ತನೆಯನ್ನು ಕಾಗದದ ಮೇಲೆ ಓದಿದಂತೆ ದಡ ದಡನೆ ಹೇಳತೊಡಗುತ್ತಿದ್ದರಂತೆ. ಅವರ ಸೋದರರು ಲಗು ಬಗೆಯಿಂದ ಕಾಗದದ ಮೇಲೆ ಪಾದಗಳನ್ನು ವಿಂಗಡಿಸಿ ಬರೆದರೆ ೩,೫,೭ ಹೀಗೆ ನುಡಿಗಳು, ಪಲ್ಲವಿ, ಅನುಪಲ್ಲವಿಗಳು ರಚಿತವಾಗುತ್ತಿದ್ದವು. ಸಾಗರಕಟ್ಟೆ ಶ್ರೀನರಹರಿ ತೀರ್ಥರ ಎದುರು ಇವರೊಮ್ಮೆ ಹಾಡಿದಾಗ ಪ್ರಮೇಯ ಬದ್ಧವಾಗಿದೆ ಎಂದು ಹೇಳಿ ಅವರು ಸಂತೋಷ ಪಟ್ಟರಂತೆ.

೩೧-೮-೧೯೮೨ ರಂದು 'ಸ್ಮರಿಸಿ ಬದುಕಿರೊ ಗುರುವರ ನರಹರಿ ಸ್ಮರಣೆ ಮರೆಯದಲೆ ಕೀರ್ತಿಸಿ ನಲಿದವರ' ಎಂದು ಹಾಡಿದ ಹಾಡೇ ಅವರ ಕೊನೆಯ ರಚನೆ.

ಅವರ ಮೊದಲ ಹಾಡು ಗುರು ಉರಗಾದ್ರಿವಾಸವಿಠ್ಠಲ ದಾಸರ ಮೇಲೆ ರಚಿತವಾಗಿದ್ದರೆ. ಕೊನೆಯ ಹಾಡು ಉರಗಾದ್ರಿವಾಸ ವಿಠ್ಠಲದಾಸರ ಪರಮಾಪ್ತ ಶಿಷ್ಯರಾದ ತಂದೆ ವೆಂಕಟೇಶ ವಿಠ್ಠಲ ದಾಸರ ಮೇಲೆ ರಚಿತವಾಗಿದೆ. ಅಂತೂ ಜೀವೂಬಾಯಿಯವರು ತಮ್ಮ ಗುರುಗಳಿಗೆ ಗುರುಕಾಣಿಕೆ ಸಲ್ಲಿಸಿ ಕೃತಾರ್ಥರಾಗಿದ್ದಾರೆ. ಶಾಲಿವಾಹನ ಶಕ ೧೯೦೫ ಶ್ರೀ ರುಧಿರೋದ್ಗಾರಿ ಸಂವತ್ಸರ ಉತ್ತರಾಯಣ ವೈಶಾಖ ಬಹಳ ಚತುರ್ದಶಿ ಗುರುವಾರ ಅಂದರೆ ೯-೬-೧೯೮೩ನೇ ಇಸವಿಯಂದು ಜೀವೂಬಾಯಿಯವರು ಇಹಲೋಕ ವ್ಯಾಪಾರವನ್ನು ಮುಗಿಸಿ ಶ್ರೀ ಹರಿಯ ಪಾದವನ್ನು ಸೇರಿದರು.

## ಕೃತಿ ಸಮೀಕ್ಷೆ

ಜೀವೂಬಾಯಿಯವರು ೧೭೦ ಕೀರ್ತನೆಗಳನ್ನು, ೧೦ ದೀರ್ಘ ಕೀರ್ತನೆಗಳನ್ನು ರಚಿಸಿದ್ದಾರೆ; ಉಗಾಭೋಗ, ಸುಳಾದಿಗಳಿಲ್ಲ, ಹಾಡುಗಳಲ್ಲಿ ಪಲ್ಲವಿ, ಅನುಪಲ್ಲವಿ, ನುಡಿಗಳನ್ನು ನಿರ್ದೇಶಿಸಿಲ್ಲ. ಉದ್ದಕ್ಕೆ ಬರೆಯಲಾಗಿದೆ. ಮಧ್ಯೆ ಮಧ್ಯೆ ಸ್ವಲ್ಪ ಜಾಗ ಬಿಟ್ಟಿರುವುದನ್ನು ನೋಡಿ ವಿಭಾಗ ಮಾಡಬೇಕು. ನಿಯಮಗಳನ್ನು ಅಷ್ಟಾಗಿ ಪಾಲಿಸಿರುವುದು ಕಂಡು ಬರುವುದಿಲ್ಲ. ಕೆಲವು ಹಾಡುಗಳಿಗೆ ಪಲ್ಲವಿಯಿಲ್ಲ.

ಪವಮಾನ ಶಾಸ್ತ್ರಗತ ನವಪ್ರಮೇಯಗಳನ್ನು
ಅವನಿಸುರರಿಂದನಿಶ ಶ್ರವಣಗೈದು
ಭವವನಧಿ ನಾವಿಕನೆ ತವನಾಮ ಸಂಸ್ಮರಣ
ದಿವರಾತ್ರಿಯಲಿ ಮಾಳ್ಪಳಿವಳನುದ್ಧರಿಸೊ ೨

ಕಾಲದೇಶಾನುಕರ್ಮ ಜಾಲದಲಿ ನಿನ್ನ ಮತ
ಲೀಲೆಗಳ ಕಂಡು ಪ್ರಫುಲ್ಲ ಮನದಿ
ಕಾಳೀಶ ಉರಗಾದ್ರಿ ವಾಸ ವಿಠ್ಠಲ ಹೃದಯ
ಮೂಲದಲಿ ನಿನ್ನ ನೋಳ್ಪ ಶೀಲ ಕರುಣಿಪುದು ३

ಹೀಗೆ ಗುರುಕರುಣೆ ಒದಗಿ ಬಂದ ಮೇಲೆ ಜೀವೂಬಾಯಿ ಅವರು ಅನೇಕ ಕೀರ್ತನೆಗಳನ್ನು, ಹರಿಕತೆಯನ್ನು ಹೋಲುವ ಹಲವು ದೀರ್ಘ ಕೀರ್ತನೆಗಳನ್ನು ರಚಿಸಿದ್ದಾರೆ. ಸಾಮಾನ್ಯವಾಗಿ ಪ್ರತಿವರ್ಷ ಯುಗಾದಿಯ ದಿನ ಒಂದು ಕೀರ್ತನೆಯನ್ನು ರಚಿಸಿ ಭಗವಂತನಿಗೆ ಅರ್ಪಿಸುವ ಪದ್ಧತಿಯನ್ನು ಇವರು ಅನುಸರಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಜೀವೂಬಾಯಿಯವರು ಹಾಡುಗಳನ್ನು ಬರೆದು ತಿದ್ದುವ ಕ್ರಮ ಇರಲಿಲ್ಲವಂತೆ. ಸ್ಫೂರ್ತಿ ಬಂದ ಕೂಡಲೇ ಕಾಗದದ ಮೇಲೆ ಒಮ್ಮೆಗೆ ಬರೆಯುವುದು. ಶ್ರೀಹರಿ ಇಚ್ಛೆಯಿಂದ ಬರೆಸಿದ, ನಾನು ಬರೆದೆ ಅಷ್ಟೆ ಬದಲಿಸಲು, ತಿದ್ದಲು ನನಗೆಲ್ಲಿಯ ಅಧಿಕಾರ? ಎಂದು ಹೇಳುತ್ತಿದ್ದರಂತೆ.

ವಯಸ್ಸಾದಂತೆ, ವಯೋಗುಣಕ್ಕೆ ತಕ್ಕಂತೆ ಅವರ ಕಣ್ಣುಗಳ ದೃಷ್ಟಿ ಕಡಿಮೆಯಾಗುತ್ತಾ ಬಂತು. ಆನಂದ ಸಂವತ್ಸರಕ್ಕಿಂತ ಹಿಂದೆ ಅವರು ಸ್ವತಃ ಕಾಗದದ ಮೇಲೆ ಬರೆಯುತ್ತಿದ್ದರು. ಆನಂದನಾಮ ಸಂವತ್ಸರದಂದು ಬಹಳ ಕಷ್ಟಪಟ್ಟು ಸೀಮೆ ಸುಣ್ಣದಲ್ಲಿ ಬಾಗಿಲ ಹಿಂದೆ ಬರೆದರಂತೆ. ಅಲ್ಲಿಂದ ಮುಂದೆ ಅವರು ಸಂಪೂರ್ಣವಾಗಿ ದೃಷ್ಟಿ ಕಳೆದುಕೊಂಡರು. ಮುಂದೆಯೂ ಅವರು

**SAMAGRA DASA SAHITYA VOLUME - 18 Part 2:**
*NidagurukiJeevubaiyavara Keerthanegalu.* Edited by Leelavathi S. Rao. Published by Sri.Y. K.Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 70+ ೫೭೭


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

ಮುದ್ರಕರು :

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

ತಮ್ಮ ಶಿಷ್ಯರಿಂದೊಡಗೂಡಿ ಹಾಸನಕ್ಕೆ ದಯಮಾಡಿಸಿದರು. ಒಂದು ಸಪ್ತಾಹ ಹಗಲಿರುಳು ಶ್ರೀ ಜಗನ್ನಾಥ ವಿಠ್ಠಲದಾಸ ಕೃತ ಶ್ರೀ ಹರಿ ಕಥಾಮೃತಸಾರದ ಬಗ್ಗೆ ಪ್ರವಚನ, ಪ್ರಮೇಯ ವಿಮರ್ಶೆ ಇತ್ಯಾದಿಗಳನ್ನು ಮಾಡಿದರು. ಜೀವೂಬಾಯಿ ಅವರಿಗೆ ಮೈಸೂರಿನಿಂದ ಅಲ್ಲಿಗೆ ಹೋಗಿ ಈ ಸಪ್ತಾಹದಲ್ಲಿ ಭಾಗಿಯಾಗುವ ಅವಕಾಶ ಒದಗಿತು. ಅಲ್ಲಿ ನಡೆಯುತ್ತಿದ್ದ ದೇವತಾ ಕಾರ್ಯಗಳಿಗೆ ಸಹಾಯಕರಾಗಿ ಇದು, ಅದು ಎಂದು ನೋಡದೆ ಸತತವಾಗಿ ದುಡಿದರು. ಇವರ ಶ್ರದ್ಧಾ, ಭಕ್ತಿ, ನಿಷ್ಠೆಗಳಿಗೆ ಮೆಚ್ಚಿದ ಶ್ರೀ ಉರಗಾದ್ರಿವಾಸ ವಿಠ್ಠಲದಾಸರು, ಶ್ರೀಹರಿಗುರುಗಳ ಪ್ರೇರಣಾನುಸಾರ ಇವರಿಗೆ 'ಶ್ರೀ ಕಮಲನಾಭ ವಿಠ್ಠಲ' ನೆಂಬ ಅಂಕಿತವನ್ನು ಉಪದೇಶಿಸಿ ಶ್ರೀಮನ್ನಾರಾಯಣ ದೇವರನ್ನು ಈ ರೂಪದಲ್ಲಿ ಚಿಂತಿಸಿ, ಆರಾಧಿಸಿರಿ ಎಂದು ಅನುಗ್ರಹ ಮಾಡಿದರು. ಪ್ರಾಯಶಃ ಅಂದಿನಿಂದಲೇ ಜೀವೂಬಾಯಿ ಅವರಿಗೆ ದೇವರ ಮಹಿಮೆಯನ್ನು ಹಾಡುವ ಶಕ್ತಿ ಬಂದಿರಬಹುದು. ಅದೇ ದಿನ 'ಕರುಣದಿಂದ ಕಾಯೋ ಎನ್ನನು ಉರಗಾದ್ರಿವಾಸವಿಠ್ಠಲ ದೇವ' ಎಂಬ ಪ್ರಥಮ ಕೀರ್ತನೆಯನ್ನು ಕಾಮವರ್ಧಿನಿ ರಾಗ, ಆದಿತಾಳದಲ್ಲಿ ಶ್ರೀ ಕಮಲನಾಭ ವಿಠ್ಠಲ ಅಂಕಿತವನ್ನು ಹಾಕಿ ರಚಿಸಿದ್ದಾರೆ. ಶ್ರೀ ಗುರುಗಳಾದ ಉರಗಾದ್ರಿವಾಸ ವಿಠ್ಠಲ ದಾಸರು ಜೀವೂಬಾಯಿ ಅವರಿಗೆ ಅಂಕಿತ ನೀಡಿದಾಗ ರಚಿಸಿದ ಕೀರ್ತನೆ ಹೀಗಿದೆ.

ಕಮಲನಾಭ ವಿಠ್ಠಲ ಕಾಯ ಬೇಕಯ್ಯ
ಶ್ರಮಜೀವಿ ಇವಳಿಗುತ್ತಮ ಗತಿಯಿತ್ತು ಪ

ಕ್ಷಣ ಸಹ ನಿನ್ನಯ ಭಕ್ತಿ ಗಣದವರ ಸೇವೆಯನು
ದಣಿಯದಲೆ ಮಾಳ್ಪ ಲಕ್ಷಣ ಶೀಲಳೋ
ಅಣು ಮಹದ್ಗತ ನಿನಗೆ ಮಣಿದು ಬಿನ್ನೈಪೆಗುಣ
ಋಣವ ಪರಿಹರಿಸಿ ತಕ್ಷಣ ಪಾಲಿಸಯ್ಯ ೧

ಸ್ವಯಂವರ ಇತ್ಯಾದಿ ಪೌರಾಣಿಕ ಪದಗಳನ್ನು ಚೆನ್ನಾಗಿ ಹಾಡಲು ಕಲಿತರು. ಮನೆಗೆ ಬಂದವರೆದುರು ಶ್ರದ್ಧೆಯಿಂದ ಹಾಡುತ್ತಿದ್ದರು. ಹಾಡುಗಳ ಅರ್ಥವನ್ನು ಬಹು ಸ್ವಾರಸ್ಯವಾಗಿ ವಿವರಿಸುತ್ತಿದ್ದರು. ಮನೆಯಲ್ಲಿದ್ದ ತಾಯಿ ಮತ್ತು ಸೋದರತ್ತೆಯ ಜೊತೆ ಅನೇಕ ವ್ರತ ನೇಮ ಉಪವಾಸಾದಿಗಳನ್ನು ನಡೆಸಿಕೊಂಡು ಬಂದು ಹಿಡಿದ ವ್ರತಗಳ ಅಂಗವಾಗಿ ಉದ್ಯಾಪನೆಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದರು. ತಂದೆ ತಾಯಿಯರ, ದೇವರ ಸೇವೆಯೆ ಇವರ ಬದುಕಿನ ಮುಖ್ಯ ಕರ್ತವ್ಯವಾಗಿತ್ತು.

ತಾಯಿಯ ಮರಣಾನಂತರ ಹಳ್ಳಿಯನ್ನು ಬಿಟ್ಟು ತಂದೆಯೊಂದಿಗೆ ಬೆಂಗಳೂರು, ಮೈಸೂರುಗಳಲ್ಲಿ ಅಣ್ಣ, ತಮ್ಮಂದಿರ ಮನೆಗಳಲ್ಲಿ ವಾಸ ಮಾಡಿದರು. ಕೆಲಕಾಲದ ಮೇಲೆ ತಂದೆಯನ್ನು ಕಳೆದುಕೊಂಡು ತುಂಬಾ ಸಂಕಟಪಟ್ಟರು. ಆಗ ತೀರ್ಥಯಾತ್ರೆಗಳ ಕಡೆಗೆ ಅವರ ಮನಸ್ಸು ತಿರುಗಿತು. ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದರು.

ಬೆಂಗಳೂರು, ಮೈಸೂರುಗಳಲ್ಲಿ ಅನೇಕ ಕಡೆ ಹರಿಕತೆ, ಪುರಾಣವಾಚನ, ಭಾಗವತ ಸಪ್ತಾಹ ಇತ್ಯಾದಿಗಳು ನಡೆಯುತ್ತಿದ್ದವು. ಇದು ಜೀವುಬಾಯಿಯವರ ಪಾಲಿಗೆ ವರವಾಗಿ ಪರಿಣಮಿಸಿತು. ಪುಸ್ತಕ ಸಹಾಯವಿಲ್ಲದೆ ಹರಿದಾಸರ ನೂರಾರು ದೇವರ ನಾಮಗಳನ್ನು ನಿರರ್ಗಳವಾಗಿ ಹಾಡುವ ಅವರ ಸಾಮರ್ಥ್ಯವನ್ನು ಕಂಡವರು ಮೆಚ್ಚಿ ತಲೆದೂಗುತ್ತಿದ್ದರು. ಜೀವಮ್ಮನವರ ಸ್ವಭಾವಕ್ಕೆ, ಆಸಕ್ತಿಗೆ ಸರಿಹೊಂದುವಂತಹ ಕೆಲ ಸ್ನೇಹಿತರು ಅವರಿಗೆ ದೊರೆತರು. ಇವರೆಲ್ಲರು ಸೇರಿ ಏಕಾದಶಿ, ಗೋಕುಲಾಷ್ಟಮಿ, ಋಷಿ ಪಂಚಮಿ, ಮಹಾಶಿವರಾತ್ರಿ ಮುಂತಾದ ಪರ್ವದಿನಗಳಲ್ಲಿ ಉಪವಾಸ, ಜಾಗರಗಳನ್ನು ಶ್ರದ್ಧಾ ಭಕ್ತಿಗಳಿಂದ ನಡೆಸುತ್ತಿದ್ದರು.

ಹೀಗೆ ದಿನಗಳು ಸಾಗುತ್ತಿದ್ದಾಗ ಜೀವಮ್ಮನಿಗೆ ದೈವ ಕೃಪೆ ತಾನಾಗಿ ಒದಗಿ ಬಂತು. ತುಮಕೂರಿನ ಬಳಿಯ ದೇವರಾಯನ ದುರ್ಗದಲ್ಲಿದ್ದ ಅಪರೋಕ್ಷ ಜ್ಞಾನಿಗಳು ಶ್ರೀ ತಂದೆ ಮುದ್ದುಮೋಹನ ವಿಠ್ಠಲದಾಸರ (ಶ್ರೀ ಸುಬ್ಬರಾಯದಾಸರು) ಶಿಷ್ಯರಾದ ಶ್ರೀ ಉರಗಾದ್ರಿವಾಸ ವಿಠ್ಠಲದಾಸರು (ಚಿತ್ರದುರ್ಗದ ಶ್ರೀನಿವಾಸರಾಯರು)

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ರಾಮಚಂದ್ರರಾಯರು ಮಗಳಿಗೆ ದೇವರನಾಮಗಳನ್ನು ಹಾಡಲು ಅಭ್ಯಾಸ ಮಾಡಿಸಿದರು. ಸಂಪ್ರದಾಯಸ್ಥರೂ ಆಚಾರಶೀಲರೂ ಆಗಿದ್ದ ತಾಯಿ ಕೂಡಾ ಅನೇಕ ಹಾಡುಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು.

ಹುಡುಗಿ ಮೈನೆರೆಯುವ ಮೊದಲೇ ಮದುವೆ ಮಾಡುತ್ತಿದ್ದ ಆ ಕಾಲದ ರೂಢಿಯಂತೆ ಜೀವಮ್ಮನಿಗೆ ಕೇವಲ ಹತ್ತು ವರ್ಷಕ್ಕೇ ಸೋದರಮಾವನಿಗೆ ಕೊಟ್ಟು ವಿವಾಹ ಮಾಡಿದರು. ವಿಧಿ ವಿಲಾಸ ! ಅರಳುವ ಮೊದಲೇ ಜೀವು ಬಾಯಿಯ ಲೌಕಿಕ ಬದುಕು ಮುರುಟಿ ಹೋಯಿತು. ಹನ್ನೊಂದನೇ ವಯಸ್ಸಿಗೆ ವೈಧವ್ಯ ಪ್ರಾಪ್ತಿ. ಮದುವೆ, ವಿಧವೆ, ಮಡಿ ಇವುಗಳ ಅರ್ಥ ತಿಳಿಯುವ ಮೊದಲೇ ಮಂಡೆ ಬೋಳಾಗಿ, ಕೆಂಪು ಸೀರೆಯುಟ್ಟು, ಮಡಿ ಹುಡಿ ಎಂದು ಮೂಲೆಯಲ್ಲಿ ಕೂತಾಗಿತ್ತು ! ಹುಟ್ಟಿದ ಮನೆಯಲ್ಲಿಯೇ ಶಾಶ್ವತವಾಗಿ ನೆಲೆಸಬೇಕಾಯಿತು.

ದೊಡ್ಡವರಾಗುತ್ತಾ ಬಂದಂತೆಲ್ಲಾ ಮನೆಕೆಲಸಗಳು, ದುಡಿಮೆಗಳು ಹೆಚ್ಚಾದವು. ಗೋಕುಲದಂತಹ ಮನೆ, ಬರುವವರು ಹೋಗುವವರು, ಅವರೆಲ್ಲರ ಆದರೋಪಚಾರಗಳು, ಹೆಣ್ಣು ಮಕ್ಕಳ ಬಸಿರು, ಬಾಣಂತನ ಪ್ರತಿಯೊಂದರಲ್ಲೂ ಜೀವಮ್ಮ ಅತ್ಯುತ್ಸಾಹದಿಂದ, ಹಗಲು ರಾತ್ರಿಯೆನ್ನದೆ ದುಡಿದರು. ಮನೆಯಲ್ಲಿ ೧೫-೨೦ ದನಗಳು ಬೇರೆ. ಗೋಸೇವೆಯೇ ಹರಿಸೇವೆ ಎಂದು ಭಾವಿಸಿ, ಅವುಗಳ ಮೇವು, ನೀರು, ಹಟ್ಟಿಯ ಕೆಲಸವನ್ನೆಲ್ಲಾ ದಣಿವಿಲ್ಲದ ಶ್ರದ್ಧೆಯಿಂದ ಮಾಡಿದರು.

ಹಳ್ಳಿಯ ಬದುಕು. ಒಬ್ಬರ ಸಂಗವಿಲ್ಲ, ಬಿಡುವು ಸಿಕ್ಕಿದಾಗ ಕಥೆ ಪುಸ್ತಕಗಳನ್ನು ಓದಿದರು. ಆದರೆ ಅದೇಕೋ ಅವು ರುಚಿಸಲಿಲ್ಲ. ಸ್ವತ: ಕತೆ ಬರೆಯುವ ಪ್ರಯತ್ನ ಮಾಡಿದರು. 'ನಿರುಪಮಾ' 'ತಾರಾಮುಖಿ' ಅಥವಾ 'ಸುಂದರರಾಜ' ಇತ್ಯಾದಿ ಕೆಲವು ತಮಾಷೆಯಾಗಿ ಕಥೆಗಳನ್ನು ಬರೆದರಾದರೂ ಅವು ಅವರಿಗೆ ಹಿತವಾಗಲಿಲ್ಲ. ಕ್ರಮೇಣ ರಾಮಾಯಣ, ಮಹಾಭಾರತ, ಭಾಗವತಗಳನ್ನು ಓದತೊಡಗಿದರು. ಇವುಗಳಲ್ಲಿ ಅಭಿರುಚಿ ಹೆಚ್ಚಾಯಿತು. ಇದರ ಜೊತೆಗೆ ದೊಡ್ಡ ದೊಡ್ಡ ಹಾಡುಗಳಾದ ಶ್ರೀನಿವಾಸ ಕಲ್ಯಾಣ, ಹನುಮದ್ವಿಲಾಸ, ದ್ರೌಪದೀ

ಗುಲ್ಲು ಮಾಡದೆ ಕವಣೆ ಕಲ್ಲಿಂದ ಕುಂಭ ಒಡೆಯೆ
ಚಲ್ಲಿ ಪಾಲ್ಮೊಸರು ಸೂರೆ ನಲ್ಲೆ ನೀ ನೋಡೆಂಬರು ೪

ಮತ್ತೆ ಕೇಳಮ್ಮ ಯಶೋದೆ ನಾವೆಲ್ಲ ಆಣಿ
ಮುತ್ತು ಪೋಣಿಸುತಿರಲು
ಸುತ್ತ ಮುತ್ತಲು ನೋಡಿ ಮುತ್ತು ಸೂರೆ ಮಾಡಿದ
ಕರ್ತೃ ಶ್ರೀ ಕಮಲನಾಭ ವಿಠ್ಠಲನ ನೋಡೆಂಬರು ೫

## ೩೩

ಮರೆತು ಹೋದೆನೊ ದೇವ ರಂಗಯ್ಯ ರಂಗ
ಸಿರಿದೇವಿ ರಮಣನೆ ಪರನೆಂದು ತಿಳಿಯದೆ ಪ

ನೀರೊಳು ಮುಳುಗುತ್ತ ಮೀನಮತ್ಸ್ಯನು ಎಂದು
ವೇದವ ತಂದಿತ್ತೆ ದೇವೇಶನೆ
ವಾರಿಧಿಶಯನನೆ ವಾರಿಜಾಕ್ಷನು ಎಂದು
ಸಾರಸಾಕ್ಷನ ಗುಣ ಸ್ಮರಿಸದೇ ಮನದಲಿ ೧

ಬೆಟ್ಟ ಬೆನ್ನಿಲಿ ಪೊತ್ತು ಪೊಕ್ಕು ನೀರೊಳು ಬೇಗ
ಭಕ್ತರನುದ್ಧರಿಸಿದ ದೇವನ
ಪೃಥ್ವಿಯ ಕೋರೆಯಿಂದೆತ್ತಿ ಅಸುರನ ಕೊಂದ
ಸಿಸ್ತು ತೋರಿದ ಪರವಸ್ತುವ ಸ್ಮರಿಸದೆ ೨

ಘುಡು ಘುಡಿಸುತ ಬಂದು ಒಡಲ ಸೀಳಲು ಖಳನ
ಅಡವಿ ಮೃಗವು ಎಂದು ಬೆರಗಾದೆನೊ
ಹುಡುಗನಂದದಿ ಪೋಗಿ ಪೊಡವಿಪಾಲಕನ ಬೇಡಿ
ಕೊಡಲಿಯ ಪಿಡಿಯುತ್ತ ತಾಯತರಿದನ ಸ್ಮರಿಸದೆ ೩

ನಾರಿಯನರಸುತ ವನವ ಚರಿಸಿದಿ
ನಾರಿಚೋರನ ಕೊಂದೆ ವಾನರ ಸಹಿತ

ಕಮಲಸಂಭವ ಪಿತನೆ ಕಮಲಜಾತೆಯ ರಮಣ
ವಿಮಲ ಮುನಿಗಳ ಹೃದಯ ಕಮಲ ಶೋಭಿತನೆ
ಕಮಲದಳನೇತ್ರನೆ ಕಮಲನಾಭ ವಿಠ್ಠಲ
ಕಮನೀಯ ರೂಪ ನಿನ್ನ ಮಹಿಮೆ ನೂತನವೊ ೩

## ೧೯

ಪವಡಿಸು ಪರಮಾತ್ಮಾ ಶ್ರೀ ಶ್ರೀಶಾ
ಪವಡಿಸು ಪರಮಾತ್ಮಾ ಪ

ಪರಮ ಭಕ್ತರನು ಪೊರೆಯುವ ದೇವನೆ ಅ.ಪ

ರನ್ನಮಂಟಪದೊಳು ಕನ್ನಡಿಯಂದದಿ
ಸ್ವರ್ಣವರ್ಣದಲಿಹ ಪನ್ನಂಗ ಕಾದಿಹ ೧

ಸುತ್ತಲು ತುಂಬುರರು ನಾರದರು ಸ್ತೋತ್ರವ ಮಾಡಿ
ಅತ್ಯಂತ ಹರುಷದಿ ಚಿತ್ತೈಸೆಂದೆನುವರು ೨

ಥಳಥಳಿಸುವ ದಿವ್ಯತಾರೆಗಳಂದದಿ
ಲಲನೆ ಶ್ರೀ ಭೂದೇವಿಯರು ಸೇವಿಪರು ನಿನ್ನ ೩

ವೇದವ ಕದ್ದನ ಭೇದಿಸಿ ಅಜನಿಗೆ
ವೇದವ ತಂದಿತ್ತು ಆದರಿಸಿದ ದೇವ ೪

ಮುಳುಗಿದ ಗಿರಿಯನು ಧರಿಸಿ ಬೆನ್ನಲಿ ಬೇಗ
ಸುರರಿಗೆ ಅಮೃತವ ಕುಡಿಸಿದ ಮಾಧವ ೫

ಸುರಮುನಿಗಳಿಗೆಲ್ಲಾ ಅಭಯವ ನೀಡುತ
ವರಹ ರೂಪ ತಾಳಿ ಬಳಲಿ ದಣಿದು ಬಂದಿ ೬

# ಪ್ರಸ್ತಾವನೆ

## ಜೀವೂಬಾಯಿ ಅವರ ಜೀವನ ವಿಚಾರ

ನಿಡಗುರಕಿ ಎಂಬುದು ಕೋಲಾರ ಜಿಲ್ಲೆಯ, ಚಿಂತಾಮಣಿ ತಾಲ್ಲೂಕಿನ ಒಂದು ಹಳ್ಳಿ. ಒಳ್ಳೆಯ ಆಚಾರಶೀಲರಾಗಿ, ಚೆನ್ನಾಗಿ ಬಾಳಿ ಬದುಕಿದ ಹಿರಿಯ ಮನೆತನದವರ ಮನೆಯೊಂದು ಆ ಗ್ರಾಮದಲ್ಲಿ ಪ್ರತ್ಯೇಕವಾಗಿತ್ತು. ಇದರಲ್ಲಿ ಶಾನುಭೋಗರಾಗಿದ್ದ ದೇಶಮುಖ ರಾಮಚಂದ್ರರಾಯರು ಮತ್ತು ಇವರ ಪತ್ನಿ ರಮಾಬಾಯಿಯವರು ವಾಸವಾಗಿದ್ದರು. ಇವರ ನಾಲ್ಕನೇ ಪುತ್ರಿಯಾಗಿ ಶಾಲಿವಾಹನ ಶಕ ೧೮೧೯ನೇ ಹೇವಿಳಂಬಿ ನಾಮ ಸಂವತ್ಸರ ಕಾರ್ತೀಕ ಬಹುಳ ನವಮಿ ಗುರುವಾರ ಅಂದರೆ ೧೮೯೭ ನವಂಬರ್ ೧೮ ಗುರುವಾರದಂದು ಜೀವೂಬಾಯಿ ಅಥವಾ ಜೀವಮ್ಮ ಜನಿಸಿದರು.

ಮನೆಯಲ್ಲಿ ಸದಾ ನಡೆಯುತ್ತಿದ್ದ ದೇವರ ಪೂಜೆ, ವ್ರತನೇಮ ಹೋಮಗಳು ಬಾಲಕಿಯ ಮೇಲೆ ಗಾಢ ಪ್ರಭಾವ ಬೀರಿದವು. ಜೊತೆಗೆ ಊರಿನ ಸುಂದರ ಬೆಟ್ಟ, ದೊಡ್ಡ ದೊಡ್ಡ ಹುಣಸೆ ಮರಗಳು ಆಶ್ಚರ್ಯವುಂಟು ಮಾಡಿ, ಶ್ರೀಹರಿಯ ಸೃಷ್ಟಿ ಶಕ್ತಿಯ ಬಗ್ಗೆ ಆಲೋಚಿಸುವಂತೆ ಮಾಡುತ್ತಿದ್ದವು. ಪ್ರಾಯಶಃ ಬಾಲ್ಯಕಾಲದಲ್ಲಿ ಕಂಡುಂಡ ಹುಣಸೆಮರ, ಹುಣಸೆಕಾಯಿ, ಹುಣಸೆ ಹಣ್ಣುಗಳು 'ಆ ಹಣ್ಣು ಈ ಹಣ್ಣು ನೆನಸಿ ಫಲವೇನೆ, ಈ ಹುಣಸೇ ಹಣ್ಣಿಗೆ ಸಮ ಬಾಹೋದೇನೆ' ಎಂಬ ಹಾಡು ರಚಿಸಲು ಪ್ರೇರಣೆ ನೀಡಿರಬೇಕು.

ನಿಡಗುರಕಿ ಸಣ್ಣ ಹಳ್ಳಿ, ಪಾಠಶಾಲೆಯಿರಲಿಲ್ಲ. ಮನೆಯಲ್ಲಿ ತಂದೆಯವರೇ ಮಗಳಿಗೆ ಓದು, ಬರಹ ಕಲಿಸಿದರು. ಸ್ವತಃ ಪಿಟೀಲು ವಿದ್ವಾಂಸರಾಗಿದ್ದ

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಪರಿವಿಡಿ

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯುದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು–ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ–ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ–ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

ಕವಿಜನ ಪ್ರಿಯನ ಕಮನೀಯ ರೂಪನ
ಕಮಲನಾಭವಿಠ್ಠಲನ ಪಾಡುವ
ಕಮಲಸಖನ ಸೋಲಿಸುವ ಮುಖಕಾಂತಿಯ
ಕಮಲಾಕ್ಷಿಯರಸನ ಪೊಗಳುವ ಸುಜನರು ೧೫

## ೩೨

ಬ್ಯಾಡೋ ಒಬ್ಬರ ಮನೆಗೆ ನೀ ಪೋಗ
ಬ್ಯಾಡೋ ಒಬ್ಬರ ಮನೆಗೆ ಪ

ಗಾಡಿಕಾರನೆ ಕೃಷ್ಣ ಚಾಡಿ ಮಾತನು ಕೇಳಿ
ಗಾಡನೆ ಕಿವಿಮುಚ್ಚಿ ಓಡಿಸಿದೆ ಗೋಪಿಯರ ಅ.ಪ

ಕಟ್ಟಿದ್ದ ತುರುಕರುಗಳ ಬಿಚ್ಚಿ ಪೋಗುವದಿದು
ನಿಶ್ಚಯವೆಂದು ಪೇಳ್ವರೊ
ಸ್ವಚ್ಛ ಕರುಗಳ ಕಣ್ಣುಮುಚ್ಚಿ ಪಾಲೆಲ್ಲ ಕುಡಿದ
ಅಚ್ಯುತನಿಗೆ ಬುದ್ಧಿ ಮತ್ತೆ ನೀ ಪೇಳೆಂಬರು ೧

ಮಕ್ಕಳೆಲ್ಲರು ಕಯ್ಯೊಳು ಬಟ್ಟಲಿ ಅವ–
ಲಕ್ಕಿಯ ತಿನ್ನುತಿರಲು
ಫಕ್ಕನೆ ಬಡಿಯೆ ದಿಕ್ಕು ದಿಕ್ಕಿಗೆ ಚಲ್ಲೆ
ಬಿಕ್ಕಿ ಬಿಕ್ಕಿ ಅಳುತಾರೆ ಗೋಪಕ್ಕ ನೀನೋಡೆಂಬರು ೨

ವಾಸುದೇವಗೆ ಹರಕೆಯ ಮಾಡಿ ನವ–
ನೀತ ಮೀಸಲು ಮಾಡಿರೆ
ಮೀಸಲಳಿದು ಕೋತಿ ಮಾರ್ಜಾಲಗಳಿಗುಣಿಸಿ
ನೀತಿ ಪೇಳುವ ಶ್ರೀನಾಥ ನೋಡೆಂಬರು ೩

ಗೊಲ್ಲ ಬಾಲಕಿಯರೆಲ್ಲ ಪಾಲ್ಮೊಸರು ಮಾರೆ
ಮೆಲ್ಲನೆ ಪೋಗುತಿರಲು

ಕಂದನಿಗಾಗಿ ದೊಡ್ಡ ಕಂಬದಿಂದುದಿಸಿ ಖಳನ
ಕೊಂದು ಕರುಳ ವನಮಾಲೆ ಧರಿಸಿ ದಣಿದಿ ೭

ಮೂರಡಿ ಭೂಮಿಯ ಬೇಡಿ ಬಲೀಂದ್ರನ
ದೂಡಿ ಪಾತಾಳಕೆ ಬಹಳ ಬಳಲಿ ಬಂದಿ ೮

ಭೂಮಿ ಪಾಲಕರನ್ನು ಸೋಲಿಸಿ ಬಾರಿ ಬಾರಿ
ವಾರಿಜಾಕ್ಷ ಶ್ರೀರಾಮರಿಗೊಲಿದೆಯೊ ೯

ಸೇತುವೆಯನ್ನು ಕಟ್ಟಿ ದೂರ್ತರಾವಣನ ಕುಲವ
ಘಾತಿಸಿ ಕೊಂದ ರಘುನಾಥನೆ ಬಳಲಿದೆ ೧೦

ವಸುದೇವ ಕಂದನೆ ಶಿಶುರೂಪಿನಿಂದಲಿ
ಅಸುರೆ ಪೂತಣಿ ಅಸುಹೀರಿ ಬಳಲಿ ಬಂದಿ ೧೧

ತಿದ್ದಿ ತ್ರಿಪುರಾಸುರರ ಮರ್ದಿಸಿ ಸುಜನರಿಗೆ
ಮುದ್ದು ತೋರಿದ ಸುಪ್ರಸಿದ್ಧ ಮೂರುತಿ ಬೇಗ ೧೨

ಕರದಿ ಖಡ್ಗವ ಧರಿಸಿ ಸಿರದಿ ಕಿರೀಟ ಹೊಳೆಯೆ
ಇಳೆಯ ಮನುಜರಿಗೆಲ್ಲ ಸುಲಭನಂದದಿ ತೋರ್ಪಿ ೧೩

ಮಂಗಳಚರಿತ ವಿಹಂಗವಾಹನ ಸುರ
ಗಂಗೆಯಪಿತ ಸಾಧುಸಂಗವಂದಿತ ದೇವ ೧೪

ಗರುಡಗಮನ ಕೃಷ್ಣ ಉರಗನ್ಹಾಸಿಗೆಯೊಳು
ಸಿರಿದೇವಿ ಸಹವರ ಕಮಲನಾಭ ವಿಠ್ಠಲ ೧೫

## ೨೦

ಬಾರಯ್ಯ ಶ್ರೀ ಶ್ರೀನಿವಾಸ ಭಕ್ತವತ್ಸಲ ಸ್ವಾಮಿ
ಬಾಗಿ ನಮಿಸುವೆನು ಭಾಗವತರ ಪ್ರಿಯ ಪ

ಬಾರೋ ಭಕುತರ ಭವವಿಮೋಚನ
ಬಾರೊ ದ್ರೌಪದಿ ಮಾನ ಸಂರಕ್ಷಣ
ಬಾರೊ ಧ್ರುವ ಪ್ರಹ್ಲಾದ ಪಾಲಕ
ಬಾರೋ ಗಜರಾಜೇಂದ್ರ ವರದ ಅ.ಪ

ಕಾಲಲಂದುಗೆ ಗೆಜ್ಜೆ ಘಲುಘಲುರೆನುತಲಿ
ಕಾಲಪಾಡಗರುಳಿ ಕಾಲಪೈಜನಿಸರ
ಕಾಲಲ್ಲಿ ಅಸುರರ ಧೂಳಿ ಮಾಡಿದ ದಿವ್ಯ
ಕಾಲಿಗೆರಗುವೆನು ಕಾಯೊ ಶ್ರೀ ಹರಿ ಶೌರೆ
ಕಾಲಿನಲಿ ಶಿಲೆ ನಾರಿಯಾದಳು
ಕಾಳಿಮದ ನಿರ್ಮೂಲವಾಯಿತು
ಕಾಲಿನಲಿ ಗಂಗೆಯು ಜನಿಸಿದಳು
ಕಾಲು ಪಾರ್ಥನೆ ರಥದಿ ಮೆರೆಸಿದೆ ೧

ಎಡಬಲದಿ ನಿನ್ನ ಮಡದೇರಿಂದೊಪ್ಪುತ
ತಡಮಾಡದಲೆ ಬಾರೊ ಮೃಡಸಖನೆ
ಉಡುಪ ಮುಖನೆ ನಿನ್ನ ಅಡಿಗೆರಗುವರಯ್ಯ
ತಡಮಾಡದಲೆ ತಾಳಮೇಳ ವಾದ್ಯಗಳಿಂದ
ಬಿಡದೆ ಶ್ವೇತ ಛತ್ರಚಾಮರ
ಎಡಬಲದಿ ನಿನ್ನ ಸ್ತುತಿಪ ಭಕ್ತರ
ಕಡುಸ್ವರದ ವಾದ್ಯ ವೇದ ಘೋಷಣೆ
ಬಿಡದೆ ಮಾಳ್ಪರೊ ಕಡಲೊಡೆಯನೆ ೨

ಕಮಲಸಂಭವನಯ್ಯ ಕಮಲಜಾತೆಯ ಪ್ರಿಯ
ಕಮಲ ಪೊಕ್ಕಳಲಿ ಪಡೆದಾತನೆ
ಕಮಲದಳಾಕ್ಷನೆ ಕಮನೀಯ ರೂಪನೇ
ಕಮಲಾಕ್ಷಿಯೊಡಗೂಡಿ ಕರುಣದಿ ಬಾರಯ್ಯ
ಕಮಲಮಲ್ಲಿಗೆ ಮಳೆಯ ಕರೆವರು

ವಕ್ಷ ಸ್ಥಳದಲ್ಲಿ ಶ್ರೀ ಲಕ್ಷ್ಮಿಯ ನೋಡುವ
ಹಸ್ತದ ಆಭರಣಂಗಳ ನೋಡುವ
ಮುತ್ತಿನ ಭುಜ ಕೀರ್ತಿ ರತ್ನದ್ವಾರಗಳಿಂದ
ಒಪ್ಪುವ ಉರದಿ ಶ್ರೀವತ್ಸನ ಸ್ತುತಿಸೆ ೯

ಕೋಟಿ ಸೂರ್ಯರ ಕಾಂತಿ ಸೋಲಿಪ ನಗುಮುಖ
ಲಲಾಟದಿ ಕಸ್ತುರಿ ತಿಲಕ ಒಪ್ಪಿರಲು
ಮಾಟದ ಕರ್ಣಕುಂಡಲಗಳು ಹೊಳೆಯುತ್ತ
ನೋಟದಿ ಜಗವ ಮೋಹಿಪ ದೇವನನು ನೋಡೆ ೧೦

ಅಂದದ ಮುಗುಳು ನಗೆಯು ದಂತ ಪಂಕ್ತೆಯು
ಸುಂದರ ಪಾದ ಕದಪುಗಳಂದವು
ಇಂದ್ರ ನೀಲದಮಣಿ ಖಚಿತ ಕಿರೀಟದ
ಮಂದಹಾಸದ ನಗೆಮುಖ ನೋಡುವ ೧೧

ಕಡೆಗಣ್ಣ ನೋಟದಿ ಜಗವ ಸೃಷ್ಟಿಪದೇವ
ಖಗವಾಹನನು ಸಂರಕ್ಷಿಪ ಲೋಕವ
ಅಗಣಿತ ಮಹಿಮ ಅತಿಶಯದಿ ಲಯವ ಮಾಳ್ಪ
ಸುಗುಣ ಸುಂದರನ ಗುಣ ಪೊಗಳುವ ಜನರು ೧೨

ಸಕಲ ಸದ್ಗುಣ ಭರಿತ ನಿಖಿಳ ವ್ಯಾಪಕ ಕೃಷ್ಣ
ಶುಕಮುನಿ ವಂದಿತ ದಿವ್ಯ ಚರಣನ
ರುಕುಮಿಣಿ ಅರಸನ ಭಕುತರ ಪೋಷನ
ಸಖ್ಯದಿಂದ ಪ್ರಿಯನ ನೋಡುವ ಸುಜನರು ೧೩

ಅನಿರುದ್ಧ ದೇವ ಶ್ರೀ ಪ್ರದ್ಯುಮ್ನ ಮೂರ್ತಿಯ
ಸಂಕರುಷಣ ವಾಸುದೇವೇಶನ
ನಾರದ ವಂದ್ಯ ನವನೀತ ಚೋರನ
ನಾರಾಯಣನ ನಾಮ ಸ್ಮರಿಸುವ ಸುಜನರು ೧೪

ಪದಕ ಮುತ್ತಿನ ಸರಗಳ್ವೊಳೆಯುತ ವೈಜಯಂತಿ ಮಾಲೆ
ಸರಿಗೆ ಏಕಾವಳಿಗಳೊಲಿಯುತ
ಪದುಮನಾಭ ನಿನಗೆ ದಿವ್ಯ
ಮುದದಿ ಕೌಸ್ತುಭ ಮಾಲೆ ಹೊಳೆಯೆ
ಯದುಕುಲೇಶ ಉಡುಪಿವಾಸ
ಉದದಿ ಶ್ರೀಶ ಉದ್ಧವ ಸಖನೆ ೪

ಸೋಮಸೂರ್ಯರ ಕಾಂತಿ ಸೋಲಿಪ ಮುಂಗುರುಳು ಮುಖವು
ಕಾಮಜನಕ ಕಮಲಲೋಚನ
ಹೇಮಮಣಿ ಕಿರೀಟಕುಂಡಲ
ಪ್ರೇಮತೋರ್ವ ಫಣಿಯ ತಿಲಕ
ಶ್ರೀ ಮಹೀಶ ಶ್ರೀಶನೆ ಶ್ರೀ–
ಕಮಲನಾಭ ವಿಠ್ಠಲ ಒಲಿವ ೫

## ೨೫

ಬಾರೋ ಮನ ಮೋಹನ
ಭಾಮೆ ರುಕ್ಮಿಣಿ ಸತ್ಯಭಾಮೆಯರಸ ಬೇಗ ಪ

ಯಮುನಾ ತೀರದಿ ಮುರಳಿಯ ನುಡಿಸಲು
ಪ್ರಮದೇರು ಗೋಪ್ಯಗಳು ಮರುಳಾಗಿರಲು
ಮಮತೇಲಿ ಸಲಹಿದ ಚಲುವ ಕೃಷ್ಣನೆ ಬೇಗ ೧

ಗೋಪಿಯ ಕಂದ ಶ್ರೀ ಗೋಪಾಲನೆ
ಗೋವರ್ಧನೋದ್ಧಾರಿ ಶ್ರೀ ಕೃಷ್ಣನೆ
ಗೋಪಿಕಾಲೋಲ ಶ್ರೀ ಗೋಪಾಲ ಕೃಷ್ಣ ಬೇಗ ೨

ಕಮಲ ಸಂಭವನಯ್ಯ ಕಮಲಾಪತೆ
ಕಮಲಜಾತೆಯ ಪ್ರಿಯ ಪೊರೆ ಶ್ರೀಪತೆ
ಕಮಲ ಪತ್ರಾಕ್ಷ ಶ್ರೀ ಕಮಲನಾಭ ವಿಠ್ಠಲ ೩

ಭೇರಿ ವಾದ್ಯಗಳೆಲ್ಲ ಮೊಳಗಲು
ನಾರಿ ರುಕ್ಮಿಣಿ ಭಾಮೆ ಸಹಿತ ಅ.ಪ

ಸುರರು ಅಸರರು ಕೂಡಿ ಶರಧಿಯ ಮಥಿಸಲು
ಭರದಿ ಪುಟ್ಟಲು ಸುಧೆಯು
ಪರಮ ಹರುಷದಿಂದ ದೊರಕಿತಮೃತವೆಂದು
ಅಸುರರೆಲ್ಲರು ಬರಲು
ಬೆರಗಾಗಿ ಸುರರೆಲ್ಲ ಉಪಾಯವನರಿಯದೆ
ಗಗನ ನೋಡುತಿರಲು
ತ್ವರದಿ ಶ್ರೀಹರಿ ಅವರ ನೋಡುತ
ಪರಿಪರಿಯ ಆಭರಣ ಪೀತಾಂ–
ಬರಗಳಿಂದಲಂಕರಿಸಿ ಸುಂದರ
ತರುಣಿ ರೂಪವ ಭರದಿತಾಳಿದೆ ೧

ಹರಿಯ ಸ್ತ್ರೀರೂಪವ ಪರಶಿವ ಸ್ಮರಿಸುತ
ಮರಳಿ ನೋಡಲಪೇಕ್ಷಿಸೆ
ಪರಿ ಪರಿ ಪ್ರಾರ್ಥಿಸೆ ಪರಮಾತ್ಮ ನುಡಿದನು
ಇದುತರವಲ್ಲೆನುತ
ಉರಗ ಭೂಷಣನ ಪ್ರಾರ್ಥನೆ ಸಲಿಸುವೆನೆಂದು
ತರುಣಿಯಾದನು ಹರಿಯು
ಪರಮಸೂಕ್ಷ್ಮದ ವಸನ ವಡ್ಯಾ–
ಣಗಳಲಂಕರಿಸುತ್ತ ವನದೊಳು
ಚರಿಸುತಿರೆ ಹರ ಬೆರಗಾಗಿ ಹಿಂದೋ–
ಡುತಲಿ ಬರೆ ಮರೆಯಾದ ದೇವನೆ ೨

ಹಿಂದೆ ದೈತ್ಯನು ಬಹುಚಂದದಿ ತಪಗೈದು
ಕಂದುಗೊರಳನ ಮೆಚ್ಚಿಸೇ
ಬಂದನಾಗಲೇ ಶಂಭು ಇಂದುವರ ಬೇಡೆನಲು
ವಂದಿಸಿ ಬೇಡಿದ ವರವ ತಾನು